# ಹೊಸತು




ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಮಹಾಂತೇಶ ದೊಡ್ಡಮನಿ, ಸುನಿಲ್ ಮಿಶ್ರಾ, ಸುನೀಲ ಪಾಟೀಲ, ನಾಮದೇವ ಕಾಗದಗಾರ, ಗೋಪಿ, ಜಿ. ಎಂ. ಬೊಮ್ಮನಳ್ಳಿ, ಗೀತಾಶಾಸ್ತ್ರಿ, ಎನ್. ಆರ್. ಹೆಗಡೆ

**ಮುಖಪುಟ :** ದೇವಿಪ್ರಸಾದ್ ಚಟ್ಟೋಪಾಧ್ಯಾಯ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು

ಭಾಜಪ ನೇತೃತ್ವದ ಎನ್‌ಡಿಎ ಸರಕಾರದ ಅಡಿಯಲ್ಲಿ ಈಗ ಎತ್ತರದ ಪ್ರತಿಮೆಗಳ ಸ್ಥಾಪನೆಯ ಯುಗ ಪ್ರಾರಂಭವಾಗಿರುವಂತೆ ತೋರುತ್ತದೆ. ಅಕ್ಟೋಬರ್ ತಿಂಗಳ ೩೧ರಂದು ಪ್ರಧಾನಿ ಮೋದಿ ೧೮೨ ಮೀಟರು ಎತ್ತರದ ಸರ್ದಾರ್ ವಲ್ಲಭಭಾಯಿ ಪಟೇಲ್ ಅವರ ಮಿಶ್ರಲೋಹದ ಪ್ರತಿಮೆಯನ್ನು ಅನಾವರಣಗೊಳಿಸಿ ದೇಶಕ್ಕೆ ಸಮರ್ಪಿಸಿದರು. ಪ್ರಪಂಚದಲ್ಲೇ ಅತಿ ಎತ್ತರದ ಪ್ರತಿಮೆ ಇದಾಗಿದೆ. ಅಮೆರಿಕಾದ ನ್ಯೂಯಾರ್ಕ್‌ನಲ್ಲಿರುವ ಸ್ವಾತಂತ್ರ್ಯದೇವಿ ಮೂರ್ತಿಗಿಂತ ಎತ್ತರದ್ದು ಇದು. ೨೩೦೦ ಕೋಟಿ ರೂ.ಗಳ ವೆಚ್ಚದಲ್ಲಿ ಸರ್ದಾರ್ ಪಟೇಲರ ವಿಗ್ರಹವನ್ನು ನಿಲ್ಲಿಸಿ ಸಂಘಪರಿವಾರದವರು ಋಣಮುಕ್ತರಾಗಿದ್ದಾರೆ. ನೆಹರೂ ವಿರುದ್ಧ ಸರ್ದಾರ್ ಪಟೇಲರನ್ನು ಎತ್ತಿಕಟ್ಟುವ ಕಾರ್ಯದಲ್ಲಿ ಸಂಘಪರಿವಾರದವರು ಸಫಲರಾಗುತ್ತಿದ್ದಾರೆ. ದೇಶದ ಐಕ್ಯತೆಯ ಸಂಕೇತ ಎಂಬುದಾಗಿ ಬಣ್ಣಿಸಿರುವ ಈ ಪ್ರತಿಮೆ ಪಟೇಲರ ಗುಜರಾತ್ ರಾಜ್ಯದಲ್ಲಿ ನರ್ಮದಾ ಕಣಿವೆಯಲ್ಲಿ ಸ್ಥಾಪನೆಯಾಗಿರುವುದು ವಿಶೇಷವೇನಲ್ಲ, ಅವಿವಾದಾಸ್ಪದವಿಲ್ಲದ್ದೂ ಅಲ್ಲ. ಸಾವಿರಾರು ಬಡ ಆದಿವಾಸಿಗಳ ಕುಟುಂಬ ಈ ಪ್ರತಿಮೆಯಿಂದಾಗಿ ನಿರಾಶ್ರಿತರಾಗಿದ್ದಾರೆ. ಆದಿವಾಸಿ ಯುವಜನರು ತಲೆಬೋಳಿಸಿಕೊಂಡು, ಕಪ್ಪು ಬೆಲೂನುಗಳನ್ನು ಹಾರಿಸಿ ಪ್ರತಿಭಟಿಸಿದ್ದಾರೆ. ಯಾವುದೇ ಪರಿಹಾರವಿಲ್ಲದೆ ಅವರು ಉಳುಮೆ ಮಾಡುತ್ತಿದ್ದ ಪ್ರದೇಶವನ್ನು ವಶಪಡಿಸಿಕೊಳ್ಳಲಾಗಿದೆ. ಗಾಂಧೀಜಿ ಕೊಲೆಯಾದ ಮೇಲೆ ನಿಷೇಧಕ್ಕೆ ಒಳಗಾಗಿದ್ದ ಆರೆಸ್ಸೆಸ್‌ಅನ್ನು ಮತ್ತೆ ಜೀವಂತವಾಗಿರಿಸಲು ಆಗ ಗೃಹಸಚಿವರಾಗಿದ್ದ ಸರ್ದಾರ್ ಪಟೇಲರು ಪ್ರಮುಖ ಪಾತ್ರ ವಹಿಸಿದ್ದರು. ಸಾಂಸ್ಕೃತಿಕ ಸಂಘಟನೆಯಾಗಿ ರಾಜಕೀಯದಿಂದ ದೂರವಿರುವುದಾಗಿ ಆಶ್ವಾಸನೆ ನೀಡಿದ್ದ ಆರೆಸ್ಸೆಸ್ ಇಂದು ಭಾಜಪದ ಮೂಲಕ ದೇಶದ ಆಡಳಿತೆಯ ಚುಕ್ಕಾಣಿ ಹಿಡಿದಿದೆ. ಸಂಘಪರಿವಾರ ಇಂದು ಅತ್ಯಂತ ಪ್ರಬಲ ಹಿಂದುತ್ವವಾದಿ ರಾಜಕೀಯ ಸಂಘಟನೆಯಾಗಿ ವರ್ಧಿಸಿದೆ. ರಾಜಕೀಯ ಲಾಭಕ್ಕಾಗಿ ಭಾಜಪ ಮಾಜಿ ಗೃಹಸಚಿವ ದಿವಂಗತ ಪಟೇಲರನ್ನು ಉಪಯೋಗಿಸಿಕೊಳ್ಳುತ್ತಿದೆ.

ಪ್ರತಿಮೆ ಸ್ಥಾಪಿಸುವ ವಿಚಾರ ಸಾಂಕ್ರಾಮಿಕ ಜಾಡ್ಯದಂತೆ ಹರಡುತ್ತಿದೆ. ಉತ್ತರಪ್ರದೇಶದಲ್ಲಿ ಶ್ರೀರಾಮನ ಅತಿ ಎತ್ತರದ ಪ್ರತಿಮೆಯನ್ನು ನಿರ್ಮಿಸಲು ಯೋಗಿ ಆದಿತ್ಯನಾಥ ಸರಕಾರ ಮುಂದಾಗಿದೆ. ರಾಮಮಂದಿರ ನಿರ್ಮಾಣಕ್ಕೆ ಪೂರ್ವಭಾವಿಯಾಗಿ ಈ ಪ್ರತಿಮೆಯನ್ನು ನಿರ್ಮಿಸಲಾಗುತ್ತಿದೆ. ಇದಕ್ಕೆ ತಗಲುವ ವೆಚ್ಚ ಸಾವಿರಾರು ಕೋಟಿ ರೂ.ಗಳು. ಸರಕಾರದ ಬೊಕ್ಕಸದಿಂದ ಈ ವೆಚ್ಚವನ್ನು ಮಾಡಲಾಗುತ್ತಿದೆ. ಈ ಹಿನ್ನೆಲೆಯಲ್ಲೇ ನಾವೇನು ಕಡಿಮೆ ಎಂದು ಕರ್ನಾಟಕದ ಕಾಂಗ್ರೆಸ್–ಜೆಡಿಎಸ್ ಮೈತ್ರಿ ಸರಕಾರ (ಭಾಜಪ ಈ ಸರಕಾರಕ್ಕೆ ‘ದೋಸ್ತಿ ಸರಕಾರ’ ಎಂಬುದಾಗಿ ನಾಮಕರಣ ಮಾಡಿದೆ) ಈಗ ಕಾವೇರಿ ಪುತ್ಥಳಿಯನ್ನು ಸ್ಥಾಪಿಸಲು ಹೊರಟಿದೆ. ಮೈಸೂರಿನ ಬೃಂದಾವನವನ್ನು ಜೀರ್ಣೋದ್ಧಾರ ಮಾಡುವ ಹೆಸರಿನಲ್ಲಿ ಕಾವೇರಿಯಮ್ಮನ ಎತ್ತರದ ಬೃಹತ್ ಮೂರ್ತಿಯನ್ನು ಸ್ಥಾಪಿಸಲು ಯೋಜನೆ ಹಾಕಿಕೊಂಡಿದೆ. ಇದಕ್ಕೆ ಈಗಾಗಲೇ ಸಂಪುಟ ಸಭೆಯ ಅನುಮೋದನೆ ದೊರೆತಿದೆ. ಎರಡು ವರ್ಷಗಳಲ್ಲಿ ಪೂರೈಸುವ ಈ ಯೋಜನೆಗೆ ತಗಲುವ ವೆಚ್ಚ ಸುಮಾರು ೨೦೦೦ ಕೋಟಿಗೂ ಹೆಚ್ಚು.

* * *

ಮೋದಿ ಸರಕಾರ ಈಚೆಗೆ ಎರಡನೇ ವರ್ಷದ ‘ನೋಟು ಅಮಾನ್ಯೀಕರಣ’ ದಿನವನ್ನು ಆಚರಿಸಿತು. ನೋಟು ಚಲಾವಣೆ ರದ್ದತಿಯಿಂದ ಕಪ್ಪು ಹಣವನ್ನು, ಭಯೋತ್ಪಾದಕ ಕೃತ್ಯಗಳನ್ನು, ನಕ್ಸಲರ ಉಪಟಳವನ್ನು ನಿಯಂತ್ರಿಸಲು ಸಾಧ್ಯವಾಗಿದೆ ಎಂಬುದಾಗಿ

(೬ನೇ ಪುಟಕ್ಕೆ)



# ಸಂಪಾದಕೀಯ




ತಿಂಗಳ ಪತ್ರಿಕೆ

**ಹೊಸತು**

ನೆಲ್ಮುದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೨೦ ಸಂಚಿಕೆ-೫ ಡಿಸೆಂಬರ್ ೨೦೧೮

■ **ಗೌರವ ಸಂಪಾದಕ**

ಜಿ. ರಾಮಕೃಷ್ಣ

■ **ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**

ಎಂ. ಅಬ್ದುಲ್ ರೆಹಮಾನ್ ಪಾಷ

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ರಮೇಶ ಉಡುಪ

■ **ಮುದ್ರಣ**

ಶ್ರೀ ವಿನಾಯಕ ಪ್ರಿಂಟರ್ಸ್

೭೩೮/೧೦, ೬೦ನೇ ಅಡ್ಡರಸ್ತೆ

೫ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು - ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೫

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧

ದೂರವಾಣಿ : ೨೨೧೬೯೧೧, ೨೨೧೬೯೧೨

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**


## ಸುದ್ದಿಯಾಗದ ಸುದ್ದಿಗಳು

ರಾಜ್ಯದ ಬಳ್ಳಾರಿ ಜಿಲ್ಲೆಯಿಂದ ಎರಡು ಆತಂಕಕಾರಿ ವರದಿಗಳು ಕಳೆದ ಒಂದು ತಿಂಗಳಲ್ಲಿ ವರದಿಯಾಗಿವೆ. ಬಳ್ಳಾರಿ ಜಿಲ್ಲೆಯಲ್ಲಿ ಲೋಕಸಭೆಗೆ ನಡೆದ ಉಪಚುನಾವಣೆಯ ಸುದ್ದಿ, ಗೆಲುವು ಮತ್ತು ಸೋಲಿನ ಕುರಿತ ಚರ್ಚೆ, ಸಂಭ್ರಮ, ಸಂಕಟಗಳ ವರದಿಗಳ ಬೆನ್ನಲ್ಲಿಯೇ ಜನಸಾಮಾನ್ಯರ ಸಂಕಟದ ಸುದ್ದಿಗಳು ಜನಮನಕ್ಕೆ ತಲುಪಲಿಲ್ಲ. ಪ್ರಧಾನ ಮಂತ್ರಿ ಫಸಲ್ ಬಿಮಾ ಯೋಜನೆಯಡಿ ಖಾಸಗಿ ವಿಮಾ ಕಂಪನಿಗಳ ಲೂಟಿ ಒಂದು ಸುದ್ದಿಯಾದರೆ, ಗರ್ಭಿಣಿ ತಾಯಿ ಮತ್ತು ಮಕ್ಕಳ ಸಾವಿನ ಸಂಖ್ಯೆಯ ಸುದ್ದಿ ಇನ್ನೊಂದು. ಇದು ರಾಜ್ಯ ಅಥವಾ ಕೇಂದ್ರ ಸರಕಾರದ ನೀತಿಗಳ ಕುರಿತ ವಿಷಯವಲ್ಲ. ಯಾವ ಪಕ್ಷದ ಆಡಳಿತ ಎನ್ನುವ ಟೀಕೆಯೂ ಅಲ್ಲ. ಯಾರೇ ಆಡಳಿತ ಮಾಡಿ, ತಮ್ಮ ಸಾಧನೆಗಳನ್ನು ಹೇಳಿಕೊಂಡರೂ ಸಾಮಾನ್ಯ ಜನರು ಎಲ್ಲ ಪಕ್ಷಗಳ ಆಡಳಿತದಲ್ಲಿ ಪಡುತ್ತಿರುವ ಬವಣೆಯನ್ನು ಗಮನಿಸಬೇಕಾಗಿದೆ.

ಭಾರಿ ಪ್ರಚಾರದೊಂದಿಗೆ ರೈತರ ಉದ್ಧಾರಕ್ಕಾಗಿ ಬಂದ ಪ್ರಧಾನ ಮಂತ್ರಿ ಫಸಲ್ ವಿಮಾ ಯೋಜನೆ ಖಾಸಗಿ ವಿಮಾ ಕಂಪನಿಗಳ ತಿಜೋರಿ ತುಂಬಿಸುವ ಕೆಲಸ ಮಾಡಿದೆ ಎನ್ನುವುದು ಇಂದಿನ ವಾಸ್ತವ ಸಂಗತಿ. ದೇಶದಾದ್ಯಂತ ೨೦೧೬-೧೭ರಲ್ಲಿ ರೈತರು ಮತ್ತು ಸರಕಾರದಿಂದ ಸಂಗ್ರಹವಾದ ಬೆಳೆ ವಿಮಾ ಪ್ರೀಮಿಯಂ ೨೨೧೬೭ ಕೋಟಿಯಾಗಿದ್ದರೆ, ಬೆಳೆ ನಾಶವಾದ ರೈತರಿಗೆ ತಲುಪಿದ್ದು ಕೇವಲ ೧೨೫೯೮ ಕೋಟಿ. ೨೦೧೭-೧೮ರ ಜೂನ್ ತಿಂಗಳವರೆಗೆ ಒಟ್ಟು ಸಂಗ್ರಹವಾದ ೨೪೭೧೦ ಕೋಟಿಯಲ್ಲಿ ಬೆಳೆ ನಾಶವಾದ, ವಿಮಾ ಕಂತು ಕಟ್ಟಿದ ರೈತರಿಗೆ ತಲುಪಿದ್ದು ಕೇವಲ ೮೨೭೪ ಕೋಟಿ. ಅಂದರೆ ರೈತರ ಉದ್ಧಾರಕ್ಕಾಗಿ ಸ್ವತಃ ರೈತರು ಮತ್ತು ಸರಕಾರ ಕಟ್ಟಿದ ಈ ಕೋಟ್ಯಂತರ ಹಣ ವಿಮಾ ಕಂಪನಿಗಳಿಗೆ ಅಂದರೆ ಬಹುತೇಕ ಖಾಸಗಿ ವಿಮಾ ಕಂಪನಿಗಳ ಪಾಲಾಗಿದೆ. ಹಲವಾರು ಕಡೆ ರೈತರು ಕಟ್ಟಿದ ಪ್ರೀಮಿಯಂನ ಹಣ ಸಹಿತ ಪರಿಹಾರ ರೂಪದಲ್ಲಿ ಹಿಂತಿರುಗಿ ಬಂದಿಲ್ಲ. ಕೆಲವು ರಾಜ್ಯಗಳಲ್ಲಿ ಎಕರೆಗೆ ಒಂದು ರೂಪಾಯಿ, ಎರಡು ರೂಪಾಯಿ ಪರಿಹಾರವನ್ನು ರೈತರಿಗೆ ಕೊಟ್ಟ ಮಾಹಿತಿಗಳು ಬಂದಿದ್ದವು. ಕಳೆದ ತಿಂಗಳು ಬಳ್ಳಾರಿ ಜಿಲ್ಲೆಯ ಕೂಡಲಗಿ ತಾಲೂಕಿನ ರೈತರು ತಾವು ೩೫೦ ರೂಪಾಯಿಗಳಷ್ಟು ವಿಮೆ ಪ್ರೀಮಿಯಂ ಕಟ್ಟಿದ್ದರೆ ಬಂದ ಬೆಳೆನಾಶ ಪರಿಹಾರ ೨ ರೂಪಾಯಿಗಳು ಮಾತ್ರ ಎಂದು ಪ್ರತಿಭಟಿಸಿದ್ದಾರೆ. ದಾಖಲೆಗಳನ್ನು ಸಾದರಪಡಿಸಿದ್ದಾರೆ. ಅಂದರೆ ರೈತರು ಬೆವರು ಸುರಿಸಿ ದುಡಿದು ಈ ವಿಮಾ ಕಂಪನಿಗಳಿಗೆ ಕಟ್ಟಿದ ಹಣ, ಜನತೆಯ ತೆರಿಗೆ ಮೂಲಕ ಸಂಗ್ರಹಿಸಿ, ಈ ವಿಮಾ ಕಂಪನಿಗಳಿಗೆ ಸರಕಾರ ಕಟ್ಟಿದ ಹಣ, ಸಾವಿರ ಕೋಟಿ ಲೆಕ್ಕದಲ್ಲಿ ಖಾಸಗಿ ಕಂಪನಿಗಳ ಪಾಲಾಗುತ್ತಿರುವುದು ಒಂದು ವ್ಯವಸ್ಥಿತ ಸಂಚು ಅಥವಾ ಹಗರಣ ಎಂದು ಪರಿಗಣನೆ ಆಗುವುದೇ ಇಲ್ಲ. ದೇಶದಾದ್ಯಂತ ಹರಡಿರುವ ಖಾಸಗಿ ವಿಮಾ ಕಂಪನಿಗಳ ಜಾಲ ಈ ದೇಶದ ಆಡಳಿತ ವ್ಯವಸ್ಥೆ, ಆಳುವ ಪಕ್ಷಗಳ ಸಹಕಾರ ಮತ್ತು ಸಹಾಯದಿಂದಲೇ ನಡೆಯುತ್ತಿದೆ ಎಂಬುದು ಸಾಮಾನ್ಯ ತಿಳುವಳಿಕೆ ಇದ್ದವರಿಗೂ ವೇದ್ಯವಾಗುತ್ತದೆ. ರೈತ ಸಂಘಟನೆಗಳು ಈ ಕುರಿತು ರೈತರ ಹೆಸರಿನಲ್ಲಿ ನಡೆಯುತ್ತಿರುವ, ರೈತರ ಹಣವನ್ನೇ ಲೂಟಿ ಮಾಡುತ್ತಿರುವ ಹಗರಣಗಳ ಕುರಿತು ಮಾತನಾಡುತ್ತಿಲ್ಲ. ಹೆಚ್ಚೆಂದರೆ ಇವು ಕೃಷಿ ವ್ಯವಸ್ಥೆಯ ಕುರಿತ ವಿಚಾರಸಂಕಿರಣದಲ್ಲಿ ಪ್ರಸ್ತಾಪವಾಗುವ ಅಂಕಿಸಂಖ್ಯೆಗಳಾಗುತ್ತವೆ.

ಆತಂಕಪಡಬೇಕಾದ ಇನ್ನೊಂದು ಘಟನೆ ಬಳ್ಳಾರಿ ಜಿಲ್ಲೆಯಿಂದಲೇ ವರದಿಯಾಗಿದೆ. ಉಕ್ಕಿನ ಅದಿರನ್ನು ವಿಶ್ವಕ್ಕೇ ಸರಬರಾಜು ಮಾಡಿದ ಬಳ್ಳಾರಿ, ಸೊಂಡೂರು ಪ್ರದೇಶದಲ್ಲಿ ಪೌಷ್ಟಿಕಾಂಶ ಕೊರತೆಯಿಂದ ಗರ್ಭಿಣಿ ತಾಯಂದಿರೂ, ಹೆರಿಗೆ ಸಂದರ್ಭದಲ್ಲಿ ಬಾಣಂತಿಯರೂ, ನವಜಾತ ಶಿಶುಗಳೂ ಅಪಾರ ಸಂಖ್ಯೆಯಲ್ಲಿ ಸಾವನ್ನಪ್ಪುತ್ತಿರುವ ವರದಿ ಆಘಾತಕಾರಿಯಾಗಿದೆ. ಜಿಲ್ಲಾ ಕೇಂದ್ರವಾದ ಬಳ್ಳಾರಿ ನಗರದ ಸುತ್ತಲಿನ ಪ್ರದೇಶದಲ್ಲಿ ಅಂದರೆ ಬಳ್ಳಾರಿ ತಾಲ್ಲೂಕಿನಲ್ಲಿ ಇಂಥ ಸಾವುಗಳ ಸಂಖ್ಯೆ ಹೆಚ್ಚಾಗಿ ದಾಖಲಾಗಿದೆ. ಕಳೆದ ಐದು ವರ್ಷಗಳಲ್ಲಿ ಜಿಲ್ಲೆಯಲ್ಲಿ ೨೬೫೧ ಕೂಸುಗಳೂ ೨೨೮ ತಾಯಂದಿರೂ ಮರಣ ಹೊಂದಿದ್ದಾರೆಂದು ದಾಖಲಾಗಿದೆ. ಇಂಥ ಸಾವುಗಳು ಏರುಗತಿಯಲ್ಲಿ ನಡೆದಿವೆ. ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಇಲಾಖೆಗಳು ಕೊಡುವ ರಾಜ್ಯವಾರು ವರದಿಯಲ್ಲಿ ಇಂಥ ಹಿಂದುಳಿದ ಪ್ರದೇಶಗಳ ದಾರುಣ ಸತ್ಯಗಳು ಮುಚ್ಚಿಹೋಗುತ್ತವೆ. ೨೦೦೯ರಲ್ಲಿ ರಾಜ್ಯದಲ್ಲಿ ೧೦೦೦ ಮಕ್ಕಳಲ್ಲಿ ಶಿಶುಮರಣದ ಸಂಖ್ಯೆ ೪೧ ಇತ್ತು. ೨೦೧೩ರಲ್ಲಿ ಈ ಸಂಖ್ಯೆ ೩೧ ಆಗಿತ್ತು. ಆದರೆ ೧೧ನೇ ಪಂಚವಾರ್ಷಿಕ ಯೋಜನೆಯಲ್ಲಿ ಈ ಗುರಿಯನ್ನು ೨೪ಕ್ಕೆ ಇಳಿಸುವುದಾಗಿತ್ತು. ಆದರೆ ೨೦೧೫ರಲ್ಲಿಯೂ ಶಿಶುಮರಣದ ಸಂಖ್ಯೆ ಸರಕಾರಿ ಅಂಕಿ-ಸಂಖ್ಯೆಗಳಲ್ಲಿ ೩೧ ಅಂತ ಇದೆ. ಇದು ವರದಿಯಾದ, ವರದಿ ದಾಖಲಿಸಲಾದ ಸರಾಸರಿ ಸಂಖ್ಯೆ ಮಾತ್ರ. ವಾಸ್ತವದಲ್ಲಿ ಪೌಷ್ಟಿಕಾಂಶದ ಕೊರತೆಯಿಂದ ಬಳಲುತ್ತಿರುವ ತಾಯಂದಿರು ಮತ್ತು ಶಿಶುಗಳ ಸಂಖ್ಯೆ ಅಪಾರವಾಗಿದೆ. ಅದರಲ್ಲೂ ಸರಕಾರವೇ ಗುರುತಿಸಿರುವ ಹಿಂದುಳಿದ ಪ್ರದೇಶಗಳಾದ ಬಳ್ಳಾರಿ, ಬೀದರ್, ಗುಲಬರ್ಗಾ, ಯಾದಗಿರಿ, ರಾಯಚೂರು,

ವಿಜಯಪುರ, ಬಾಗಲಕೋಟೆ, ಕೊಪ್ಪಳ, ಚಾಮರಾಜನಗರದಂಥ ಜಿಲ್ಲೆಗಳಲ್ಲಿ ಅಪೌಷ್ಟಿಕತೆಯಿಂದ ಬಳಲುತ್ತಿರುವ ತಾಯಂದಿರು ಹೆರಿಗೆ ಸಂದರ್ಭದಲ್ಲಿ ಸಾವನ್ನಪ್ಪುವ, ಹುಟ್ಟಿದ ಮಕ್ಕಳು ಹುಟ್ಟುವಾಗ ಅಥವಾ ಹುಟ್ಟಿದ ತಕ್ಷಣ ಸಾವನ್ನಪ್ಪಿದ ಅಪಾರ ಘಟನೆಗಳು ವರದಿಯಾಗದೇ ಹೋಗುತ್ತಿವೆ. ಉಳಿದ ಜಿಲ್ಲೆಗಳಲ್ಲಿ ಪರಿಸ್ಥಿತಿ ಸುಧಾರಿಸಿದೆ ಎಂದೇನೂ ಇಲ್ಲ. ಸರಕಾರದ ಬೃಹತ್ ಆರೋಗ್ಯ ಜಾಲದ ಮಧ್ಯೆಯೂ ಹಣವಿದ್ದವರಿಗೆ ಮಾತ್ರ ಆರೋಗ್ಯ, ಸುರಕ್ಷಿತ ಹೆರಿಗೆ ಎನ್ನುವುದು ವಾಸ್ತವ ಸತ್ಯ.

ಕೇಂದ್ರ ಸರಕಾರ, ರಾಜ್ಯ ಸರಕಾರಗಳಿಂದ ಹಲವಾರು ಆರೋಗ್ಯ ಸೇವೆಗಳು ಜಾರಿಯಲ್ಲಿವೆ. ರಾಜ್ಯದ ಅಂಕಿಸಂಖ್ಯೆ ಪ್ರಕಾರವೇ ರಾಜ್ಯದಲ್ಲಿ ೨೦೬ ಸಮುದಾಯ ಆರೋಗ್ಯ ಕೇಂದ್ರಗಳು, ೨೩೫೩ ಗ್ರಾಮೀಣ ಭಾಗದ ಪ್ರಾಥಮಿಕ ಆರೋಗ್ಯ ಕೇಂದ್ರಗಳು, ೮೮೭೧ ಉಪಕೇಂದ್ರಗಳು, ಸಂಚಾರಿ ಆರೋಗ್ಯ ಘಟಕಗಳು, ೨೦೦೫ರಿಂದ ಆರಂಭವಾದ ೧೦೩ ಸುಸಜ್ಜಿತ ಆಯುಷ್ ಆಸ್ಪತ್ರೆಗಳು ಒಟ್ಟು ರಾಜ್ಯದಲ್ಲಿ ೧೦ ಸಾವಿರಕ್ಕೂ ಹೆಚ್ಚಿನ ಆರೋಗ್ಯ ಕೇಂದ್ರಗಳಿವೆ. ಇಷ್ಟೆಲ್ಲ ಇದ್ದೂ ರಾಜ್ಯದಲ್ಲಿ ಜನ್ಮ ನೀಡುವ ತಾಯಿ, ಜನಿಸುವ ಮಕ್ಕಳು ಸುರಕ್ಷಿತವಾಗಿಲ್ಲ ಎಂಬ ಅಂಶ ದಿಗಿಲುಗೊಳಿಸುವಂಥದು. ಇಲಾಖೆಯ ಮೂಲಕ ರಾಜ್ಯದ ಸರಾಸರಿ ಲೆಕ್ಕಗಳನ್ನು ಕೊಡುವಾಗ ಇಂಥ ಸೂಕ್ಷ್ಮಗಳು ಗೌಣವಾಗುತ್ತವೆ. ಯಶಸ್ವಿನಿಯಂಥ ಯೋಜನೆಯಲ್ಲಿ ಬಡವರ ಆರೋಗ್ಯಕ್ಕಾಗಿ ನೀಡುವ ಹಣವೂ ಸಹ ಬೆಳೆ ವಿಮೆಯ ಥರವೇ ಖಾಸಗಿ ವಲಯದ ತಿಜೋರಿ ತುಂಬಿಸುತ್ತಿವೆ. ಸರಕಾರಿ ವಲಯದಲ್ಲಿ ವ್ಯಾಪಕ, ವಿಸ್ತಾರವಾದ ಆರೋಗ್ಯ ಜಾಲವಿದ್ದರೂ ಗ್ರಾಮೀಣ ಮಟ್ಟದಲ್ಲಿ ಮೂಲಭೂತ ಸೌಕರ್ಯಗಳನ್ನು, ವೈದ್ಯಕೀಯ ಕ್ಷೇತ್ರಕ್ಕೆ ಅವಶ್ಯಕವಾಗಿರುವ ತಾಂತ್ರಿಕ ಸೌಕರ್ಯಗಳನ್ನು ಒದಗಿಸಲಾಗದಷ್ಟು ನಮ್ಮ ಸರಕಾರಗಳು ಅಸಮರ್ಥವಾಗಿವೆ ಎನ್ನುವುದು ಸತ್ಯವಲ್ಲ. ಇದೆಲ್ಲ ಖಾಸಗಿವಲಯದ ಸೂಪರ್ ಸ್ಪೆಶಾಲಿಟಿ ಆಸ್ಪತ್ರೆಗಳಿಗೆ ಸರಕಾರಿ ಹಣವನ್ನು ಸರಬರಾಜು ಮಾಡುವ ಭ್ರಷ್ಟ ನಡೆ.

ಸರಕಾರಗಳು ತಂದಿರುವ ಯೋಜನೆಗಳು ಭವ್ಯಭಾರತ, ಸುವ್ಯವಸ್ಥಿತ ಕರ್ನಾಟಕದ ಚಿತ್ರವನ್ನೇ ಕೊಡುತ್ತವೆ. ಜನನಿ ಸುರಕ್ಷಾ ಯೋಜನೆ, ತಾಯಿಭಾಗ್ಯ ಯೋಜನೆ, ಪ್ರಸೂತಿ ಆರೈಕೆ, ಮಡಿಲು, ಸುವರ್ಣ ಆರೋಗ್ಯ ಚೈತನ್ಯ, ವಾಜಪೇಯಿ ಆರೋಗ್ಯಶ್ರೀ, ಆರೋಗ್ಯ ಕವಚ, ನಗು–ಮಗು ಯೋಜನೆ, ಬೈಕ್ ಅಂಬುಲೆನ್ಸ್, ವಾತ್ಸಲ್ಯ ವಾಣಿ, ರಾಷ್ಟ್ರೀಯ ಬಾಲ ಸ್ವಾಸ್ಥ್ಯ ಕಾರ್ಯಕ್ರಮ, ೯೭ ನವಜಾತ ಶಿಶು ಆರೈಕೆ ಕೇಂದ್ರಗಳು, ೧೬೬ ನವಜಾತ ಶಿಶು ಸ್ಥಿರೀಕರಣ ಘಟಕಗಳು... ಹೀಗೆ ಸರಕಾರಿ ವಲಯದ ಶಿಶು ಕೇಂದ್ರಿತ ಆರೋಗ್ಯ ಯೋಜನೆಗಳನ್ನು ನೋಡಿದರೆ ಖಂಡಿತ ಹೆಮ್ಮೆಯಾಗುತ್ತದೆ. ಇವೆಲ್ಲ ಸೌಲಭ್ಯಗಳ ಮಧ್ಯೆ ಖಾಸಗಿ ವೈದ್ಯಕೀಯ ವಲಯವೂ ಸೇರುತ್ತದೆ. ಇಷ್ಟೆಲ್ಲ ಇದ್ದರೂ ಅಸಹಜ ಸಾವುಗಳು ಅಪೌಷ್ಟಿಕತೆಯ ಕಾರಣಕ್ಕಾಗಿ ಸಾವುಗಳು, ಯಾಕೆ ಘಟಿಸುತ್ತಿವೆ. ಜನ್ಮ ಕೊಡಬೇಕಾದ ತಾಯಿ ಹೆರಿಗೆಯನ್ನು ಒಂದು ಪುನರ್ಜನ್ಮ ಎಂದು ಭಾವಿಸುತ್ತಾಳೆ. ಆ ಪುನರ್ಜನ್ಮದ ಭರವಸೆ ಎಲ್ಲ ತಾಯಂದಿರಿಗೂ ಇಲ್ಲ. ಗರ್ಭದಲ್ಲಿರುವ ಮಗು ಅಲ್ಲಿಂದಲೇ ಅಪೌಷ್ಟಿಕತೆಯನ್ನೂ ತನ್ಮೂಲಕ ಅನಾರೋಗ್ಯವನ್ನೂ ಹೊತ್ತು ಭೂಮಿಗೆ ಬರುತ್ತದೆ. ಕೆಲವೊಮ್ಮೆ ಭೂಮಿಗೆ ಬರುವಾಗಲೇ ತನ್ನ ಬದುಕಿನ ಪಯಣ ಮುಗಿಸುತ್ತದೆ. ಹುಟ್ಟಿದ ಮೇಲೂ ಪರಿಸರದಿಂದ ಸಿಗಬೇಕಾದ ಪೌಷ್ಟಿಕತೆ, ಆರೋಗ್ಯಕರ ಆರೈಕೆಯ ಕೊರತೆಯಿಂದ ನಿಧನವಾಗುತ್ತದೆ. ಇವೆಲ್ಲ ರಾಮಮಂದಿರ, ಅಯ್ಯಪ್ಪಸ್ವಾಮಿ ವಿವಾದಗಳಂಥ ವಿದ್ಯಮಾನಗಳಲ್ಲಿ ಸದ್ದಿಲ್ಲದೇ ಸುದ್ದಿ ಇಲ್ಲದೇ ಕಳೆದುಹೋಗುತ್ತವೆ.

ರೈತರ ಕೃಷಿ ವಿಮೆಗೆ ಬಂದ ದುರ್ಗತಿ, ಗ್ರಾಮೀಣ ಪ್ರದೇಶದ, ನಗರದ ಸ್ಲಂಗಳ ತಾಯಂದಿರಿಗೆ, ಶಿಶುಗಳಿಗೆ ಒದಗಿರುವ ಸ್ಥಿತಿ ಕೇವಲ ಬಳ್ಳಾರಿ ಜಿಲ್ಲೆಯದಲ್ಲ. ರಾಜ್ಯದ, ದೇಶದ ಬಹುತೇಕ ಪ್ರದೇಶಗಳ ವಾಸ್ತವ ಸಂಗತಿ. ಇಂಥ ಮಾನವ ಕುಲವನ್ನೇ ಆತಂಕಕ್ಕೊಡ್ಡಿರುವ ಹಲವಾರು ಸಂಗತಿಗಳು ಜನಾಂದೋಲನದ ವಸ್ತು, ವಿಷಯ ಆಗುತ್ತಿಲ್ಲ ಎಂಬುದು ಆತಂಕದ ಸಂಗತಿ. ಇಂಥ ಹಲವಾರು ಸಂಗತಿಗಳು ಪ್ರತಿರೋಧವಿಲ್ಲದೇ ಜನಸಾಮಾನ್ಯರ ನರಳುವಿಕೆ, ನಿಟ್ಟುಸಿರಿಗೆ ಸೀಮಿತವಾಗಿವೆ. ಶಿಕ್ಷಣ ವ್ಯವಸ್ಥೆ ಇಂಥ ಇನ್ನೊಂದು ಕ್ಷೇತ್ರ. ಶಿಕ್ಷಣದ ಹಕ್ಕು (ಆರ್.ಟಿ.ಇ.) ಜಾರಿಗೆ ಬಂದ ಮೇಲೆ ಜನಸಾಮಾನ್ಯರ ಮಕ್ಕಳನ್ನು ಖಾಸಗಿ ಶಾಲೆಗೆ ಸೇರಿಸಿ ಅವರ ಶಿಕ್ಷಣದ ಖರ್ಚನ್ನು ಸರಕಾರವೇ ಭರಿಸುತ್ತಿದೆ. ಅಲ್ಲಿಗೆ ಪ್ರತಿ ಗ್ರಾಮದಲ್ಲಿಯೂ ಆರೋಗ್ಯ ಕ್ಷೇತ್ರದ ಹಾಗೆ ವಿಸ್ತೃತ ಜಾಲವನ್ನು ಹೊಂದಿರುವ ಶಿಕ್ಷಣ ಇಲಾಖೆ ಸರಕಾರಿ ವಲಯದ ಶಾಲೆಗಳನ್ನು ಮುಚ್ಚಿ ಖಾಸಗಿ ವಲಯಕ್ಕೆ ದುಡ್ಡು ಸುರಿಯುತ್ತಿದೆ.

ವಿಮಾ, ಬ್ಯಾಂಕ್‌ನಂಥ ಆರ್ಥಿಕ ವಲಯದಲ್ಲಿ ಖಾಸಗಿ ಕಂಪನಿಗಳ ಬೆನ್ನಿಗೆ ನಿಂತು ಸಾರ್ವಜನಿಕ ವಲಯವನ್ನು ನಾಶಮಾಡುತ್ತಿರುವ ಸರಕಾರಗಳ ನಡೆಯೇ ಕೃಷಿ, ಆರೋಗ್ಯ ಶಿಕ್ಷಣದಂಥ ಕ್ಷೇತ್ರದಲ್ಲಿ ಜನಸಾಮಾನ್ಯರು ತಮ್ಮ ಬದುಕುವ ಹಕ್ಕನ್ನೇ ಕಳೆದುಕೊಳ್ಳುವ ಸ್ಥಿತಿ ನಿರ್ಮಾಣವಾಗಿದೆ. ಅತಿವೃಷ್ಟಿ, ಅನಾವೃಷ್ಟಿಯಿಂದ ಬೆಳೆನಾಶ, ಬೆಳೆ ಬೆಳೆದರೂ ಮಾರುಕಟ್ಟೆಯಲ್ಲಿ ಬೆಲೆಯೇ ಸಿಗದೆ ಹತಾಶರಾದ ರೈತರು ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ. ಆಸ್ಪತ್ರೆಗೆ ಹೋದ ಬಡಜನತೆ ಆಕಸ್ಮಿಕವಾಗಿ ಬದುಕುತ್ತಿದ್ದಾರೆ. ಸಾವಿರ ಜನರಿಗೆ ಚಿಕಿತ್ಸೆ ಸಿಕ್ಕಿರಬಹುದು ಆದರೆ ನೂರು ಜನ ಆರೋಗ್ಯದಿಂದ ವಂಚಿತರಾಗುವುದು ಕ್ಷಮಾರ್ಹವಲ್ಲ. ಯಾವುದೇ ಪಕ್ಷದ ಸರಕಾರವಿರಲಿ, ಯಾವುದೇ ಸಿದ್ಧಾಂತವಿರಲಿ ದೇಶದ ಜನತೆಯ ಬದುಕು ಸ್ಥಿರವಾಗಿರಬೇಕು. ನೆಮ್ಮದಿಯಿಂದಿರಬೇಕು. ಆಳುವ ಪಕ್ಷಗಳಿಗೆ ಅಂಥ ಕಾಳಜಿ ಇರದೇ ಇದ್ದರೆ ಸ್ವತಃ ಜನರಿಗಾದರೂ ತಮ್ಮ ಬದುಕಿನ ಕುರಿತು ಕಾಳಜಿ ಇರಬೇಕು.

ಸಿದ್ದನಗೌಡ ಪಾಟೀಲ



ತಿಂಗಳ ಪತ್ರಿಕೆ
**ಹೊಸತು**
ನೆನ್ನೆದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | ₹ ೨೫/- |
| **ವಾರ್ಷಿಕ ಚಂದಾ** | ₹ ೩೦೦/- |
| **ಮೂರು ವರ್ಷಕ್ಕೆ** | ₹ ೬೦೦/- |

**ನವಕರ್ನಾಟಕ ಶಾಖೆಗಳು**

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

(ಈ ತಿಂಗಳು ೩ನೇ ಪುಟದಿಂದ)

ಬಾಜಾಭಜಂತ್ರಿಯಿಂದ ಕೊಚ್ಚಿಕೊಳ್ಳಲಾಯಿತು. ನೋಟುರದ್ದತಿಗೆ ಮುಂಚೆ ಪ್ರಾರಂಭವಾಯಿತು ದೇಶದ ಪ್ರಮುಖ ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಯ ಮೇಲೆ ದಾಳಿ. ಅಂದು ರಿಸರ್ವ್ ಬ್ಯಾಂಕಿನ ಗವರ್ನರ್ ಆಗಿದ್ದಾತನನ್ನು ಕೆಳಗಿಳಿಸಿ ಅವರ ಸಹಾಯಕನಾಗಿದ್ದ ಊರ್ಜಿತ್ ಪಟೇಲರನ್ನು ಗದ್ದುಗೆಯಲ್ಲಿ ಕೂರಿಸಲಾಯಿತು. ಈಗ ಸಂಪೂರ್ಣವಾಗಿ ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಯನ್ನೇ ಧ್ವಂಸ ಮಾಡಲು ಹೊರಟಿದೆ ಮೋದಿ ಸರಕಾರ. ಎರಡೇ ವರ್ಷದಲ್ಲಿ ಮತ್ತೆ ಹಣಕಾಸಿನ ಸಚಿವಾಲಯ ಮತ್ತು ರಿಸರ್ವ್ ಬ್ಯಾಂಕಿನ ಮಧ್ಯೆ ವಿರಸ ಪ್ರಾರಂಭವಾಗಿದೆ. ರಿಸರ್ವ್ ಬ್ಯಾಂಕ್ ಕಾಯಿದೆಯ ೭ನೇ ವಿಧಿಯನ್ನು ಬಳಸಿಕೊಂಡು ಅದರ ಸ್ವಾಯತ್ತತೆಯನ್ನು ಮುಗಿಸಲು ನೋಡುತ್ತಿದೆ. ಒಂದು ಹಂತದಲ್ಲಿ ಮೋದಿ ಸರಕಾರದ ಶಿಶು ಎಂದೇ ಹೆಸರಾಗಿದ್ದ ಊರ್ಜಿತ್ ಪಟೇಲ್ ತನ್ನ ಹುದ್ದೆಗೆ ರಾಜೀನಾಮೆ ನೀಡುವ ಊಹಾಪೋಹಗಳೂ ಇದ್ದವು. ಸದ್ಯಕ್ಕೆ ಅದು ಸ್ಥಗಿತ. ಈಚೆಗೆ ನಡೆದ ರಿಸರ್ವ್ ಬ್ಯಾಂಕ್ ಬೋರ್ಡ್ ಸಭೆಯಲ್ಲಿ ಹತ್ತು ಗಂಟೆ ಚರ್ಚೆ ನಡೆದರೂ ಯಾವ ರೀತಿಯ ತೀರ್ಮಾನವೂ ಆಗಲಿಲ್ಲ. ಮತ್ತೆ ಸದ್ಯಕ್ಕೆ ತೇಪೆಹಾಕುವ ಕಾರ್ಯ ನಡೆದಿದೆ. ಅಂತೂ ರಿಸರ್ವ್ ಬ್ಯಾಂಕಿನ ಸ್ವಾಯತ್ತತೆಗೆ ಆಪತ್ತು ತಪ್ಪಿದ್ದಲ್ಲ ಮೋದಿ–ಜೇಟ್ಲಿ ಆಡಳಿತದಲ್ಲಿ.

ದೇಶದ ಇನ್ನೊಂದು ಸ್ವಾಯತ್ತ ಸಂಸ್ಥೆ ಸಿಬಿಐ (ಸೆಂಟ್ರಲ್ ಬ್ಯೂರೋ ಆಫ್ ಇನ್ವೆಸ್ಟಿಗೇಶನ್) ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವ ಸ್ಥಿತಿಯಲ್ಲಿದೆ. ಆಡಳಿತದಲ್ಲಿದ್ದ ಪ್ರತಿಯೊಂದು ರಾಜಕೀಯ ಪಕ್ಷವೂ ಈ ಸಂಸ್ಥೆಯನ್ನು ತನ್ನ ರಾಜಕೀಯ ಲಾಭಕ್ಕಾಗಿ ದುರುಪಯೋಗಪಡಿಸಿಕೊಂಡಿದೆ. ಈಗ ಮೋದಿ ಸರಕಾರದ ಅಡಿಯಲ್ಲಿ ಹೆಸರಿಗೆ ಮಾತ್ರ ಸ್ವಾಯತ್ತವಾಗಿದ್ದ ಸಿಬಿಐ ಸಂಪೂರ್ಣವಾಗಿ ಗೊಂದಲದ ಸ್ಥಿತಿಯಲ್ಲಿದೆ. ಅಧಿಕಾರಿಗಳ ನಡುವೆ ಕಿತ್ತಾಟದಿಂದ ಈ ಸಂಸ್ಥೆಯಲ್ಲಿರುವ ಧೂಳು ಬಹಿರಂಗವಾಗುತ್ತಿದೆ. ಸಿಬಿಐನ ಡೈರೆಕ್ಟರ್ ಮತ್ತು ವಿಶೇಷ ಡೈರೆಕ್ಟರ್ ಹಾಗೂ ಇತರ ಅಧಿಕಾರಿಗಳು ಈಗ ಅಮಾನತಿನಲ್ಲಿದ್ದಾರೆ. ಪ್ರಕರಣ ಈಗ ದೇಶದ ಸರ್ವೋಚ್ಚ ನ್ಯಾಯಾಲಯದ ಮೆಟ್ಟಿಲೇರಿದೆ. ನ್ಯಾಯಾಲಯ ತನಿಖೆಯನ್ನು ಕೈಗೆತ್ತಿಕೊಂಡಿದೆ.

ಅಧಿಕಾರದ ದುರ್ಬಳಕೆಗೆ ಅಸ್ತ್ರವಾಗಿರುವ ಇನ್ನೊಂದು ಸಂಸ್ಥೆ ಎಂದರೆ ಹಣಕಾಸಿನ ಸಚಿವಾಲಯದ ಅಡಿಯಲ್ಲಿ ಇರುವ 'ಇಡಿ' ಎಂದು ಹೆಸರಾಗಿರುವ 'ಎನ್‌ಫೋರ್ಸ್‌ಮೆಂಟ್ ಡೈರೆಕ್ಟರೇಟ್'. ತೆರಿಗೆ ಪಾವತಿ ಮೇಲೆ, ಹಣಕಾಸಿನ ಅವ್ಯವಹಾರಗಳ ಮೇಲೆ ನಿಗಾ ಇರಿಸುವ ಈ ಸಂಘಟನೆ ಕೇಂದ್ರದಲ್ಲಿ ಅಧಿಕಾರಕ್ಕೆ ಬರುವ ರಾಜಕೀಯ ಪಕ್ಷಗಳೆಲ್ಲವುಗಳ ದುರುಪಯೋಗಕ್ಕೆ ಬಲಿಯಾಗಿವೆ. ರಾಜಕಾರಣಿಗಳು, ಸರಕಾರದ ಅವಕೃಪೆಗೆ ಒಳಗಾಗಿರುವ ಉದ್ಯಮಿಗಳು, ವ್ಯಾಪಾರಸ್ಥರು, ಸಿರಿವಂತರು ಇವರಿಗೆ 'ಇಡಿ'ಯ ಭೂತ ಕಾಡುತ್ತಿರುತ್ತದೆ. ಕರ್ನಾಟಕದ ಸಚಿವ ಡಿ. ಕೆ. ಶಿವಕುಮಾರ್ ಮತ್ತು ಮಾಜಿ ಹಣಕಾಸು ಕೇಂದ್ರ ಸಚಿವ ಪಿ. ಚಿದಂಬರಮ್ ಪ್ರಕರಣಗಳು 'ಇಡಿ'ಯ ರಾಜಕೀಯ ಸೇಡಿಗೆ ನಿದರ್ಶನ. ಇಬ್ಬರೂ ಸಾಕಷ್ಟು ವಿವಾದಗಳನ್ನು ಹುಟ್ಟು ಹಾಕಿರುವವರೆ. ಕೋಟ್ಯಾಧಿಪತಿಗಳೇ ಅವ್ಯವಹಾರ ಕುಶಲರೆ.

✳ ✳ ✳

ರಾಜ್ಯದಲ್ಲಿ ಈಗ ಗಾಲಿ ಜನಾರ್ದನ ರೆಡ್ಡಿಯದೇ ಸುದ್ದಿ. ಈತ ಬಳ್ಳಾರಿ ಗಣಿಧಣಿ, ಯಡಿಯೂರಪ್ಪ ಸರಕಾರದ ಸಚಿವ ಬೇರೆ. ಎಸಗಿರುವ ಅಪರಾಧ, ಅಕ್ರಮಗಳು ಒಂದಲ್ಲ ಎರಡಲ್ಲ. ದೀರ್ಘಕಾಲ ಪರಪ್ಪನ ಅಗ್ರಹಾರದಲ್ಲಿ ಸರಕಾರದ ಅತಿಥಿಯಾಗಿದ್ದು ಈಗ ಜಾಮೀನಿನ ಮೇಲೆ ಬಿಡುಗಡೆಯಾಗಿದ್ದಾನೆ. ಈಚೆಗೆ ಬಳ್ಳಾರಿಯಲ್ಲಿ ನಡೆದ ಲೋಕಸಭಾ ಉಪ ಚುನಾವಣೆ ಸಮಯದಲ್ಲಿ ಭಾಜಪ ಅಭ್ಯರ್ಥಿಯನ್ನು ಗೆಲ್ಲಿಸಲು ಸಾಕಷ್ಟು ಪ್ರಯತ್ನಪಟ್ಟರೂ ಪ್ರಯೋಜನವಾಗಲಿಲ್ಲ. ಚುನಾವಣೆ ಮುಗಿದ ಮೇಲೆ ಬೇರೆ ಯಾವುದೋ ಅವ್ಯವಹಾರದಲ್ಲಿ ಸಿಕ್ಕಿಬಿದ್ದಿದ್ದಾನೆ. ಕೇಂದ್ರದಲ್ಲಿ 'ಸಿಬಿಐ'ನಂತೆಯೇ ರಾಜ್ಯದಲ್ಲಿ 'ಎಸಿಬಿ' ಎಂಬ ಪೊಲೀಸು ಸಿಬ್ಬಂದಿ ಇದೆ. ರಾಜಕೀಯವಾಗಿ ದುರುಪಯೋಗಪಡಿಸಿಕೊಳ್ಳಲು ಹೇಳಿಮಾಡಿಸಿದಂಥ ಸಂಸ್ಥೆ ಇದು. ಜನಾರ್ದನ ರೆಡ್ಡಿ ಚಲನವಲನಗಳ ಮೇಲೆ ಹದ್ದಿನ ಕಣ್ಣು ಇರಿಸಿದ್ದ ಈ 'ಎಸಿಬಿ' ಅಕ್ರಮ ವ್ಯವಹಾರದ ಆಪಾದನೆಯ ಮೇಲೆ ರೆಡ್ಡಿಯನ್ನು ಮತ್ತೆ ಪರಪ್ಪನ ಅಗ್ರಹಾರಕ್ಕೆ ನೂಕಿತು. ಮತ್ತೆ ಜಾಮೀನಿನ ಮೇಲೆ ಹೊರಗೆ ಬಂದಿರುವ ರೆಡ್ಡಿ ರಾಜ್ಯ ಸರಕಾರದ ಮೇಲೆ ಸೇಡು ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದಾನೆ.

ಉಪಚುನಾವಣೆಯಲ್ಲಿ ಭಾಜಪಗೆ ಮಣ್ಣು ಮುಕ್ಕಿಸಿದ ಮೈತ್ರಿ ಸರಕಾರ ಈಗ ಸಂಪುಟ ವಿಸ್ತರಣೆಯ ಕಸರತ್ತಿನಲ್ಲಿದೆ. ಕಗ್ಗಂಟಾಗಿರುವ ಈ ವಿಚಾರದಲ್ಲಿ ಸಚಿವ ಆಕಾಂಕ್ಷಿಗಳು ಮತ್ತು ಅವರ ಬೆಂಬಲಿಗರ ಒತ್ತಡವೂ ಸೇರಿದೆ. ಅದೇ ಬಗೆಯಲ್ಲಿ ಮಂಡಲಿ, ನಿಗಮಗಳ ಅಧ್ಯಕ್ಷ ಸ್ಥಾನಗಳು ಇದುವರೆಗೆ ಖಾಲಿ ಉಳಿದಿವೆ. ಇವೆಲ್ಲವನ್ನು ಮತ್ತೆ ಮುಂದೂಡಿದರೂ ಆಶ್ಚರ್ಯವಿಲ್ಲ. ಸಂಪುಟ ವಿಸ್ತರಣೆಯಾದರೂ ಮುಖ್ಯಮಂತ್ರಿಗೆ ತಲೆನೋವು, ಇಲ್ಲದಿದ್ದರೂ ತಲೆನೋವು. ಆಡಳಿತ ಹಾಗೂ ವಿರೋಧ ಪಕ್ಷ ಎರಡೂ ಕೂಡ ಭಿನ್ನರಿಗೆ ಗಾಳ ಹಾಕಲು ನೋಡುತ್ತಿವೆ. ಮಾಧ್ಯಮಗಳ ವರದಿ ಪ್ರಕಾರ ಮಾಜಿ ಸಚಿವ ಶ್ರೀರಾಮುಲು, ಬಳ್ಳಾರಿ ಎಮ್ಮೆಲ್ಲೆ ಹಾಗೂ ಜನಾರ್ದನ ರೆಡ್ಡಿಯ ಆಪ್ತ ಕೈಬಲೆಗೆ ಬೀಳುವ ಸಾಧ್ಯತೆ ಇದೆ. ಇದು ವದಂತಿ, ಏನಾಗುತ್ತದೋ ನೋಡಬೇಕು. ಅಂತೂ ಎರಡೂ ಕಡೆಯವರು ಪ್ರಯತ್ನವನ್ನೇನೋ ಮುಂದುವರಿಸಿದ್ದಾರೆ.

✳

ಕುಮಾರಸ್ವಾಮಿಯವರು ಮೈತ್ರಿ ಸರಕಾರದ ಮುಖ್ಯಮಂತ್ರಿ. ಸರಕಾರದಂತೆಯೇ ಮುಖ್ಯಮಂತ್ರಿಯವರ ಆರೋಗ್ಯವೂ ಶಿಥಿಲ. ದಿನಕ್ಕೊಂದು ತಲೆನೋವು ರಾಜ್ಯ ಸರಕಾರವನ್ನು ಕಾಡುತ್ತಿದೆ. ಯಾವುದೂ ಸುಸೂತ್ರವಾಗಿ ನಡೆಯುತ್ತಿಲ್ಲ. ಭಾಜಪ ಯಡಿಯೂರಪ್ಪ ಅಧಿಕಾರ ಪಡೆಯಲು ಏನೇ ತಂತ್ರಗಾರಿಕೆ ನಡೆಸಿದರೂ ಇದುವರೆಗೂ ಸಫಲವಾಗಿಲ್ಲ. ಆಪರೇಷನ್ 'ಕಮಲ' ನರಳುತ್ತಿದೆ. ಯಾವ ಮೀನೂ ಗಾಳಕ್ಕೆ ಬೀಳುತ್ತಿಲ್ಲ. ಆದರೂ ಕುಮಾರ ಆಡಳಿತೆಯಲ್ಲಿ ಎಲ್ಲ ಸಮಸ್ಯೆಗಳೂ ಹಾಗೇ ಉಳಿದಿವೆ. ಸಂಪುಟ ವಿಸ್ತರಣೆ ಗೋಜಲು ಆಗಲೇ ಪ್ರಸ್ತಾಪಿಸಲಾಗಿದೆ. ರೈತರ ಸಾಲಮನ್ನಾ ಎನ್ನುವುದು ಗಾಳಿಗೋಪುರವಾಗುತ್ತಿದೆ. ಅಧಿಕಾರದಲ್ಲಿಲ್ಲದಾಗ ಏನು ಬೇಕಾದರೂ ಚುನಾವಣೆ ಸಮಯದಲ್ಲಿ ಆಶ್ವಾಸನೆ ನೀಡಬಹುದು. ಬುರುಡೆ ಬಿಡಬಹುದು. ಆದರೆ ಅಧಿಕಾರದಲ್ಲಿರುವಾಗ ಹಣ ಒದಗಿಸುವುದು ದೊಡ್ಡ ತಲೆನೋವಾಗಿ ಪರಿಣಮಿಸುತ್ತದೆ. ಬರುವ ಎಂದರೆ ೨೦೧೯ರ ಜೂನ್ ತಿಂಗಳಲ್ಲಿ ಎಲ್ಲ ರೈತರ ಸಾಲ ತೀರಿಸಲು ಸರಕಾರ ನಿರ್ಧರಿಸಿದೆ ಎಂದು ಕುಮಾರಸ್ವಾಮಿ ಆಶ್ವಾಸನೆ ನೀಡಿದ್ದಾರೆ. ಏನಾಗುತ್ತದೋ ನೋಡೋಣ. ರೈತರ ಪಾಲಿಗೆ ಸಾಲ ಮನ್ನಾ ಖಾಯಂ ಪರಿಹಾರ ಏನಲ್ಲ. ಈ ಮಧ್ಯೆ ಕಬ್ಬು ಬೆಳೆಗಾರರು ಹೋರಾಟ ನಡೆಸುತ್ತಿದ್ದಾರೆ. ರಸ್ತೆ ತಡೆಯಿಂದ ಪ್ರಾರಂಭವಾದ ರೈತರ ಹೋರಾಟ ಬೆಂಗಳೂರಿನ 'ಫ್ರೀಡಮ್ ಪಾರ್ಕ್'ವರೆಗೆ ಬಂದಿದೆ. ಸಕ್ಕರೆ ಕಾರ್ಖಾನೆ ಮಾಲಿಕರು ಮತ್ತು ಕಬ್ಬು ಬೆಳೆಯುವ ರೈತರ ಸಮಸ್ಯೆ ಇಂದು ನಿನ್ನೆಯದಲ್ಲ. ಯಾವತ್ತೂ ಸಕ್ಕರೆ ಕಾರ್ಖಾನೆ ಮಾಲೀಕರು ರೈತರಿಗೆ ಕೊಡಬೇಕಾದ ಹಣವನ್ನು ಪೂರ್ತಿ ಕೊಡುವುದಿಲ್ಲ. ಕೋಟಿಗಟ್ಟಲೆ ಬಾಕಿ ಉಳಿಸಿಕೊಳ್ಳುತ್ತಾರೆ. ಇದು ಲಾಗಾಯ್ತಿನಿಂದ ಬಂದದ್ದು. ಸರಕಾರ ಏನೂ ಕ್ರಮ ಕೈಗೊಂಡಿಲ್ಲ ಮಾಲೀಕರ ಮೇಲೆ. ಹೆಚ್ಚಾಗಿ ಸಕ್ಕರೆ ಕಾರ್ಖಾನೆಗಳ ಒಡೆಯರು ಆಡಳಿತಾರೂಢ ಪಕ್ಷಕ್ಕೆ ಹತ್ತಿರದವರು ಇಲ್ಲವೇ ಶಾಸಕರು. ಅದೇ ತಲೆನೋವಿಗೆ ಮುಖ್ಯ ಕಾರಣ ಸರಕಾರಕ್ಕೆ. ರೈತರ ಪರವಾಗಿ ದಿನಬೆಳಗಾದರೆ ಬೊಬ್ಬೆ ಹೊಡೆಯುವ ದೇವೇಗೌಡರ ಮತ್ತು ಕುಮಾರಣ್ಣ ಯಾವುದೇ ಕ್ರಮ ಸಕ್ಕರೆ ಕಾರ್ಖಾನೆ ಮಾಲಿಕರ ಮೇಲೆ ತೆಗೆದುಕೊಳ್ಳಲು ಅಸಮರ್ಥರಾಗಿದ್ದಾರೆ, ಹಿಂಜರಿಯುತ್ತಿದ್ದಾರೆ. ಮುಂದುವರಿದಿದೆ ರೈತರ ಗೋಳು.

✳ ✳ ✳

ಯೋಗಾಭ್ಯಾಸವನ್ನು ಅಂತರರಾಷ್ಟ್ರೀಯಗೊಳಿಸುವುದಾಗಿ ಹೇಳಿಕೊಂಡು ಕೇಂದ್ರ ಸರ್ಕಾರವು ಕಳೆದ ನಾಲ್ಕು ವರ್ಷಗಳಲ್ಲಿ ಸಹಸ್ರಾರು ಕೋಟಿ ರೂಪಾಯಿಗಳನ್ನು ವ್ಯಯ ಮಾಡಿದೆ.

ಒಂದೆರಡು ದಿನದ ವೈಭವಕ್ಕೆ ಇಷ್ಟು ದುಬಾರಿ ಖರ್ಚು ಖಂಡಿತ ಸಮರ್ಥನೀಯವಲ್ಲ. ಬೇರೆಷ್ಟೋ ಅವ್ಯವಹಾರಗಳಲ್ಲಿ ಇರುವಂತೆ ಯೋಗ ಪ್ರಚಾರದಲ್ಲೂ ಮಧ್ಯವರ್ತಿಗಳನೇಕರು ಚೆನ್ನಾಗಿ ಮೇಯ್ದಿದ್ದಾರೆಂಬುದು ಜಗಜ್ಜಾಹೀರಾಗಿದೆ. ೧೯೨೪ರಲ್ಲಿ ಜೆ. ಜಿ. ಗುಣೆ ಎಂಬುವರು ಸ್ವಾಮಿ ಕುವಲಯಾನಂದ ಎಂಬ ಹೆಸರನ್ನು ಧರಿಸಿ ಯೋಗದ ಕೆಲವು ಅಭ್ಯಾಸಗಳನ್ನು ಆಧುನಿಕ ವಿಜ್ಞಾನದ ಪ್ರಯೋಗಶಾಲೆಗಳ ವಿಧಿವಿಧಾನಗಳಿಗೆ ಅನುಗುಣವಾಗಿ ಸಂಶೋಧನೆಗೆ ಗುರಿ ಮಾಡಿದರು. (ವಿದ್ಯಾರ್ಥಿಯಾಗಿದ್ದಾಗ ಅವರು ಅಪ್ಪಯ್ಯ ದೀಕ್ಷಿತನ 'ಕುವಲಯಾನಂದ' ಎಂಬ ಅಲಂಕಾರ ಶಾಸ್ತ್ರ ಗ್ರಂಥವನ್ನು ಅಧ್ಯಯನ ಮಾಡಿದ್ದರು. ಅದನ್ನು ಅತಿಯಾಗಿ ಮೆಚ್ಚಿಕೊಂಡಿದ್ದ ಗುಣೆ ಅದೇ ಹೆಸರನ್ನು ಸ್ವೀಕರಿಸಿದ್ದರು). ಇಲ್ಲಸಲ್ಲದ ಫಲಿತಾಂಶಗಳೆಲ್ಲಾ ಯೋಗಾಭ್ಯಾಸದಿಂದ ಕೂಡಿ ಬರುತ್ತವೆಂದು ಹೇಳುವ ಸಂಪ್ರದಾಯಕ್ಕೆ ಅದರಿಂದಾಗಿ ಸ್ವಲ್ಪ ಕಡಿವಾಣ ಬಿದ್ದಿತು. ಈಗ ನಿಮ್ಹಾನ್ಸ್ ಆಗಿರುವ ಸಂಸ್ಥೆಯು ಪೂರ್ವರೂಪದಲ್ಲಿದ್ದಾಗಿನ ಮೊದಲ ದಿನಗಳಲ್ಲಿ ಅದರ ನಿರ್ದೇಶಕರಾಗಿದ್ದ ಪ್ರೊಫೆಸರ್ ಗೋಪಾಲಸ್ವಾಮಿ ಅವರು ಸಹ ಅಂಥವೇ ಅನೇಕ ಪ್ರಯೋಗಗಳನ್ನು ನಡೆಸಿದ್ದರು. ಇವರಿಬ್ಬರೂ ನಿಚ್ಚಳವಾಗಿ ವೈಜ್ಞಾನಿಕ ಮಾರ್ಗಕ್ಕೆ ಬದ್ಧರಾಗಿದ್ದರು. ಅವರ ಸಂಶೋಧನಾ ವರದಿಗಳು ಹಾಗೂ ಲೇಖನಗಳಿಂದ ಇದು ಖಚಿತಗೊಳ್ಳುತ್ತದೆ. ಆ ಹಂತದ ಒಂಭತ್ತು ದಶಕಗಳ ನಂತರ ಇಂದು ಇದೇ ಕ್ಷೇತ್ರದಲ್ಲಿ ನಡೆಯುವ ಪ್ರಯೋಗಗಳಲ್ಲಿ ಹಲವು "ಹಸುವಿನ ಗಂಜಳವು ಅರ್ಬುದ ರೋಗಕ್ಕೆ ಸಿದ್ಧವಾದ ಮದ್ದು" ಎಂಬ ರೀತಿಯ "ಸಂಶೋಧನೆ" ಆಗಿಹೋಗಿದೆ. ಅಂತಹ ಸಂಶೋಧನೆಗಳಿಗೆ ಸರ್ಕಾರದ ಸಹಾಯಧನವೂ ದೊರೆಯುತ್ತಿದೆ. ನಿಜವಾದ ವೈಜ್ಞಾನಿಕ ಮಾರ್ಗಕ್ಕೆ ಬದ್ಧರಾಗಿರುವವರು ಅದನ್ನು ಕಂಡೂ ಕಾಣದ ವರಂತೆ ನಟಿಸುತ್ತಿದ್ದಾರೆ. ಇಂತಹ ಖೋಟಾ ಸಂಶೋಧನೆಗೆ ಒಂದು ನಿದರ್ಶನವನ್ನು ನೋಡಬಹುದು : ರಾಮದೇವರ ಪತಂಜಲಿ ಯೋಗ ಕೇಂದ್ರ ಹರಿದ್ವಾರದ ಬಳಿ ಇದೆ. ಹಲವು ಕಾರಣಗಳಿಂದಾಗಿ ಅದು ಬಹಳ ಪ್ರಸಿದ್ಧವಾಗಿದೆ ಕೂಡ. ಅಲ್ಲಿ ವೈಜ್ಞಾನಿಕವಾಗಿ ಯೋಗಾಭ್ಯಾಸಗಳ ಬಗ್ಗೆ ಸಂಶೋಧನೆ ನಡೆಸಲು ಅಂತರರಾಷ್ಟ್ರೀಯ ಖ್ಯಾತಿಯ ಪರಿಣತರಿದ್ದಾರೆ. ಅವರಲ್ಲಿ ಒಬ್ಬಾಕೆ ಶರ್ಲಿ ಟೆಲಿಸ್ ಎಂಬುವರು ಬೆಂಗಳೂರಿನ ನಿಮ್ಹಾನ್ಸ್‌ನಿಂದ ಪಿಎಚ್.ಡಿ. ಪಡೆದವರು. ಅವರೇ ರಾಮದೇವ ಸಂಶೋಧನಾ ಕೇಂದ್ರದ ನಿರ್ದೇಶಕರು. ಅವರು ಈವರೆಗೆ ನೂರಾರು ಸಂಶೋಧನಾ ಪ್ರಬಂಧಗಳನ್ನು ಪ್ರಕಟಿಸಿ ಯೋಗ ಸಂಶೋಧನೆಯಲ್ಲಿ ಅಗ್ರಗಣ್ಯರೆನಿಸಿದ್ದಾರೆ. ಕೆಲವು ತಿಂಗಳುಗಳ ಹಿಂದೆ ಅವರ ಒಂದು ಸಂಶೋಧನೆಯ ವಿಧಾನ ಮತ್ತು ಫಲಿತಾಂಶ ಕುರಿತು ಸಮ್ಮೇಳನವೊಂದರಲ್ಲಿ ಉಪನ್ಯಾಸ ನೀಡಿದ್ದರು ಮತ್ತು ನಂತರ ಅದು ಲೇಖನವಾಗಿ ಪ್ರಕಟವಾಯಿತು. ಅದನ್ನು 'ಹೊಸತು' ಓದುಗರಿಗಾಗಿ ಪರಿಚಯಿಸಲಾಗುತ್ತಿದೆ :

ಯೋಗಾಭ್ಯಾಸದಲ್ಲಿ ಪ್ರಾಣಾಯಾಮಕ್ಕೆ ವಿಶೇಷ ಮನ್ನಣೆ ಇದೆ. ಅದನ್ನು ಅಭ್ಯಾಸ ಮಾಡಿದರೆ ಏನೇನು ಲಾಭಗಳಿವೆ ಎಂಬುದನ್ನು ಸ್ವಾತ್ಮಾರಾಮನ 'ಹಠಪ್ರದೀಪಿಕೆ' ಮುಂತಾದ ಗ್ರಂಥಗಳು ಹೇಳಿವೆ. ಪ್ರಾಣಾಯಾಮ ಮಾಡುವವರಿಗೆ ಅದರ ಲಾಭ ದೊರೆಯಬಹುದೇ ವಿನಾ ಅವರ ಸನಿಹದಲ್ಲಿ ಅಡ್ಡಾಡಿಕೊಂಡಿರುವವರಿಗೆ ಯಾವ ಪ್ರಶಸ್ತ ಲಾಭದ ಬಗೆಗೂ ಆ ಗ್ರಂಥಗಳಲ್ಲಿ ಪ್ರಸ್ತಾಪವಿಲ್ಲ. ಪತಂಜಲಿಯ ಯೋಗಸೂತ್ರ ಗ್ರಂಥದಲ್ಲಿ "ತತ್ಸನ್ನಿಧೌ ವೈರತ್ಯಾಗಃ" (ಯೋಗಿಯ ಸನಿಹದಲ್ಲಿ ಪ್ರಾಣಿಗಳು ತಮ್ಮ ಸಹಜ ವೈರತ್ವಗಳಿಂದ ಮುಕ್ತವಾಗಿರುತ್ತವೆ) ಎಂಬ ಮಾತಿದೆ. ಅಂದರೆ, ಹಾವು–ಮುಂಗಸಿ ಸಹಜೀವನ ನಡೆಸುವಂತಿರುತ್ತವೆ ಎಂದರ್ಥ. 'ಪ್ರಾಣಿಗಳು' ಎಂದಾಗ ಮಾನವರೂ ಸೇರುತ್ತಾರೆಂದು ಭಾವಿಸಲಡ್ಡಿಯಿಲ್ಲ. ಹಾಗಾಗುವುದಿದ್ದರೆ ಅದಕ್ಕೆ ಕಾರಣವನ್ನು ವೈಜ್ಞಾನಿಕವಾಗಿ ಅರಸಬೇಕು. ತಾವು ಅದನ್ನು ಮಾಡಲು ಮುಂದಾಗಿರುವುದಾಗಿ ಶರ್ಲಿ ಟೆಲಿಸ್ ಭಾವಿಸಿದ್ದಾರೆ. ಅವರ ಪ್ರಕಾರ ಒಬ್ಬ ವ್ಯಕ್ತಿ ನಿಷ್ಠೆಯಿಂದ ಪ್ರಾಣಾಯಾಮವನ್ನು ಯಥೋಕ್ತವಾಗಿ ಮಾಡಿದರೆ ಅವಳಿಗೆ ದಕ್ಕುವ ಪ್ರಯೋಜನವಂತಿರಲಿ, ಅವಳು ವಿಪುಲವಾಗಿ ಊರ್ಜೆಯನ್ನು (ಅಂದರೆ, 'ಎನರ್ಜಿ'ಯನ್ನು) ಬಿಡುಗಡೆ ಮಾಡಿ ಇಡೀ ಪರಿಸರವನ್ನು ಸ್ವಚ್ಛಗೊಳಿಸುತ್ತಾಳೆ. ದೈಹಿಕ ಮತ್ತು ನೈತಿಕ ನಡೆಯು ಅವಳ ಪ್ರಾಣಾಯಾಮದಿಂದಾಗಿ ಇತರರಲ್ಲಿ ಧನಾತ್ಮಕವಾಗಿ ಬದಲಾಗುತ್ತದೆ.

ಇದನ್ನು ಸಮರ್ಥಿಸಲು ಆಕೆ ಒಂದು ವೈಜ್ಞಾನಿಕ ಪ್ರಯೋಗ ನಡೆಸಿದರಂತೆ. ಅದು ಹೀಗಿದೆ : ಮೀರತ್ ಅಥವಾ ಮುಝಾಫರ್ ನಗರದಂತಹ ಒಂದು ಊರು. ಹರಿದ್ವಾರ ಮತ್ತು ದೆಹಲಿಯ ಹಾದಿಯಲ್ಲಿರುವ ಆ ನಗರಗಳಲ್ಲಿ ಅಪರಾಧಗಳು ವಿಪರೀತ. ಹೊಡೆ – ಕೊಚ್ಚು–ಕೊಲ್ಲು ಎಂಬುದು ಅಲ್ಲಿ ದಿನನಿತ್ಯದ ಪ್ರವೃತ್ತಿ. ಪ್ರಾಣಾಯಾಮವು ಆ ವಾತಾವರಣವನ್ನು ಬದಲಿಸ ಬಲ್ಲುದೇ ಎಂಬುದು ಟೆಲಿಸ್ ಅವರ ಪ್ರಮೇಯ. ಅದನ್ನು ನಿಷ್ಕೃಷ್ಟವಾಗಿ ತಿಳಿಯಲು ಒಂದು ಪ್ರಯೋಗ ಆಯೋಜಿಸಿದರು. ಒಂದು ಹೆಲಿಕಾಪ್ಟರ್‌ನಲ್ಲಿ ಹತ್ತು ಯೋಗಪಟುಗಳು ಕುಳಿತು ಶಾಸ್ತ್ರೋಕ್ತವಾದ ರೀತಿಯಲ್ಲಿ ಪ್ರಾಣಾಯಾಮ ಮಾಡುತ್ತಿರುತ್ತಾರೆ. ಅದರಿಂದ 'ಎನರ್ಜಿ' ಹೊರಬೀಳುತ್ತದೆಂಬುದು ಶರ್ಲಿ ಟೆಲಿಸ್‌ರವರ ಊಹಾಪ್ರತಿಜ್ಞೆ. ಹೆಲಿಕಾಪ್ಟರ್ ಅರ್ಧ ಗಂಟೆಯೋ ಒಂದು ಗಂಟೆಯೋ ಆ 'ಅಪರಾಧ ವಲಯ'ದ ಮೇಲೆ ಸುತ್ತಾಡುತ್ತದೆ. ಹೀಗೆ ಮೂರು ದಿನವೋ ಆರು ದಿನವೋ ಹೆಲಿಕಾಪ್ಟರ್ ಸುತ್ತಾಡುತ್ತದೆ. ಅದರಲ್ಲಿ ಕುಳಿತು ಪ್ರಾಣಾಯಾಮ ಮಾಡುತ್ತಿರುವುದರಿಂದಾಗಿ ಆ ವಲಯದಲ್ಲಿ ಸಾಕಷ್ಟು 'ಎನರ್ಜಿ' ಹೊರಬೀಳುತ್ತದೆ. ಮುಂದಿನ ದಿನಗಳಲ್ಲಿ ಆ ಮೀರತ್ – ಮುಝಾಫರ್ ನಗರಗಳ ವಲಯವು 'ಗಣನೀಯ ಪ್ರಮಾಣ'ದಲ್ಲಿ ಅಪರಾಧಗಳಿಂದ ಮುಕ್ತವಾಗಿರುತ್ತದೆ.

ಸಂಶೋಧಕರು ಸಂಖ್ಯಾಶಾಸ್ತ್ರದ ಪದ್ಧತಿಯಂತೆ ಹಿಂದಿನ ಮತ್ತು ನಂತರದ ಅಪರಾಧಗಳ ಪ್ರಮಾಣವನ್ನು ಲೆಕ್ಕ ಮಾಡಿದ್ದಾರೆ. ಪ್ರಾಣಾಯಾಮವನ್ನು ಮಾಡಿದವರು ಹೆಲಿಕಾಪ್ಟರ್‌ನಲ್ಲಿದ್ದರು. ಆದರೆ ಅವರ 'ಎನರ್ಜಿ' ಬಿಡುಗಡೆಯು ಕೆಳಗಿನ ಊರಲ್ಲಿ ಅಪರಾಧಗಳ ಪ್ರಮಾಣವನ್ನು ಕುಗ್ಗಿಸಿತು. ಇದು ಡಾ॥ ಶರ್ಲಿ ಟೆಲಿಸ್‌ರವರ ಸಂಶೋಧನಾ ಧಾರಿತ ತೀರ್ಮಾನ. ಅದನ್ನು ಬೇರೆಡೆಗಳಲ್ಲೂ ವಿಸ್ತರಿಸಿದರೆ ಅಪರಾಧೀಕರಣವನ್ನು ಹಿಮ್ಮೆಟ್ಟಿಸಬಹುದೆಂಬುದು ಅವರ ಸಲಹೆ.

'ಹೊಸತು' ಓದುಗರೀಗ ಗಂಭೀರವಾಗಿ ಪ್ರಶ್ನೆಗಳನ್ನು ಹಾಕಿಕೊಂಡು ಸಂಶೋಧನೆಯನ್ನು ಪರಾಮರ್ಶಿಸಬೇಕು : (ಅ) ಹಬ್ಬ–ಹರಿದಿನ ಎಂದೇನಾದರೂ ಅಪರಾಧಿಗಳು ಊರುಬಿಟ್ಟು ಹೋಗಿದ್ದರೆ? (ಆ) ಹೆಲಿಕಾಪ್ಟರ್‌ನಲ್ಲಿ ಪೊಲೀಸರು ಇದ್ದಾರೆಂಬ ಗುಮಾನಿಯಿಂದಾಗಿ ಅವರು ಮನೆಗಳಿಂದ ಅಂದು ಹೊರಬರಲು ಅಂಜಿದರೆ? (ಇ) ಅಪರಾಧಗಳನ್ನು ಪ್ರಚೋದಿಸುವಂತಹ ಸನ್ನಿವೇಶ ಆ ದಿನಗಳಲ್ಲಿ ಬೇರಾವುದೇ ಕಾರಣಗಳಿಂದ ಕಡಿಮೆಗೊಂಡಿತ್ತೆ? (ಈ) ಅಯ್ಯಪ್ಪಸ್ವಾಮಿಯ ಸದಾಚಾರವನ್ನು ರಕ್ಷಿಸಲು ಮುಂದಾಗಿರುವ ಅಮಿತ್ ಶಾ ಬಣದವರು ಶಬರಿಮಲೈನಲ್ಲಿ ದುಂಡಾವರ್ತಿ ನಡೆಸುವ ಸಂದರ್ಭದಲ್ಲಿ ಮೂರೋ ನಾಲ್ಕೋ ಹೆಲಿಕಾಪ್ಟರುಗಳಲ್ಲಿ ಪ್ರಾಣಾಯಾಮ ಮಾಡುವ ಅವರನ್ನು ಕುಳ್ಳಿರಿಸಿ ಅಲ್ಲೆಲ್ಲಾ ಪ್ರದಕ್ಷಿಣೆ ಹಾಕಿಸಿದರೆ ಕೇರಳ ಪೊಲೀಸರ ಕೆಲಸವನ್ನು ಇಲ್ಲದಂತಾಗಿಸಿ ಅವರನ್ನೆಲ್ಲಾ ಅವರವರ ಠಾಣೆಗಳಿಗೆ ವಾಪಸ್ಸು ಕಳಿಸ ಬಹುದಲ್ಲವೆ? (ಉ) ನಾಳೆ ಅಯೋಧ್ಯೆಗೆ ಎಷ್ಟು ಮಂದಿ ಪ್ರಾಣಾಯಾಮ ಪರಿಣತರು ಹಾಗೂ ಎಷ್ಟು ಹೆಲಿಕಾಪ್ಟರುಗಳು ಬೇಕಾಗಬಹುದು? ಇತ್ಯಾದಿ.

– ಇದು ತಮಾಷೆಯ ವಿಷಯವಲ್ಲ. ಉಸಿರಾಟದ ವ್ಯಾಯಾಮವು ದೇಹ–ಮನಸ್ಸುಗಳಿಗೆ ಉಲ್ಲಾಸ ನೀಡುತ್ತದೆ. ಪ್ರಾಣಾಯಾಮದ ಪ್ರಯೋಜನವನ್ನು ಉಪೇಕ್ಷೆ ಮಾಡಲಾಗುವುದಿಲ್ಲ. ಆದರೆ ಅದು 'ಎನರ್ಜಿ'ಯನ್ನು ಸೃಷ್ಟಿಸಿ ಹೊರ ಬಿಡುತ್ತದೆಯೆ ಮತ್ತು ಅದರಿಂದ ಅಪರಾಧಗಳು ಥಟಕ್ಕನೆ ಇಲ್ಲವಾಗುತ್ತವೆಯೇ? ಯೋಗಾಭ್ಯಾಸಗಳ ವೈಜ್ಞಾನಿಕ ಅಧ್ಯಯನವೆಂದರೆ ಅದನ್ನು ಮಾಡುವುದು ಹೀಗೇ ಏನು? ಹಾಗಲ್ಲದಿದ್ದರೆ, ನೈಜ ಪ್ರಯೋಗ ವಿಜ್ಞಾನದ ವಿಧಾನ ಯಾವುದು? ಡಾ॥ ಶರ್ಲಿ ಟೆಲಿಸ್ ಅವರ ಘನಂದಾರಿ ಸಂಶೋಧನೆಗೆ ಸಾರ್ವಜನಿಕ ಹಣವನ್ನು ವ್ಯಯಿಸುವುದು ಸೂಕ್ತವೆ? ಇವು ಮನನಯೋಗ್ಯವಾದ ಪ್ರಶ್ನೆಗಳು.

●




## ಪ್ರತ್ಯೇಕ ರಾಜ್ಯ ಕೂಗಿನ ಒಳಗುದಿ

✉ ಉತ್ತರ ಕರ್ನಾಟಕ ಪ್ರತ್ಯೇಕ ರಾಜ್ಯದ ಕೂಗು ಎದ್ದಿದೆ. ಇದರ ಪರ–ವಿರೋಧ ವಾದಗಳ ಸುಳಿಗಾಳಿ ಬೀಸತೊಡಗಿದೆ. ಅಭಿವೃದ್ಧಿಯಲ್ಲಿ ಅನ್ಯಾಯ–ತಾರತಮ್ಯ ವಾಗಿದೆ ಎಂಬ ಕಾರಣಕ್ಕೆ ಈ ಭಾಗದ ಜನ ಪ್ರತ್ಯೇಕತೆಯ ಬೇಡಿಕೆ ಮುಂದಿಟ್ಟಿದ್ದಾರೆ. ಅಭಿವೃದ್ಧಿಯಲ್ಲಿ ನಿಜವಾಗಿಯೂ ತರತಮವಾಗಿದೆಯೇ, ಪ್ರತ್ಯೇಕ ರಾಜ್ಯದ ಕೂಗಿಗೆ ನಿಜವಾದ ನೆಲೆ ಇದೆಯೇ ಎಂಬುದು ಎಂದಿಗಿಂತಲೂ ಇಂದು ಚರ್ಚೆಗೆ ಒಳಗಾಗುವಂತಹದು.

ಅಭಿವೃದ್ಧಿ ಎಂದರೆ ಬರೀ ರಸ್ತೆಗಳು, ಉದ್ದಿಮೆ, ಆರ್ಥಿಕತೆಯೇ ಅಭಿವೃದ್ಧಿ ಎನ್ನುವ ಪರಿಕಲ್ಪನೆಯಲ್ಲ. ಮಾನವನ ಅಭಿವೃದ್ಧಿ ಮುಖ್ಯವಾದದ್ದು. ಅಂದರೆ ಉತ್ತಮ ಆರೋಗ್ಯ, ಗುಣಮಟ್ಟದ ಶಿಕ್ಷಣದ ಮೂಲಕ ಜೀವನಮಟ್ಟ ಸುಧಾರಣೆ, ಇವೆಲ್ಲಾ ಅಭಿವೃದ್ಧಿ ಅಳೆಯುವ ಮಾನದಂಡವಾಗಬೇಕು. ಈ ನಿಟ್ಟಿನಲ್ಲಿ ನೋಡಿದಾಗ ಉತ್ತರ ಕರ್ನಾಟಕ ನಿರ್ಲಕ್ಷ್ಯಕ್ಕೆ ಒಳಗಾಗಿದೆ. ಪ್ರಾದೇಶಿಕ ಅಸಮಾನತೆಯನ್ನು ಇಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಮುಂಬೈ ಕರ್ನಾಟಕ, ಹೈದರಾಬಾದ್ ಕರ್ನಾಟಕ ಭಾಗದ ಭೌಗೋಳಿಕ ಭಿನ್ನತೆ, ಹವಾಮಾನ, ಜೀವನಶೈಲಿ, ರಾಜಕೀಯ, ಸಂಪರ್ಕ ವ್ಯವಸ್ಥೆ, ಐತಿಹಾಸಿಕ ಹಿನ್ನೆಲೆ, ಸಾಮಾಜಿಕ ನೆಲೆಗಳೇ ಬೇರೆ ಬೇರೆಯಾಗಿವೆ. ಇವೆಲ್ಲವನ್ನೂ ನಿವಾರಿಸಲು ರಾಜ್ಯದ ಚುಕ್ಕಾಣಿ ಹಿಡಿದ ನಾಡಪ್ರಭುಗಳು ಸಮಚಿತ್ತ, ಸಮತೋಲನದಿಂದ ಮಾಡ ಬೇಕಾಗಿದೆ. ಅದು ಅವರುಗಳ ಆದ್ಯ ಕರ್ತವ್ಯ ಕೂಡ. ಬೇಲಿಯೇ ಎದ್ದು ಹೊಲ ಮೇಯ್ದರೆ ಯಾರನ್ನ ಕೇಳುವುದು? ಯಾರು ಇದಕ್ಕೆ ಗತಿ ಎನ್ನುವ ಪ್ರಶ್ನೆ ಏಳುತ್ತದೆ. ಆದರೆ, ಏಕೀಕರಣವಾಗಿ ಆರು ದಶಕ ಗಳಾದರೂ ಉತ್ತರ ಕರ್ನಾಟಕದ ಅಭಿವೃದ್ಧಿ ಏಕೀಕರಣದ ನಂತರ ಇಲ್ಲಿಯವರೆಗೆ ಏಳಿಗೆ ಆಗಿಯೇ ಇಲ್ಲವೆ? ಈ ಕೊರತೆಗೆ ಯಾರು ಹೊಣೆ? ಈ ಸಂದರ್ಭದಲ್ಲಿ ಕರ್ನಾಟಕ ಒಡೆದರೆ, ಎಲ್ಲಾ ಸವಾಲಿಗೆ ಪರಿಹಾರ ಸಿಗುವುದೇ? ಇಂತಹ ಹತ್ತು ಹಲವು ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಬೇಕಾದ ತುರ್ತು ಅಗತ್ಯ ಇಂದು ಎಲ್ಲ ಕನ್ನಡಿಗರ ಮುಂದಿದೆ.

ಕರ್ನಾಟಕ ಏಕೀಕರಣಕ್ಕೆ ಶತಮಾನಗಳ ಇತಿಹಾಸ ಇದೆ. ಧಾರವಾಡದಲ್ಲಿ ರಾ. ಹ. ದೇಶಪಾಂಡೆಯವರ ಅಧ್ಯಕ್ಷತೆಯಲ್ಲಿ ವಿದ್ಯಾವರ್ಧಕ ಸಂಘ ಸ್ಥಾಪನೆ ಯಾಯಿತು. ೧೯೧೫ರಲ್ಲಿ ಸ್ಥಾಪನೆಗೊಂಡ ಕನ್ನಡ ಸಾಹಿತ್ಯ ಪರಿಷತ್ತು ಮಹತ್ವದ ಕೊಡುಗೆ ನೀಡಿದೆ. ೧೯೦೭ರಲ್ಲಿ ಕರ್ನಾಟಕ ಕುಲ ಪುರೋಹಿತ ಎಂಬ ಬಿರುದುಳ್ಳ ಆಲೂರು ವೆಂಕಟರಾಯರು, ತಮ್ಮ 'ವಾಗ್ಭೂಷಣ' ಪತ್ರಿಕೆಯಲ್ಲಿ ದೀರ್ಘ ಲೇಖನ ಬರೆಯುವುದರ ಮೂಲಕ ಏಕೀಕರಣಕ್ಕೆ ನಾಂದಿ ಹಾಡಿದರು. ಅವರು ಆರಂಭಿಸಿದ ಕರ್ನಾಟಕ ಏಕೀಕರಣ ಆಂದೋಲನ ಸ್ವಾತಂತ್ರ್ಯ ಚಳುವಳಿಯಲ್ಲಿ ಕರ್ನಾಟಕದ ಉದ್ದಗಲಕ್ಕೂ ವ್ಯಾಪಿಸಿತ್ತು.

ದೇಶಕ್ಕೆ ಸ್ವಾತಂತ್ರ್ಯ ಬಂದು ಏಕೀಕರಣವಾಗದೆ ಇದ್ದಾಗ ಕುವೆಂಪು ಉಗ್ರ ಭಾಷಣ ಮಾಡಿದರು. ದಕ್ಷಿಣ ಕರ್ನಾಟಕದ ಬಹುಪಾಲು ನಾಯಕರಿಂದ ತೀವ್ರ ಪ್ರತಿರೋಧ ವ್ಯಕ್ತವಾಯಿತು. ಏಕೀಕರಣವೇ ಬೇಡ ಎನ್ನುವುದು ಸಾಹುಕಾರ್ ಚೆನ್ನಯ್ಯ, ಎಚ್. ಕೆ. ವೀರಣ್ಣ ಗೌಡ, ಕೆ. ವಿ. ಶಂಕರೇ ಗೌಡ, ಎಂ. ವಿ. ಕೃಷ್ಣಪ್ಪ, ಹುಚ್ಚಮಾಸ್ತಿ ಗೌಡ ಹಾಗೂ ದೇವರಾಜ ಅರಸು, ಹಿರಿಯ ಸಾಹಿತಿ ಡಿ.ವಿ.ಜಿ. ಆದಿಯಾಗಿ




ಮೈಸೂರು ಭಾಗದ ಹಿರಿಯ ರಾಜಕಾರಣಿಗಳ ಪ್ರಬಲ ವಿರೋಧವಿತ್ತು. ಅಂತಹ ಸಂದರ್ಭದಲ್ಲಿ ಏಕೀಕರಣ ವಾದರೆ ಮುಖ್ಯಮಂತ್ರಿ ಪದವಿ ಹೋಗುವ ಅರಿವಿದ್ದರೂ, ಅದನ್ನು ಲೆಕ್ಕಿಸದೆ ಏಕೀಕರಣದ ಪರವಾದ ನಿಲುವನ್ನು ತಳೆದರು ಕೆಂಗಲ್. ಇದರೊಂದಿಗೆ ಕುವೆಂಪು ಸಹ ಸಹಮತ ವ್ಯಕ್ತಪಡಿಸಿದ್ದರು. ಮುಂದೆ ಏಕೀಕರಣ ಆಯ್ತು. ಕೆಂಗಲ್ ಹನುಮಂತಯ್ಯ ಅಧಿಕಾರವನ್ನು ಕಳೆದುಕೊಂಡರು. ಇದೀಗ ಅದು ಇತಿಹಾಸ. ಆಗ ದೇವರಾಜ ಅರಸು ಅವರು ಏಕೀಕರಣಕ್ಕೆ ಪ್ರಬಲವಾದ ವಿರೋಧ ವ್ಯಕ್ತಪಡಿಸಿದ್ದರು. ಅವರೇ ಮುಖ್ಯಮಂತ್ರಿ ಗಾದಿಗೇರಿದ ಬಳಿಕ, ನಾಡಿನ ಬಹುಜನರ ಬೇಡಿಕೆಯಂತೆ ೧೯೭೩ರಲ್ಲಿ 'ಕರ್ನಾಟಕ' ಎಂದು ನಾಮಕರಣ ಮಾಡಿದರು.

ಇದಕ್ಕೂ ಮೊದಲೇ ಡಿ.ವಿ.ಜಿ.ಯವರು ನಾಲ್ಕು ಕರ್ನಾಟಕ ಆಗಬೇಕೆಂದು ಪ್ರತಿಪಾದಿಸಿದ್ದರು. ಅಂದರೆ ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ, ಹೈದರಾಬಾದ್ ಕರ್ನಾಟಕ ಹಾಗೂ ಕೊಡಗು ಬೇರೆ ಬೇರೆ ರಾಜ್ಯ ವಾದರೆ ಕಿತ್ತಾಟ ತಪ್ಪಬಹುದು ಎಂಬುದು ಅವರ ವಾದವಾಗಿತ್ತು.

ಅದೇ ರೀತಿ ಉತ್ತರ ಕರ್ನಾಟಕದಲ್ಲಿ ಲಿಂಗಾಯತರ ಪ್ರಾಬಲ್ಯ ಇತ್ತು. ದಕ್ಷಿಣದಲ್ಲಿ ಒಕ್ಕಲಿಗರ ಪ್ರಾಬಲ್ಯ ಇತ್ತು. ಹಾಗಾಗಿ ಎರಡು ಕರ್ನಾಟಕವಾಗಲಿ ಎಂದು ವೀರಣ್ಣ ಗೌಡರು ಪ್ರತಿಪಾದಿಸಿದ್ದರು. ಇದಕ್ಕೆ ಅವರು ಕೊಡುವ ಕಾರಣ ಏಕೀಕರಣ ಆದ ಪಕ್ಷದಲ್ಲಿ ಸಾಂಸ್ಕೃತಿಕ, ಆರ್ಥಿಕ ಪ್ರಗತಿಯಲ್ಲಿ ಸಾಕಷ್ಟು ಅಭಿವೃದ್ಧಿ ಹೊಂದಿರುವ ಮೈಸೂರು ಪ್ರಾಂತ್ಯದ ಅಭಿವೃದ್ಧಿಯ ಫಲವನ್ನು ಹಿಂದುಳಿದ ಹೈದರಾಬಾದ್ ಕರ್ನಾಟಕ, ಮುಂಬೈ ಕರ್ನಾಟಕಕ್ಕೆ ಹಂಚಬೇಕು, ಇದರಿಂದ ಮೈಸೂರು ಪ್ರಾಂತ್ಯದ ಪ್ರಗತಿಗೆ ಕುಂಠಿತವಾಗುತ್ತದೆ ಎಂಬ ಆತಂಕ ಅವರಲ್ಲಿ ಮನೆ ಮಾಡಿತ್ತು. ಅದು ನಿಜವೂ ಸಹ ಆಗಿತ್ತು. ಅದಕ್ಕೆ ಕಾರಣವು ಇಲ್ಲದಿಲ್ಲ. ಅಂದು ಮೈಸೂರು ಪ್ರಾಂತ್ಯದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ದೂರದೃಷ್ಟಿಯ ಫಲವಾಗಿ ದೇಶದಲ್ಲೇ ಒಂದು ಮಾದರಿ ರಾಜ್ಯವೆಂಬ ಹೆಗ್ಗಳಿಕೆಗೆ ಪಾತ್ರವಾಗಿದ್ದರು. ಅವರ ದೂರದೃಷ್ಟಿಯ ಫಲವಾಗಿ ಕೈಗಾರಿಕೆ, ನೀರಾವರಿ, ವಿದ್ಯುತ್, ಶಿಕ್ಷಣ, ಮುಂತಾದ ಕ್ಷೇತ್ರಗಳಲ್ಲಿ ಗಣನೀಯ ಪ್ರಗತಿಯನ್ನು ಸಾಧಿಸಿದ್ದರು. ದಕ್ಷಿಣ ಕರ್ನಾಟಕದ ಸಂಪತ್ತು, ಸಂಪನ್ಮೂಲವನ್ನು ಉತ್ತರ ಕರ್ನಾಟಕ ಅಭಿವೃದ್ಧಿ ಬಳಸಬೇಕಾಗುತ್ತದೆ ಎಂಬ ಕಾರಣಕ್ಕಾಗಿ ಏಕೀಕರಣವೇ ಬೇಡ ಎಂದು ಪ್ರಬಲವಾಗಿ ಕೇಳಿಬಂತು.

ಒಂದು ಅಂದಾಜಿನ ಪ್ರಕಾರ ಕರ್ನಾಟಕದ ಜಿಡಿಪಿಯನ್ನು ವಿಭಾಗವಾರು ವಿಶ್ಲೇಷಣೆ ಮಾಡಿದರೆ, ನಾಲ್ಕು ಕಂದಾಯ ವಿಭಾಗಗಳಲ್ಲಿನ ಶೇಕಡವಾರು ಆದಾಯದಲ್ಲಿ ಬೆಂಗಳೂರು ವಿಭಾಗದಿಂದ ೫೧, ಮೈಸೂರು ವಿಭಾಗದಿಂದ ೨೦, ಬೆಳಗಾವಿ ವಿಭಾಗ ದಿಂದ ೧೭ ಹಾಗೂ ಕಲಬುರಗಿ ವಿಭಾಗದಿಂದ ೧೨ ಆದಾಯವಿದೆ. ಇದರಿಂದ ಸ್ಪಷ್ಟವಾಗುವುದೇನೆಂದರೆ, ಕರ್ನಾಟಕದ ಇತರ ಭಾಗಗಳಲ್ಲಿನ ಅಭಿವೃದ್ಧಿಗೆ ಬೇಕಿರುವ ಸಂಪನ್ಮೂಲ ಜೋಡಿಸುವಲ್ಲಿ ಬೆಂಗಳೂರು ಬಹುದೊಡ್ಡ ಪಾತ್ರವಹಿಸಿದೆ. ಅದರಲ್ಲಿ ಅನುಮಾನವೇ ಇಲ್ಲ. ಆದರೆ ಬೆಂಗಳೂರೇ ಕೇಂದ್ರಾಡಳಿತವಾಗಬೇಕು ಎಂಬ ಬಹುದೊಡ್ಡ ಹುನ್ನಾರ ನಡೆಯುತ್ತಲೇ ಬಂದಿದೆ. ಕನ್ನಡಿಗರು ಒಡೆದು ಹಂಚಿಹೋದಷ್ಟೂ ನಮ್ಮ ಒಡಕಿನ ಲಾಭ ಪರಭಾಷಿಕರಿಗೆ ನೇರವಾಗಿ ಸಿಗಲಿದೆ ಅನ್ನುವ ಅಪಾಯವನ್ನು ಕರ್ನಾಟಕ ಪ್ರತ್ಯೇಕ ಮಾಡುವವರು ಅರಿಯಬೇಕಾಗಿದೆ.

ಸ್ವಾತಂತ್ರ್ಯಪೂರ್ವ ಮೈಸೂರು ಪ್ರದೇಶ ೨೨ ಪ್ರಾಂತ್ಯ ಗಳಲ್ಲಿ ಹರಿದು ಹಂಚಿಹೋಗಿ, ಏಕೀಕೃತಗೊಂಡ ಕರ್ನಾಟಕ, ಮುಂದೆ ಕನ್ನಡಿಗರ ಎಲ್ಲಾ ಸಂಕಟ ಸಂತಸದ ಹೊನಲಾಗಿ ಬದಲಾಗುತ್ತದೆ ಎಂಬ ಭಾವನೆ ಈಗ ಗೆದ್ದಲು ಹತ್ತಿದ ಮರವಾಗಿದೆ. ಕನ್ನಡಿಗರ ಕನಸುಗಳೆಲ್ಲಾ ಒಳಗೊಳಗೇ ಕರಗುತ್ತಿವೆಯೇನೋ ಎಂಬ ಕಹಿ ಸಂಕಟ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿದೆ. ಅಭಿವೃದ್ಧಿಯಲ್ಲಿ ತಾರತಮ್ಯವಾಗುತ್ತಿದೆ. ಬಡ ಕನ್ನಡಿಗರ ಪಾಲಿಗದು ಗಗನಕುಸುಮವಾಗುತ್ತದೆ ಎಂದು ಅಲ್ಲಲ್ಲಿ ಅಪಸ್ವರ ಮೊಳಕೆಯೊಡೆಯಲು ಕಾರಣವಾಗಿದೆ. ಅಭಿವೃದ್ಧಿಯಲ್ಲಿ ಅಸಮತೋಲನವನ್ನು ನಿವಾರಿಸುವ ನಿಟ್ಟಿನಲ್ಲಿ ಸಮರ್ಪಕವಾದ ಚಿಂತನೆ, ಚರ್ಚೆ

ನಡೆಯುತ್ತಿಲ್ಲವೆಂಬ ಗಂಭೀರ ಆರೋಪ ಎಲ್ಲ ಕಡೆ ಕೇಳಿಬರುತ್ತಿದೆ. ವಾಸ್ತವ ನೆಲೆಯಲ್ಲಿ ಪರಿಹಾರವನ್ನು ಕಂಡುಹಿಡಿಯುವ ಪ್ರಾಮಾಣಿಕ ಪ್ರಯತ್ನವನ್ನು ಮಾಡಬೇಕಾಗಿದೆ. ಇಲ್ಲದೆ ಹೋದರೆ ಎಲ್ಲ ಅನುಮಾನ ಗಳಿಗೆ ಅಸಮಾಧಾನಕ್ಕೆ ಪ್ರತ್ಯೇಕ ರಾಜ್ಯದಿಂದ ಎಲ್ಲವನ್ನೂ ಪಡೆದುಕೊಳ್ಳಲು ಸಾಧ್ಯ ಎಂದು ಹುಸಿ ಭ್ರಮೆಯ ಬಿತ್ತುವ ಕೆಲಸ ಅಲ್ಲಲ್ಲಿ ಸಂಘಟಿತ ಪ್ರಯತ್ನ ನಡೆಯುತ್ತಿರುತ್ತದೆ. ಇದಕ್ಕೆಲ್ಲಾ ಅವರುಗಳ ಸಮಸ್ಯೆಯನ್ನು ನಿವಾರಿಸಲು ಮುಂದಾಗಬೇಕಾಗಿದೆ.

ಉತ್ತರ ಕರ್ನಾಟಕಕ್ಕೆ ಸೇರಿದ ಪ್ರದೇಶಗಳು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಆರೋಗ್ಯ, ಕೃಷಿ, ತೋಟಗಾರಿಕೆ, ನೀರಾವರಿ ಮತ್ತು ಮೂಲಭೂತ ಸೌಲಭ್ಯದಿಂದ ಹಿಂದುಳಿದಿರುವುದು ವಾಸ್ತವ ಸತ್ಯ. ಆದರೆ ದುರ್ದೈವದ ಸಂಗತಿ ಎಂದರೆ ಇದೇ ಭಾಗದಿಂದ ಬಂದ ಮುಖ್ಯಮಂತ್ರಿಗಳಾದ ಶ್ರೀ ಬಿ. ಡಿ. ಜತ್ತಿ, ಎಸ್. ಆರ್. ಕಂಠಿ, ಎಸ್. ನಿಜಲಿಂಗಪ್ಪ, ಎಸ್. ಆರ್. ಬೊಮ್ಮಾಯಿ, ವೀರೇಂದ್ರ ಪಾಟೀಲ, ಎನ್. ಧರ್ಮಸಿಂಗ್ ಹಾಗೂ ಜಗದೀಶ್ ಶೆಟ್ಟರ್ ರಾಜ್ಯದ ಚುಕ್ಕಾಣಿ ಹಿಡಿದು ನಿರ್ವಹಿಸಿದ್ದರು. ಆ ಭಾಗದ ಜನರಿಗೆ ನಿರೀಕ್ಷಿತ ಕೆಲಸ ಗಳನ್ನು ಮಾಡಲಿಲ್ಲ. ಪ್ರಾದೇಶಿಕ ಅಸಮಾನತೆಯ ನಿವಾರಣೆಗೆ ಉತ್ತರ ಸಿಗಲಿಲ್ಲ. ಜೊತೆಗೆ ಎಂ. ಡಿ. ನಂಜುಂಡಪ್ಪ ವರದಿ ಸರ್ಕಾರಕ್ಕೆ ಸಲ್ಲಿಕೆಯಾಗಿ ಒಂದು ದಶಕಕ್ಕೂ ಹೆಚ್ಚು ಕಾಲವಾಗಿದೆ. ಅವರು ಸೂಚಿಸಿದ್ದು ೩೫ ಸಾವಿರ ಕೋಟಿ. ಈಗ ಅದು ಎರಡು ಲಕ್ಷ ಕೋಟಿಯಷ್ಟು ಹೆಚ್ಚಾಗುವ ಸಾಧ್ಯತೆ ಇದೆ. ಇದನ್ನು ಸಮರ್ಪಕವಾಗಿ ಆ ಭಾಗದ ಜನಪ್ರತಿನಿಧಿಗಳು ಸದುಪಯೋಗಪಡಿಸಿಕೊಳ್ಳುವಲ್ಲಿ ಎಡವಿದ್ದಾರೆ.

ಒಂದು ಹೆಜ್ಜೆ ಮುಂದೆ ಹೋಗಿ ಹೇಳುವುದಾದರೆ, ಉತ್ತರ ಕರ್ನಾಟಕದಲ್ಲಿ ಲಿಂಗಾಯಿತರ ಪ್ರಾಬಲ್ಯ, ದಕ್ಷಿಣದಲ್ಲಿ ಒಕ್ಕಲಿಗರ ಪ್ರಾಬಲ್ಯ ಒಂದುಕಡೆಯಾದರೆ, ಇನ್ನೊಂದು ಕಡೆ ಬೆಳಗಾವಿಯಲ್ಲಿ ಸುವರ್ಣ ಸೌಧ ಕಟ್ಟಿಸಿರುವುದು ಹಾಗೂ ಬೆಳಗಾವಿಯನ್ನು ಎರಡನೇ ರಾಜಧಾನಿಯನ್ನಾಗಿ ಮಾಡುವುದು ಕೂಡ ಮುಂದೊಂದು ದಿನ ರಾಜ್ಯ ಪ್ರತ್ಯೇಕವಾದರೆ ಆಡಳಿತಕ್ಕೆ ಧಕ್ಕೆಯಾಗದೆ ಇರಲಿ ಎಂದು ಮುಂದಾಲೋಚನೆಯಿಂದ ಮಾಡಿರಬಹುದು ಎಂದು ವ್ಯಾಪಕವಾಗಿ, ಉತ್ತರದ ಮತ್ತು ದಕ್ಷಿಣದ ಭಾಗದ ಅನೇಕ ಜನರಲ್ಲಿ ಚರ್ಚಿತ ವಾಗಿದೆ ಎಂದು ಭಾವಿಸಲಾಗಿದೆ. ಇದರ ಜೊತೆಗೆ ಹೈಕೋರ್ಟ್ ಸ್ಥಾಪನೆ, ಐ.ಐ.ಟಿ. ಸ್ಥಾಪನೆ ಅದಕ್ಕೊಂದು ಬಲ ನೀಡುವ ಪ್ರಕ್ರಿಯೆ ಎಂದು ಹೇಳಲಾಗುತ್ತದೆ. ಇದೇನೇ ಇದ್ದರೂ ಆ ಭಾಗದ ಜನಸಾಮಾನ್ಯರು ಮಾತ್ರ ಪ್ರತ್ಯೇಕತೆಗೆ ತಲೆಕೆಡಿಸಿಕೊಂಡಿಲ್ಲ. ಇದೆಲ್ಲಾ ಶ್ರೀ ಉಮೇಶ್ ಕತ್ತಿ, ಶ್ರೀ ಎಸ್. ನಡಹಳ್ಳಿ, ಇತ್ತೀಚೆಗಷ್ಟೇ ಪ್ರತ್ಯೇಕತೆಗೆ ಮಾತನಾಡುತ್ತಿರುವ ಶ್ರೀರಾಮುಲು ಅವರಂಥವರು ಏಕೀಕರಣದ ಮಹತ್ವ ಗೊತ್ತಿಲ್ಲದೆ, ಆ ಭಾಗವನ್ನು ಗುತ್ತಿಗೆ ಹಿಡಿದವರಂತೆ ಮಾತನಾಡು ತ್ತಿರುವುದು ಚೋದ್ಯ ಎನಿಸುತ್ತದೆ. ಆದರೆ ರಾಜ್ಯದ ಅಭಿವೃದ್ಧಿಯನ್ನು ಮುಂದಿಟ್ಟುಕೊಂಡು ನಡೆಸುವ ಪ್ರತ್ಯೇಕ ರಾಜ್ಯ ಬೇಡಿಕೆಯ ಹಿಂದಿರುವ ಗುಟ್ಟು ಈಗ ರಹಸ್ಯ ವಾಗೇನೂ ಉಳಿದಿಲ್ಲ. ಅಭಿವೃದ್ಧಿಯೇ ಅವರ ಅಜೆಂಡಾ ಆಗಿದ್ದಲ್ಲಿ ಅದನ್ನು ಆಗುಮಾಡುವುದಕ್ಕೆ ಯಾರ ಅಡ್ಡಿಯೂ ಇರಲಿಲ್ಲ. ಆದರೆ ಅವರುಗಳ ಮನದ ಇಂಗಿತ ಸ್ಪಷ್ಟ. ಪ್ರತ್ಯೇಕವಾದರೆ ಮುಖ್ಯಮಂತ್ರಿ ಗಾದಿಗೇರುವುದೇ ಅವರ ಪರಮಗುರಿ. ಪಕ್ಕದ ರಾಜ್ಯದಲ್ಲಿ ತೆಲಂಗಾಣ ಪ್ರತ್ಯೇಕವಾದ ನಂತರ ಅಲ್ಲಿನ ಜನರು ಚೆನ್ನಾಗಿದ್ದಾರೆಯೇ, ಅಲ್ಲಿನ ಅಭಿವೃದ್ಧಿಯಾಗಿದೆಯೇ ಎಂದು ಅವಲೋಕಿ ಸಿದರೆ ಸಮಾಧಾನಕರ ಉತ್ತರ ಸಿಗುವುದಿಲ್ಲ.

ಅದೇ ರೀತಿ ಹೈದರಾಬಾದ್ ಕರ್ನಾಟಕಕ್ಕೆ ಅನ್ಯಾಯವಾದಾಗೆಲ್ಲಾ ಸ್ವಾತಂತ್ರ್ಯೋತ್ಸವ ಮತ್ತು ಗಣರಾಜ್ಯೋತ್ಸವವನ್ನು ಕರಾಳ ದಿನವನ್ನಾಗಿ ಆಚರಿಸಿಕೊಂಡು, ಪ್ರತ್ಯೇಕ ರಾಜ್ಯ ಕೊಟ್ಟುಬಿಡಿ, ನಮ್ಮ ಹಣೆಬರಹ ನಾವೇ ನಿರ್ಧರಿಸಿಕೊಳ್ಳುತ್ತೇವೆ ಎಂದು ವೈಜನಾಥ ಪಾಟೀಲ್ ಹೋರಾಟದ ಫಲವಾಗಿ ೩೭೧ (ಜೆ) ತಿದ್ದುಪಡಿಯನ್ನು ತಂದ ಕೇಂದ್ರ ಸರ್ಕಾರ ಆ ಭಾಗದ ಅಭಿವೃದ್ಧಿಗೆ ಅನುಕೂಲ ಮಾಡಿದೆ.

ಇನ್ನು ಕೊಡಗು ಒಂದು ವಿಶಿಷ್ಟವಾದ ಸಂಸ್ಕೃತಿ, ಆಚಾರ–ವಿಚಾರ, ಭಾಷೆ ಎಲ್ಲವೂ ವಿಭಿನ್ನವಾದದ್ದು. ಸ್ವಾತಂತ್ರ್ಯಪೂರ್ವದಲ್ಲಿ ಮೈಸೂರಿನಂತೆಯೇ ಪ್ರತ್ಯೇಕ ರಾಜ್ಯವಾಗಿತ್ತು. ಗಣರಾಜ್ಯದಲ್ಲಿ ಅದು ಅಸ್ತಿತ್ವ ಕಳೆದು ಕೊಂಡಿತು. ಅಭಿವೃದ್ಧಿಯ ವಿಷಯ ಬಂದಾಗ ಅಲ್ಲೂ ಕೂಡ ಪ್ರತ್ಯೇಕ ರಾಜ್ಯದ ಕೂಗು ಆಗಾಗ ಕೇಳಿಬರುತ್ತಿದೆ.

ಇದೆಲ್ಲಾ ಅತೃಪ್ತ ಅಧಿಕಾರದಾಹಿ ರಾಜಕಾರಣಿಗಳು, ಮಠಮಾನ್ಯರು, ಜಾತಿವಾದಿಗಳು, ಕಿಡಿಗೇಡಿಗಳು, ಕೆಲಸಕ್ಕೆ ಬಾರದವರು, ಕೆಲಸವೇ ಇಲ್ಲದೆ ಮೂರು ಹೊತ್ತು ರಾಜಕೀಯ ಮಾಡುವವರು ಪ್ರತ್ಯೇಕತೆಯ ಹುಯಿಲೆಬ್ಬಿಸಿ ತಮ್ಮ ಬೇಳೆಕಾಳನ್ನು ಬೇಯಿಸಿಕೊಳ್ಳಲು ಪ್ರಯತ್ನಿಸುವವರ ಹುನ್ನಾರ. ದ. ರಾ. ಬೇಂದ್ರೆ ಹೇಳಿದಂತೆ 'ಒಂದೇ ಒಂದೇ ಒಂದೇ ಕರ್ನಾಟಕ ಒಂದೇ/ಹಿಂದೆ ಮುಂದೆ ಎಂದೇ ಕರ್ನಾಟಕ ಒಂದೇ' ಎನ್ನುವ ಸಮಗ್ರ ಕರ್ನಾಟಕದ ಮಂತ್ರವನ್ನು ಕನ್ನಡಿಗ ರೆಲ್ಲರೂ ಜಪಿಸಬೇಕಾಗಿದೆ. ಅಖಂಡ ಕರ್ನಾಟಕವನ್ನು 'ಕನ್ನಡ ಭಾಷೆ' ಬೆಸೆದಿದೆ. ಹಾಗಾಗಿ ಕನ್ನಡವೇ ಸತ್ಯ ಕನ್ನಡವೇ ನಿತ್ಯ ಎಂದು ಆರಾಧಿಸೋಣ.

*ಬೆಂಗಳೂರು* **_ದ್ವಾರನಕುಂಟೆ ಪಾತಣ್ಣ_**

## ಅನ್ನದಾತನ ಆತ್ಮಹತ್ಯೆ ಸುತ್ತ...!

ವಾಣಿಜ್ಯ ಸಂಸ್ಥೆ ಹುಟ್ಟಿಕೊಂಡ ನಂತರ ಪ್ರಪಂಚದಾದ್ಯಂತ ವ್ಯವಸಾಯ ಕ್ಷೇತ್ರದ ಪರಿಸ್ಥಿತಿ ಬದಲಾಗುತ್ತಿದೆ. ರೈತರ ಆತ್ಮಹತ್ಯೆ ಕೃಷಿಕ್ಷೇತ್ರದಲ್ಲಿನ ವಿಪರೀತ ಪರಿಸ್ಥಿತಿಗಳಿಗೆ ನಿದರ್ಶನವೆಂದು ಅನೇಕ ಅಧ್ಯಯನಗಳು ಹೇಳಿವೆ.

ಸ್ಥೂಲವಾಗಿ ಖರ್ಚುಗಳು ಹೆಚ್ಚಾಗಿ ಆದಾಯ ಕಡಿಮೆಯಾಗಿ ಸ್ವಲ್ಪ ನಷ್ಟವಾದರೂ ತಡೆದುಕೊಳ್ಳುವ ಆರ್ಥಿಕ ಶಕ್ತಿಯಿಲ್ಲದೆ, ಬೆಂಬಲ ನೀಡುವ ಆಡಳಿತ ವ್ಯವಸ್ಥೆಯಿಲ್ಲದೆ, ಕುಟುಂಬ ಸದಸ್ಯರ ಕಷ್ಟಗಳನ್ನು ನೋಡ ಲಾರದೆ ರೈತರು ಬಲವಂತದಿಂದ ಸಾಯುತ್ತಿದ್ದಾರೆ. ಬೀಜ, ಗೊಬ್ಬರ, ಕೂಲಿ, ನೀರಿಗಾಗಿ ಬೋರ್‌ವೆಲ್ ಕೊರೆಸುವುದು ಖರ್ಚು ಹೆಚ್ಚಾಗುವುದಕ್ಕೆ ಪ್ರಧಾನ ಕಾರಣ. ಇವುಗಳನ್ನೆಲ್ಲ ಕೊಳ್ಳುವುದಕ್ಕೆ ಹಣ ಅಗತ್ಯ. ಬಂಡವಾಳದ ಮೇಲೆ ಬಡ್ಡಿ ಹೆಚ್ಚಾಗದಂತೆ ರೈತರಿಗೆ ಸಾಲ ಕೊಡದ ಬ್ಯಾಂಕಿಂಗ್ ವ್ಯವಸ್ಥೆಯನ್ನು ಬದಲಾಯಿಸದ ಅಸಮರ್ಥ ಆಡಳಿತ ವ್ಯವಸ್ಥೆ ಇದಕ್ಕೆ ಕಾರಣ.

ಪ್ರಕೃತಿ ಅನುಕೂಲವಾಗಿಲ್ಲದಿದ್ದಾಗ ಅಕಾಲ ಮಳೆ, ಕ್ಷಾಮ, ಪ್ರವಾಹ, ಬಿಸಿಲು ಮುಂತಾದ ಪರಿಣಾಮಗಳು ಈ ಆರ್ಥಿಕ ಭಾರವನ್ನು ಹೆಚ್ಚಿಸುತ್ತವೆ. ಈ ಭಾರದಿಂದ ಹೊರಬರಲು ವಿಮಾ ಸೌಕರ್ಯವಿಲ್ಲದುದರಿಂದ ರೈತರು ಎಲ್ಲಾ ವಿಧಾನಗಳಲ್ಲೂ ಕುಗ್ಗಿಹೋಗುತ್ತಿದ್ದಾರೆ. ಬೆಳೆ ನುಂಗುವ ಕೀಟಗಳನ್ನು ತಡೆಯಲಾರದೆ, ಕೀಟನಾಶಕ ಪದ್ಧತಿ ತಿಳಿಯಲಾರದೆ, ಕೀಟನಾಶಕ ಡಬ್ಬಗಳ ದರ ನಿಲುಕಲಾರದೆ, ರೈತರು ಸಾಲದ ಸುಳಿಗೆ ಸಿಲುಕುತ್ತಿದ್ದಾರೆ. ಆಯಾ ಉತ್ಪತ್ತಿಗಳನ್ನು ಮಾರುವ ಕಂಪೆನಿಗಳ ಮೇಲೆ ಸರ್ಕಾರದ ನಿಯಂತ್ರಣವಿಲ್ಲ ದಿರುವುದು ಕೂಡ ರೈತರ ಪಾಲಿಗೆ ಶಾಪವಾಗಿದೆ. ಈಗಲಾದರೂ ಸರ್ಕಾರ ಕಣ್ಣು ತೆರೆದು ನೈಸರ್ಗಿಕ ಗೊಬ್ಬರ ಮತ್ತು ಅದನ್ನು ಸಂಗ್ರಹಿಸುವ ಪದ್ಧತಿಗಳನ್ನು ಪ್ರೋತ್ಸಾಹಿಸುವ ವಿಧಾನಗಳನ್ನು, ಯೋಜನೆಗಳು ಮತ್ತು ಕಾರ್ಯಕ್ರಮಗಳನ್ನು ರೂಪಿಸಿ ರೈತರನ್ನು ಪರಿಸರವನ್ನು ಕಾಪಾಡಬೇಕು. ಆ ಮೂಲಕ ಆಹಾರ ಉತ್ಪಾದನೆಯನ್ನು ಹೆಚ್ಚಿಸಿಕೊಳ್ಳಬಹುದು. ಪರಿಸರ ಮಾಲಿನ್ಯವನ್ನು ಕಡಿಮೆ ಮಾಡಿಕೊಳ್ಳಬಹುದು. ರೈತರು ಮತ್ತು ಬಳಕೆದಾರರ ಆರೋಗ್ಯವನ್ನು ಕಾಪಾಡ ಬಹುದು. ಮುಖ್ಯವಾಗಿ ಆಮದಿನ ಮೇಲಿನ ಖರ್ಚನ್ನು ಕಡಿಮೆ ಮಾಡಬಹುದು.

ಆಯಾ ರಾಜಕೀಯ ಪಕ್ಷಗಳ ನಿರ್ಣಯಗಳ ಮೇಲೆ ಅಂತರ್ಗತವಾಗಿ ಈ ರೈತ ಸಂಘಗಳಿಗೆ ಯಾವುದೇ ರೀತಿಯ ಪ್ರಭಾವ ಇಲ್ಲ. ಅಧಿಕಾರದಲ್ಲಿ ಇದ್ದಾಗ, ಇಲ್ಲದಿದ್ದಾಗ ಈ ಸಂಘಗಳನ್ನು ಹಿಡಿಸಿ ಕೊಳ್ಳುವವರಿಲ್ಲ. ಅನೇಕ ರಾಜಕೀಯ ಪಕ್ಷಗಳಿಗೆ ನಾಮ ಮಾತ್ರ ಕೂಡ ರೈತರಿಗೆ ಸಂಬಂಧಿಸಿದ ಕಾರ್ಯವರ್ಗ ಹಾಗೂ ಕಾರ್ಯಸೂಚಿ ಇಲ್ಲ. ಒಂದು ವಿಭಾಗ ಇಲ್ಲ. ೨೦೧೦ರಲ್ಲಿ ಆಂಧ್ರದ ಅಖಿಲ ಪಕ್ಷ ರೈತಸಂಘ ಪ್ರತಿನಿಧಿ ವರ್ಗದೊಂದಿಗೆ ಒಬ್ಬ ಸೀನಿಯರ್ ಎಂಪಿ ಆಡಿದ ಮಾತುಗಳು ಇವತ್ತಿನ ವಾಸ್ತವ ಪರಿಸ್ಥಿತಿಗೆ ಕನ್ನಡಿ ಹಿಡಿಯುತ್ತವೆ. ಆತ ಹೀಗೆಂದ : "ಸಂಸತ್ತಿನಲ್ಲಿ ರೈತ ಪ್ರತಿನಿಧಿಗಳು ಇಲ್ಲವೇ ಇಲ್ಲ. ಸದಸ್ಯರಿಗೆ ಕೃಷಿಯ ಬಗ್ಗೆ ತಿಳಿವಳಿಕೆ ಬಹಳ ಕಡಿಮೆ. ಕೃಷಿಯ ಬಗ್ಗೆ ಮಾತನಾಡಲು ಸಮಯವಿಲ್ಲ. ೬೦ ಕೋಟಿ ಜನಸಂಖ್ಯೆಯ ಬಗ್ಗೆ ತಲೆಕೆಡಿಸಿಕೊಳ್ಳದ ಸಂಸತ್ತು ಪ್ರತಿನಿಧಿಗಳು ಪ್ರಜಾಪ್ರಭುತ್ವವನ್ನು ಕಾಪಾಡುತ್ತಾರಾ?"

ಚುನಾವಣೆಯಲ್ಲಿ ಸ್ಪರ್ಧಿಸುವ ಅಭ್ಯರ್ಥಿಗಳು, ಕಂಪೆನಿಗಳ ಯಜಮಾನರು, ಕಂಟ್ರಾಕ್ಟರುಗಳು, ಗಣಿ ಧಣಿಗಳು, ವ್ಯಾಪಾರಿಗಳು, ಕೈಗಾರಿಕೋದ್ಯಮಿಗಳನ್ನು ಮಾತ್ರ ರಾಜಕೀಯ ಪಕ್ಷಗಳು ಆರಿಸಿಕೊಳ್ಳುತ್ತವೆ. ಇದರಿಂದ ವ್ಯವಸಾಯವನ್ನು ಮತ್ತು ರೈತರನ್ನು ಹಿಡಿಸಿಕೊಂಡು ಅವರ ಅಗತ್ಯಗಳಿಗನುಗುಣವಾಗಿ ವಿಧಾನಗಳನ್ನು ತರುವ ನಾಯಕತ್ವ ಇಲ್ಲದಿರುವುದು ಇಂದು ರೈತರನ್ನು ಪೀಡಿಸುತ್ತಿರುವ ಪ್ರಧಾನ ಸಮಸ್ಯೆ.

ಸರ್ಕಾರದ ನೀರಾವರಿ ಯೋಜನೆಗಳ ಅನುಷ್ಠಾನ ಕೂಡ ದೀರ್ಘ ಅವಧಿ ತೆಗೆದುಕೊಳ್ಳುತ್ತಿದ್ದು, ಕೃಷಿಕ್ಷೇತ್ರ ಸಮಸ್ಯೆಗಳ ಸುಳಿಗೆ ಸಿಲುಕಿದೆ. ದೇಶದ ಜಲಾಶಯಗಳ

ನೀರಿನ ಸಂಗ್ರಹದ ಸಾಮರ್ಥ್ಯ ಹೆಚ್ಚಿಸುವುದರೊಂದಿಗೆ ನದಿಗಳ ಅಪಾರ ನೀರು ವ್ಯಥಾ ಪೋಲಾಗಿ ಸಮುದ್ರ ಸೇರುವುದನ್ನು ತಪ್ಪಿಸಲು ಜಲಾಶಯಗಳನ್ನು ನಿರ್ಮಿಸುವುದರೊಂದಿಗೆ ಭೂಫಲವತ್ತತೆಯನ್ನು ಹೆಚ್ಚಿಸಲು ಹೆಚ್ಚು ಒತ್ತು ನೀಡಬೇಕು. ತಳಿಶಾಸ್ತ್ರ ವಿಜ್ಞಾನಿಗಳು ಕೃಷಿ ಕ್ಷೇತ್ರದತ್ತ ಗಮನ ಹರಿಸಿ ತಮ್ಮ ಹೊಸ ಹೊಸ ಸಂಶೋಧನೆಗಳ ಮೂಲಕ ನಮ್ಮ ರೈತರ ನೆರವಿಗೆ ನಿಲ್ಲಬೇಕು. ಹಾಗೆಯೇ ಆಳುವ ಸರ್ಕಾರಗಳು ಕೂಡ ಕೈಗಾರಿಕೆ, ತಂತ್ರಜ್ಞಾನ, ಅಭಿವೃದ್ಧಿ ಮತ್ತು ಸಂಶೋಧನೆಗೆ ಕೊಟ್ಟಷ್ಟು ಆದ್ಯತೆಯನ್ನು ನಮ್ಮ ಕೃಷಿ ಕ್ಷೇತ್ರಕ್ಕೂ ನೀಡಬೇಕು.

*ಪಾವಗಡ* **ಡಾ॥ ಕಂಪ್ಲಪ್ಪ ಚನ್ನಸಾಗರ**

## ರೈತರ ಸಮಸ್ಯೆ ಬಗೆಹರಿಯಬಹುದೇ?

✉ ದೇಶದಲ್ಲಿ ದಿನಗಳು ಕಳೆದು ಹೋಗುತ್ತಿರುವುದರೊಂದಿಗೆ ದೇಶದ ರೈತರ ಆತ್ಮಹತ್ಯೆಗಳು ಕೂಡ ಹೆಚ್ಚುತ್ತಾ ಇವೆ. ಭಾರತ ಸರ್ಕಾರವು ರೈತರ ಕೃಷಿಗೆ ಬೇಕಾದ ಎಲ್ಲ ಮೂಲ ಸೌಕರ್ಯಗಳನ್ನು ಒದಗಿಸಿದರೂ ಅವರಿಗೆ ಅದರಲ್ಲಿ ತೃಪ್ತಿಯನ್ನು ಕಂಡುಕೊಳ್ಳಲು ಸಾಧ್ಯವಾಗುತ್ತಿಲ್ಲ. ಭಾರತದಲ್ಲಿ ಇನ್ನು ಮುಂದೆ ಇದೇ ರೀತಿಯಲ್ಲಿ ಹೋದರೆ ಮುಂಬರುವ ದಿನಗಳಲ್ಲಿ ಆಹಾರದ ಕ್ಷಾಮವನ್ನು ದೇಶ ಅನುಭವಿಸಬೇಕಾಗುತ್ತದೆ. ಇದನ್ನು ಮುನ್ನೆಚ್ಚರಿಕೆಯಾಗಿ ಇಟ್ಟುಕೊಂಡು ಸರಕಾರವು ಹಲವು ರೀತಿಯ ಸಹಾಯ ಸೌಲಭ್ಯಗಳನ್ನು ಜಾರಿಗೊಳಿಸಿದರೂ ಸಹ ರೈತರ ಸಾವಿನಲ್ಲಿ ಯಾವುದೇ ಬದಲಾವಣೆ ಆಗುತ್ತಿಲ್ಲ. ದೇಶದ ಹಲವು ರಾಜ್ಯಗಳಲ್ಲಿ ರೈತರ ಆತ್ಮಹತ್ಯೆಯನ್ನು ತಡೆಯಲು ಸರ್ಕಾರವು ಕೆಲವು ಯೋಜನೆಗಳನ್ನು ರೂಪಿಸಿದ್ದಾರೆ. ಇದರಲ್ಲಿ ಸಾಲ ಮನ್ನಾ ಯೋಜನೆ, ಕೃಷಿ ಕ್ಷೇತ್ರದಲ್ಲಿ ಒಳ್ಳೆಯ ಬೆಳೆಗಳನ್ನು ನೀಡುವುದು ಮತ್ತು ರಾಸಾಯನಿಕ ಗೊಬ್ಬರಗಳನ್ನು ನೀಡುವುದು ಹೀಗೆ ರೈತರ ನೆರವಿಗೆ ಸಹಾಯವನ್ನು ಮಾಡುತ್ತಿದ್ದಾರೆ. ಆದರೂ ಇಂತಹ ಒಳ್ಳೆಯ ಸೌಲಭ್ಯಗಳನ್ನು ಒದಗಿಸಿದರೂ ರೈತರ ಆತ್ಮಹತ್ಯೆಗೆ ಪರಿಹಾರವನ್ನು ಕಂಡುಕೊಳ್ಳಲು ಸಾಧ್ಯವಾಗದೇ ಇರುವುದು ಒಂದು ವಿಷಾದದ ಸಂಗತಿಯಾಗಿದೆ. ಇಂತಹ ನಿಟ್ಟಿನಲ್ಲಿ ಸರ್ಕಾರವು ರೈತರಿಗೋಸ್ಕರ ಕೃಷಿ ವಿಮೆಯನ್ನು ಜಾರಿಗೊಳಿಸಲು ಮುಂದಾಗಿದೆ. ಈ ಯೋಜನೆಯಿಂದ ಆದರೂ ರೈತರ ಆತ್ಮಹತ್ಯೆಯನ್ನು ತಡೆಗಟ್ಟಲು ಸಾಧ್ಯವಾಗಬಹುದು.

*ಬೆಂಗಳೂರು* **ಶಾಹಿದ್**

✉ ನವೆಂಬರ್ ೨೦೧೮ರ ಸಂಚಿಕೆಯಲ್ಲಿ ಶ್ರೀ. ನ. ಸುಂದರಮೂರ್ತಿಯವರ 'ಎಲ್‌ಐಸಿ–ಐಡಿಬಿಐ' ಕುರಿತ ಲೇಖನವು ಬಹಳ ಸಾರವತ್ತಾಗಿದೆ ಮತ್ತು ಪ್ರಸಕ್ತ ಆರ್ಥಿಕ ಸಮಸ್ಯೆಗಳ ಹಿನ್ನೆಲೆಯಲ್ಲಿ ಪ್ರಮುಖ ಆಘಾತಕಾರಿ ಬೆಳವಣಿಗೆಗಳ ಪರಿಚಯವನ್ನು ಮಾಡಿಕೊಡುತ್ತದೆ. 'ಹೊಸತು' ಪತ್ರಿಕೆಯಲ್ಲಿ ನಮ್ಮ ದೇಶದ ಆರ್ಥಿಕ ಸನ್ನಿವೇಶಗಳ ಬಗ್ಗೆ ಇಂತಹ ಮೌಲಿಕ ಬರಹಗಳನ್ನು ಪ್ರಕಟಿಸುವುದು ಇಂದಿನ ಕಾಲಘಟ್ಟದಲ್ಲಿ ಉಪಯುಕ್ತವಾಗಿರುತ್ತದೆ. 'ಮೇಕ್ ಇನ್ ಇಂಡಿಯ'ದಿಂದ ಪ್ರಾರಂಭವಾಗಿ, ನೋಟು ಅಮಾನ್ಯೀಕರಣ, ಮುಂತಾದ ಪಾತಕ ನೀತಿಗಳನ್ನು ಅನುಸರಿಸಿ ನಮ್ಮ ಖಜಾನೆಯನ್ನು ಬರಿದು ಮಾಡಿರುವ ಮೋದಿ ಸರ್ಕಾರವು ಇನ್ನೂ ಏನೇನು ಆಘಾತಕಾರಿ ಕ್ರಮಗಳನ್ನು ಜಾರಿಗೊಳಿಸುತ್ತದೆಯೋ ಹೇಳಬರುವುದಿಲ್ಲ. ಸಾರ್ವಜನಿಕರ ಹಣವು ಬ್ಯಾಂಕು ಮುಂತಾದ ಸಾರ್ವಜನಿಕ ಸಂಸ್ಥೆಗಳಲ್ಲಿ ಕ್ಷೇಮವಾಗಿ ಉಳಿಯುವುದಂತೂ ಅಸಾಧ್ಯವೆಂಬುದನ್ನು ಹತ್ತಾರು ಹಗರಣಗಳು ತೋರಿಸಿಕೊಟ್ಟಿವೆ. ಭಾರತೀಯ ಜನತಾ ಪಕ್ಷದ ಈ ಸರ್ಕಾರಕ್ಕೆ ಅದೆಂತಹ ಆರ್ಥಿಕ ಪರಿಣತರು ಸಲಹೆಗಳನ್ನು ನೀಡಿ ಜನರ ಹಣವನ್ನು ಅಪಹರಿಸಲು ಕಾರಣರಾಗುತ್ತಿದ್ದಾರೋ ತಿಳಿಯುತ್ತಿಲ್ಲ. ದಿನಬೆಳಗಾದರೆ ಕೇಂದ್ರ ಸರ್ಕಾರವು ಒಂದಲ್ಲ ಒಂದು ಸಂವಿಧಾನ ವಿರೋಧಿ ನೀತಿಯನ್ನು ಘೋಷಿಸುತ್ತಲೇ ಇದೆ. ಸಾರ್ವಜನಿಕ ಹಣವನ್ನು ನುಂಗಿಹಾಕಿದ ತಿಮಿಂಗಿಲಗಳು ಪರದೇಶಗಳಲ್ಲಿ ತಲೆತಪ್ಪಿಸಿಕೊಂಡು ತಿರುಗಾಡಲು ಸರ್ಕಾರವೇ ಅನುವುಮಾಡಿಕೊಡುತ್ತಿದೆ. ಕೆಲವು ವರ್ಷಗಳ ಹಿಂದೆ ಅಮೆರಿಕಾದಲ್ಲಿ ಬ್ಯಾಂಕುಗಳು ಕುಸಿಯುವ ಹಂತ ತಲುಪಿದ್ದುದನ್ನು ನೆನಪಿಸಿಕೊಳ್ಳಬಹುದು. ಅದರ ಆಘಾತ ನಮ್ಮನ್ನು ಅಷ್ಟಾಗಿ ತಟ್ಟದಿದ್ದುದಕ್ಕೆ ನಮ್ಮ ರಿಸರ್ವ್ ಬ್ಯಾಂಕಿನ ಕಾರ್ಯವೈಖರಿಯು ಕಾರಣವಾಗಿದ್ದಿತೆಂದು ಹೇಳುತ್ತಾರೆ. ಮೋದಿ ಸರ್ಕಾರವು ಈಗ ಆ ಬ್ಯಾಂಕಿನ ಕಾರ್ಯಾಚರಣೆಯಲ್ಲೂ ಮೂಗುತೂರಿಸಿ ಅದರ ವಿಚಕ್ಷಣೆಯನ್ನೂ ಹಾಳುಮಾಡುತ್ತಿದೆ. ಕರಾಳ ದಿನಗಳು ನಮ್ಮ ಬಾಗಿಲುಗಳಿಗೆ ಬಂದಾಗಿದೆ ಎನಿಸುತ್ತದೆ. ತಮ್ಮ ಜೀವನಪರ್ಯಂತ ಕಾಪಿಟ್ಟು ಕೂಡಿಹಾಕಿಕೊಂಡಿದ್ದ ಹಣ ನೀರುಪಾಲಾಯಿತೆಂದು ನಾಳೆ ಗೋಳಿಡುವ ಮುನ್ನ ಈಗಲೆ ಮೋದಿ ಸರ್ಕಾರದ ಅನರ್ಥಕ ಆರ್ಥಿಕ ನೀತಿಗಳನ್ನು ಹದ್ದುಬಸ್ತಿನಲ್ಲಿಡಲು ಸಾರ್ವಜನಿಕರು ಮುಂದಾಗಬೇಕೆಂಬುದು ಶ್ರೀ. ಸುಂದರಮೂರ್ತಿಯವರ ಲೇಖನದ ಸಂದೇಶವೆಂದು ನಾನು ಬಗೆಯುತ್ತೇನೆ. ಅವರಿಗೆ ಅಭಿನಂದನೆಗಳು ಸಲ್ಲುತ್ತವೆ. ಇಂತಹ ವಿಶ್ಲೇಷಣಾತ್ಮಕ ಲೇಖನಗಳನ್ನು 'ಹೊಸತು' ಇನ್ನೂ ಹೆಚ್ಚುಹೆಚ್ಚಾಗಿ ಪ್ರಕಟಿಸಲೆಂದು ಆಶಿಸಬಹುದಾಗಿದೆ. ಶ್ರೀ. ಅರುಣ ಜೇಟ್ಲಿಯವರು ನಮ್ಮ ದೇಶದ ಆರ್ಥಿಕತೆಗೆ ಕೊಳ್ಳಿ ಇಟ್ಟಿದ್ದಾರೆ ಮತ್ತು ಅದಕ್ಕೆ ಮೋದಿ ಸರ್ಕಾರದ ಅನುಮತಿ ಇದೆ ಎಂಬುದು ಸರ್ವವಿದಿತ. ಕಾಲ ಮೀರುವ ಮುನ್ನವೇ ಎಚ್ಚರಗೊಂಡು ಜನತೆಯು ಮೋದಿ ಸರ್ಕಾರವನ್ನು ಸದಾಕಾಲಕ್ಕೂ ಹೊರಗಟ್ಟಬೇಕು. ೨೦೧೯ರ ಚುನಾವಣೆಯು ಈ ದಿಕ್ಕಿನಲ್ಲಿ ಮಹತ್ತರವಾದುದು. ಸಾರ್ವಜನಿಕರು ತಮ್ಮ ಹಣವನ್ನು ತಮ್ಮದನ್ನಾಗಿ ಉಳಿಯುವಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ಹೊರಬೇಕಾದುದು ಅನಿವಾರ್ಯ. ಎಲ್.ಐ.ಸಿ. ಮುಂತಾದ ಸಾರ್ವಜನಿಕ ಹಣಕಾಸು ಸಂಸ್ಥೆಗಳನ್ನು ಲೂಟಿಮಾಡುವ ಸರ್ಕಾರವು ಜನವಿರೋಧಿ ಸರ್ಕಾರ ಎನಿಸಿಕೊಳ್ಳುತ್ತದೆ.

*ಬೆಂಗಳೂರು* **ಪವನರಾಮ ಜೆ.**

ದೇವಿಪ್ರಸಾದರು ಬೆಳಗುವ ನಾಳೆಗಳನ್ನು ಬಿಡಿಸಿಟ್ಟಿರುವುದು ಅವರ ಅತ್ಯುಚ್ಚ ಸಾಧನೆ, ಕೊಡುಗೆ. ಅದರಿಂದ ಹಿಂದಕ್ಕೆ ಸರಿಯುವ ಪ್ರಶ್ನೆಯೇ ಇಲ್ಲ. ಹಿಂದಕ್ಕೆ ಸರಿಯುವುದೆಂದರೆ ಕ್ರಮೇಣ ಶಿಲಾಯುಗದತ್ತ ಧುಮುಕುವುದು ಎಂದಾಗುತ್ತದೆ.

ಡಾ॥ ಜಿ. ರಾಮಕೃಷ್ಣ

# ಸಾಟಿ ಇಲ್ಲದ ದೇವಿಪ್ರಸಾದ್

೧೯೯೩ರ ಫೆಬ್ರವರಿ ೧೧. ಸ್ಥಳ : ಕಲ್ಕತ್ತೆಯ ಏಷ್ಯಾಟಿಕ್ ಸೊಸೈಟಿ ಸಭಾಭವನ. ಆ ವಿದ್ವತ್ ಸಂಸ್ಥೆಯೊಂದಿಗೆ ಸುಮಾರು ಐದು ದಶಕಗಳ ಕಾಲ ನಿಕಟ ಸಂಬಂಧವಿರಿಸಿಕೊಂಡಿದ್ದ ಉದ್ದಾಮ ಚಿಂತಕ ಮತ್ತು ಲೇಖಕ ದೇವಿಪ್ರಸಾದ್ ಪುಟ್ಟ ಸಭೆಯನ್ನುದ್ದೇಶಿಸಿ ಒಂದು ಉಪನ್ಯಾಸ ನೀಡಲು ನಿಂತಿದ್ದರು. ಅಂತಹ ಎಷ್ಟೋ ಉಪನ್ಯಾಸಗಳನ್ನು ಅವರು ಅಲ್ಲಿ ನೀಡಿದ್ದುದುಂಟು. ಸಭೆಯಲ್ಲಿದ್ದವರು ಇಪ್ಪತ್ತೋ ಮೂವತ್ತೋ ಮಂದಿ. ಆದರೆ ಎಲ್ಲರೂ ಅವರವರ ಕ್ಷೇತ್ರಗಳಲ್ಲಿ ನಿಪುಣರು, ಹೆಸರು ಮಾಡಿರುವವರು. ದೇವಿಪ್ರಸಾದರ ಅಂದಿನ ವಿಷಯ : ಪ್ರಾಚೀನ ಭಾರತದಲ್ಲಿ ವಿಜ್ಞಾನದ ಮೂಲಸೆಲೆಗಳು. ಸಾಮಾನ್ಯವಾಗಿ ನಿಂತು ಮಾತನಾಡುವ ಪದ್ಧತಿಯ ದೇವಿಪ್ರಸಾದ್ ಅಂದು ಕುಳಿತೇ ಉಪನ್ಯಾಸ ನೀಡಬೇಕಾಗಿತ್ತು. ವಯಸ್ಸು ಅದಕ್ಕೆ ಕಾರಣವಲ್ಲ; ಆರೋಗ್ಯ ಕ್ಷೀಣಿಸಿದ್ದುದು ಕಾರಣ. ದೈಹಿಕವಾಗಿ ಕೃಶವಾಗಿದ್ದ ಈ ವಿದ್ವಾಂಸರು ಬೌದ್ಧಿಕವಾಗಿ ಗಟ್ಟಿಯಾಗಿಯೇ ಇದ್ದರು. ತಮ್ಮ ನೆಚ್ಚಿನ ಸಂಸ್ಥೆಯ ಆಹ್ವಾನವನ್ನು ತಿರಸ್ಕರಿಸಲಾರದೆ ಉಪನ್ಯಾಸ ನೀಡಲು ಬಂದಿದ್ದರು. ಅಲ್ಲದೆ, ವಿಷಯವು ರೋಚಕವಾದ್ದು, ಅವರಿಗೆ ಅತ್ಯಂತ ಪ್ರಿಯವಾದ್ದು. ಹಿಂದೆ ಹಲವು ವರ್ಷಗಳ ಕಾಲ ತಾವು ಕಾರ್ಯದರ್ಶಿಯಾಗಿ ಕೆಲಸ ಮಾಡಿದ್ದ ಸಂಸ್ಥೆಯಲ್ಲಿ ಇದೇ ಮಾಜಿ ಪ್ರಕಟಣಾ ಕಾರ್ಯದರ್ಶಿಯ ಕೊನೆಯ ಉಪನ್ಯಾಸ. ಸಾರ್ವಜನಿಕ ವಿದ್ವತ್ಸಭೆಯಲ್ಲಿ ಕಾಣಿಸಿಕೊಂಡಿದ್ದೂ ಅದೇ ಕಡೆಯದು.

ಕೇವಲ ಆರು ತಿಂಗಳಿಗೆ ಮುಂಚೆ ಅವರು ಒಂದು ದೊಡ್ಡ ಸಭೆಯಲ್ಲಿ ಪಾಂಡಿತ್ಯ, ನಗೆ, ಚಾವಟಿ ಏಟು, ಅದಮ್ಯ ವಿಶ್ವಾಸ, ಮಗ್ನತೆ ಮತ್ತು ಬೌದ್ಧಿಕ ಔತಣದ ಸವಿಯನ್ನು ಉಣಿಸಿದ್ದರು. ಎರಡು ದಶಕಗಳ ಕಾಲ ಅವರು ಸಂಶೋಧನೆ ನಡೆಸಿದ್ದ ವಿಷಯ, ಅವರಿಗೆ ಪ್ರಿಯವಾದ್ದು; ಪ್ರಾಚೀನ ಭಾರತದಲ್ಲಿ ವಿಜ್ಞಾನಿಗಳು ಎದುರಿಸಿದ ತೊಡರುಗಳು, "ವಿಜ್ಞಾನಕ್ಕೆ ಬೆದರಿಕೆ ಒಡ್ಡಿದ್ದವರು." ದೇಶದ ಎಲ್ಲ ಭಾಗಗಳಿಂದ ವಿಜ್ಞಾನಿಗಳು ಬಂದು ತುಂಬಿದ್ದ ಸಭೆ ಅದು. ಸ್ಥಳ : ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆ. ಆಗ್ಗೆ ಭಾರತೀಯ ವಿಜ್ಞಾನ ಅಕಾಡೆಮಿಯ ಅರ್ಧವಾರ್ಷಿಕ ಸಮ್ಮೇಳನ ಜರುಗುತ್ತಿತ್ತು. ಅಡಿಪಾಯ ರೂಪದ ಉಪನ್ಯಾಸವೆಂದು ಅದನ್ನು ಕರೆದಿದ್ದರು. ಅಂತಹ ಉಪನ್ಯಾಸಗಳಲ್ಲಿ ಇದು ದೇವಿಪ್ರಸಾದರ ಐದನೆಯದೋ ಆರನೆಯದೋ ಉಪನ್ಯಾಸ. ಅಂದಿನ ನಿರ್ದೇಶಕರಾಗಿದ್ದ ಡಾ॥ ಸಿ. ಎನ್. ಆರ್. ರಾವ್ ಅವರು ಅಧ್ಯಕ್ಷತೆ ವಹಿಸಿದ್ದರು. ಕೇಂಬ್ರಿಜ್‌ನಲ್ಲಿ ಅವರು ದೇವಿಪ್ರಸಾದರನ್ನು ಭೇಟಿಯಾದ್ದು, ನೀಡ್‌ಹ್ಯಾಮ್ ಆಹ್ವಾನದ ಮೇರೆಗೆ ದೇವಿಪ್ರಸಾದ್ ಅಲ್ಲಿದ್ದು ಅವರೊಡನೆ ತಮ್ಮ ಸಂಶೋಧನೆಯ ವಿವರಗಳನ್ನು ಚರ್ಚಿಸುತ್ತಿದ್ದುದು, ಎಲ್ಲವನ್ನೂ ಆತ್ಮೀಯವಾಗಿ ನೆನಪಿಸಿಕೊಂಡರು.

ದೇವಿಪ್ರಸಾದ್ ಎಂಥವರೆಂದು ಇದರಿಂದ ತಿಳಿಯುತ್ತದೆ. ಅವರು ಹುಟ್ಟಿದ್ದು ೧೯ನೇ ನವೆಂಬರ್ ೧೯೧೮ರಂದು ಕಲ್ಕತ್ತೆಯಲ್ಲಿ ಮತ್ತು ಗತಿಸಿದ್ದು ೧೯೯೩ರ ಮೇ ೮ರಂದು, ತಮ್ಮ ೭೪ನೆಯ ವಯಸ್ಸಿನಲ್ಲಿ. ಎಂಥ ಅದ್ಭುತವಾದ ಕ್ರಿಯಾಶಾಲಿತ್ವದ ೭೪ ವರ್ಷಗಳು! ಸಂಶೋಧನೆ ಮತ್ತು ಬರವಣಿಗೆ ಅವರ ಜೀವನದ ಜೀವಾಳ. ೧೯೮೬ರಲ್ಲಿ ಪ್ರಕಟವಾದ್ದು ಅವರ ಉದ್ಗ್ರಂಥದ ಮೊದಲ ಸಂಪುಟ : ಪ್ರಾಚೀನ ಭಾರತದ ವಿಜ್ಞಾನ–ತಂತ್ರಜ್ಞಾನಗಳ ಇತಿಹಾಸ. ಅದು ಹೊರಬರುವವರೆಗೆ ಈ ವಿಷಯದ ಬಗೆಗೆ ಬರಡು ಬರಡಾದ ಇಲ್ಲವೆ ದಾಖಲೆಗಳಿಲ್ಲದ ಅತಿಶಯೋಕ್ತಿ ಭರಿತ ಸರಮಾಲೆ ಇತಿಹಾಸದ ಹೆಸರಲ್ಲಿ ಹರಿದಾಡುತ್ತಿದ್ದಿತು. ಆ ತಾಪವನ್ನು ತಣಿಸಲು ತಂಪು ಮಳೆ ಎರೆದಂತಿತ್ತು ಈ ಪುಸ್ತಕದ ಪ್ರಕಟಣೆ. ಮುಂಚೆ ನಮ್ಮ ಪ್ರಾಚೀನ ವಿಜ್ಞಾನಿಗಳ ಮೂಲ ಗ್ರಹಿಕೆಗಳು, ಅವರ ವೈಜ್ಞಾನಿಕ ಪದ್ಧತಿ, ಅವರು ಹೇಗೆ ತೀರ್ಮಾನಗಳನ್ನು ತಲುಪಿದರು, ಎಂಬುವು ಸಮಗ್ರವಾಗಿ ನಿರೂಪಿತವಾಗಿರಲಿಲ್ಲ. ಅದನ್ನು ಮಾಡಿದವರು ದೇವಿಪ್ರಸಾದ್. ಪ್ರಾಚೀನರ ಪ್ರತ್ಯಕ್ಷ ಅವಲೋಕನಗಳು ಹಾಗೂ ವೈಜ್ಞಾನಿಕ ಪ್ರಯೋಗಗಳು ನಿರ್ದಿಷ್ಟ ಸಾಮಾಜಿಕ ಸಂದರ್ಭಗಳಲ್ಲಿ, ಕೆಲವೊಮ್ಮೆ ಅವುಗಳ ಒತ್ತಾಯದ ಪರಿಣಾಮವಾಗಿ, ನಡೆಸಲಾಗಿದ್ದುವು. ಅದನ್ನು ಎಷ್ಟೋ ಚರಿತ್ರಕಾರರು ಗಣನೆಗೇ ತೆಗೆದುಕೊಂಡಿರಲಿಲ್ಲ. ಈ ನ್ಯೂನತೆಯನ್ನು ಸಮರ್ಥವಾಗಿ ಸರಿಪಡಿಸಿದ ದೇವಿಪ್ರಸಾದ್ ಹರಪ್ಪ ನಾಗರಿಕತೆಯ ಕಾಲದಿಂದ ಮೌರ್ಯರ ಕಾಲದವರೆಗೆ ತಮ್ಮ ಅಧ್ಯಯನದ ವ್ಯಾಪ್ತಿಯನ್ನು ಹಿಗ್ಗಿಸಿಕೊಂಡರು. ಮೊದಲ ಮತ್ತು ಎರಡನೆಯ ನಗರೀಕರಣದ ಘಟ್ಟಗಳು ಇವು. ೧೯೯೧ರಲ್ಲಿ ಈ



ಇತಿಹಾಸದ ಎರಡನೆಯ ಸಂಪುಟ ಹೊರಬಿದ್ದಾಗ ಪ್ರಸಿದ್ಧ ನಿಯತಕಾಲಿಕ 'ನೇಚರ್'ನಲ್ಲಿ ರಾಬರ್ಟ್ ಟೆಂಪಲ್ ಅದನ್ನು ವಿಮರ್ಶಿಸುತ್ತಾ ಹೀಗೆಂದ : "ಇದು ಕೇವಲ ವಿಜ್ಞಾನದ ಇತಿಹಾಸವಲ್ಲ. ಭಾರತಕ್ಕೆ ಭವಿಷ್ಯ ಇದೆಯೋ ಇಲ್ಲವೋ ಎಂಬ ಪ್ರಶ್ನೆಯನ್ನು ನೇರವಾಗಿ ಎತ್ತಿಕೊಂಡಿರುವ ಗ್ರಂಥ ಇದು. ಚಟ್ಟೋಪಾಧ್ಯಾಯ ಒಬ್ಬ ಧೈರ್ಯಶಾಲಿ ಎನ್ನಬೇಕು. ಏಕೆಂದರೆ ಅವರು ಆ ಮೂಲಭೂತ ಸಮಸ್ಯೆಯನ್ನು ಎದುರಿಸಿದ್ದಾರೆ. ಕಾಲಾನುಕ್ರಮದಲ್ಲಿ ಭಾರತದಲ್ಲಿ ವಿಜ್ಞಾನದ ಬೆಳವಣಿಗೆಯನ್ನು ಅದುಮಿಟ್ಟ ಹಿಂದು ಅಂಧಶ್ರದ್ಧಾಳುಗಳ ಉಪಟಳದ ಇತಿಹಾಸವನ್ನು ಇಲ್ಲಿ ತೆಗೆದಿರಿಸಲಾಗಿದೆ. ಇದರಿಂದ ಸಮಕಾಲೀನ ಭಾರತಕ್ಕೆ ಸಂದೇಶ ಸ್ಪಷ್ಟವಾಗಿದೆ."

ದೇವಿಪ್ರಸಾದ್ ತಮ್ಮೆಲ್ಲ ಸಂಶೋಧನೆಗಳಲ್ಲಿ ಕಲೆ ಹಾಕಿದ ಮಾಹಿತಿ, ವಿಶ್ಲೇಷಣೆ ಮತ್ತು ಸಂದೇಶ ಯಾರ ಕಣ್ಣಿನ್ನೂ ತಪ್ಪಿಸುವಂತಿಲ್ಲ : ವಿಶೇಷತಃ ನಮ್ಮ ಮುಂದೆ ಅಂಧಶ್ರದ್ಧಾಳುಗಳ ರೌದ್ರತೆ ಪ್ರದರ್ಶನವಾಗುತ್ತಿರುವಾಗ. ಇದೇ ಇತಿಹಾಸದ ಮೂರನೆಯ ಸಂಪುಟವು ದೇವಿಪ್ರಸಾದ್ ಗತಿಸಿದ ನಂತರ ಪ್ರಕಟವಾಯಿತು.

ತತ್ತ್ವಶಾಸ್ತ್ರದ ಇಬ್ಬರು ದೊಡ್ಡ ವಿದ್ವಾಂಸರು ದೇವಿಪ್ರಸಾದ್‌ಗೆ ಪದವಿ ತರಗತಿಗಳ ಹಾಗೂ ಸ್ನಾತಕೋತ್ತರ ಹಂತದಲ್ಲಿ (೧೯೩೬ ಮತ್ತು ೧೯೪೨) ತತ್ತ್ವಶಾಸ್ತ್ರ ಬೋಧಿಸಿದ್ದರು : ಎಸ್. ರಾಧಾಕೃಷ್ಣನ್ ಮತ್ತು ಎಸ್. ಎನ್. ದಾಸ್‌ಗುಪ್ತ; ಅದು ಕಲ್ಕತ್ತ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಯಾಗಿದ್ದಾಗ. ಯುವ ದೇವಿಪ್ರಸಾದರ ಕಾಲೆಳೆಯುವುದು ಮೊದಲ ಪ್ರಾಧ್ಯಾಪಕರ ಹವ್ಯಾಸ : ಅದಕ್ಕಾಗಿ ಅವರು ಹಾಕುತ್ತಿದ್ದ ಪ್ರಶ್ನೆ – "ಏನಪ್ಪಾ , ಇದನ್ನು ಕುರಿತು ನಿನ್ನ ಗುರು ಏನು ಹೇಳುತ್ತಾನೆ?" ಆ ಗುರು ಕಾರ್ಲ್ ಮಾರ್ಕ್ಸ್. ಯುವ ದೇವಿಪ್ರಸಾದ್ ಉತ್ತರಗಳಿಗೆ ತಡಕಾಡಿದ್ದುದಿಲ್ಲ. ಈ ಸ್ವಭಾವ ಇಡೀ ಜೀವನಪರ್ಯಂತ ಅವರದಾಗಿತ್ತು. ವಿದ್ಯಾರ್ಥಿದೆಸೆ ಮುಗಿದ ಕೆಲವು ದಶಕಗಳ ನಂತರ ಇದೇ ಪ್ರಾಧ್ಯಾಪಕರು ಒಮ್ಮೆ ತಮ್ಮ ಹಿರಿಯ ವಿದ್ಯಾರ್ಥಿಯನ್ನು ಭೇಟಿಯಾಗುವ ವೇಳೆಗೆ ಅವರು ದೇಶದ ಅಧ್ಯಕ್ಷರಾಗಿದ್ದರು. ಸಿಮ್ಲಾದಲ್ಲಿರುವ ಪ್ರೌಢ ಅಧ್ಯಯನಗಳ ಕೇಂದ್ರದಲ್ಲಿ ಒಂದು ವಿಚಾರಗೋಷ್ಠಿಯ ಉದ್ಘಾಟನೆಗೆಂದು ಅವರು ಬಂದಿದ್ದರು; ದೇವಿಪ್ರಸಾದ್ ಗೋಷ್ಠಿಯೊಂದರಲ್ಲಿ ಪಾಲ್ಗೊಳ್ಳಲು ಆಮಂತ್ರಿತರಾಗಿದ್ದರು. ಆಗ್ಗೆ ದೇವಿಪ್ರಸಾದ್ ವಯಸ್ಸು ೬೦ನ್ನು ಮೀರಿತ್ತು. ರಾಧಾಕೃಷ್ಣನ್ ತಮ್ಮ ಶಿಷ್ಯನನ್ನು ಗುರುತಿಸಿದರು, ಹತ್ತಿರಕ್ಕೆ ಕರೆದರು, ಮಾರ್ಕ್ಸ್‌ವಾದವನ್ನು ಶ್ರದ್ಧೆಯಿಂದ ಅಭ್ಯಾಸ ಮಾಡುವ ಕೆಲಸ ಮುಂದುವರಿಸಿದ್ದಕ್ಕಾಗಿ ಅಭಿನಂದಿಸಿದರು.

ಇವರನ್ನು ಅವರ ಆಪ್ತರೆಲ್ಲಾ ಕರೆಯುತ್ತಿದ್ದುದು 'ದೇಬಿದಾ' ಎಂದು. ಸಿಮ್ಲಾದಲ್ಲಿ ಅಂದು ಅವರ ಪಕ್ಕದಲ್ಲಿದ್ದವರು ಒಬ್ಬರು 'ದೇಬಿದಾ, ಇಂದಿಗೆ ನೀನು ಧನ್ಯನಾದೆ' ಎಂದರು. ಅದಕ್ಕೆ ಹಾದಿ ಎಷ್ಟು ಕಠಿಣವಾಗಿದ್ದಿತೆಂಬುದು ದೇಬಿದಾಗೆ ಮಾತ್ರವೇ ಗೊತ್ತಿರಲಿಲ್ಲ; ಅವರಂತೆ ಬೇರೆಯವರನೇಕರು ಅತಾರ್ಕಿಕ ವಿರೋಧಗಳನ್ನು ಎದುರಿಸಿದ್ದುದು ಎಲ್ಲರಿಗೂ ತಿಳಿದ ವಿಷಯ. ಸಹೋದ್ಯೋಗಿಗಳದೆಷ್ಟು ಮಂದಿ ದೇವಿಪ್ರಸಾದರನ್ನು ಕನಸುಗಾರನೆಂದು ಹಂಗಿಸಿದ್ದರು ! ಮತ್ತಿನ್ನೆಷ್ಟು ಮಂದಿ ಅವರಿಗೆ ಬೌದ್ಧಿಕ ಬಹಿಷ್ಕಾರ ಹಾಕಿದ್ದರು ! "ಜ್ಞಾನದೇಗುಲ"ಗಳೆನ್ನಲಾದ ವಿಶ್ವವಿದ್ಯಾನಿಲಯಗಳಲ್ಲಿ ಅವರಿಗೆ ಪುರಸ್ಕಾರ ನೀಡಲು ಹಿಂದೇಟು ಹಾಕಿದವರೇ ಹೆಚ್ಚು. ಅದನ್ನೆಲ್ಲಾ ಹಿಮ್ಮೆಟ್ಟಿಸಿ ಖ್ಯಾತಿ ಗಳಿಸಿದಾಗ ದೇವಿಪ್ರಸಾದರ ಕೃತಿಗಳಿಗೆ ಮೌನವನ್ನೇ ಪ್ರತಿಕ್ರಿಯೆಯನ್ನಾಗಿ ನೀಡಿದವರೂ ಬೇಕಾದಷ್ಟು ಮಂದಿ ಇದ್ದರು. ಆದರೆ ಅವರಿಗೆ ದಕ್ಕಬೇಕಾದ ಶ್ಲಾಘನೆ ಮತ್ತು ಮಾನ್ಯತೆಯನ್ನು ಯಾರೂ ತಡೆಹಿಡಿಯಲಾಗಲಿಲ್ಲ. ಮುಜುಗರದಿಂದ ಅದನ್ನು ನೀಡಿದವರೂ ಉಂಟು. ಒಂದು ಚಾರಿತ್ರಿಕ ವ್ಯಂಗ್ಯವೆಂದರೆ, ಸ್ವದೇಶದಲ್ಲಿ ಅವರಿಗೆ ಮಾನ್ಯತೆ

## ಶ್ರೀಮಂತರು ಭಿಕ್ಷೆ ಬೇಡುತ್ತಿದ್ದಾರೆ




**ಕು**ರುಡು ಕಾಂಚಾಣಾಕ್ಕೆ
ಕಣ್ಣು ಬಂದಿದೆ
ಸಿರಿಗರ ಬಡಿದವರಿಗೆ
ಎಚ್ಚರವಾಗಿದೆ

ಮೈಮೇಲೆ ಕೋಟು ಸೂಟು
ಬೂಟು, ಮೇಲೊಂದಿಷ್ಟು ಸೆಂಟು
ಕೈಯಲಿ ಬೆಳ್ಳಿ ಬಂಗಾರದ ತಟ್ಟೆ
ಜೊತೆಗೆ ಹಸಿದ ಹೊಟ್ಟೆ

ಅಲೆಯುತ್ತಾರೆ ಬೀದಿ ಬೀದಿ
ತುತ್ತು ಅನ್ನಕ್ಕಾಗಿ ಹನಿ ನೀರಿಗಾಗಿ
ಅನ್ನದಾತನ ಅಂಗಲಾಚುತ್ತ
ನೇಗಿಲ ಯೋಗಿಯ ಹುಡುಕುತ್ತ
ಭೂ ತಾಯಿಯ ಕ್ಷಮೆಯನು ಕೇಳುತ್ತ
ಕಂಗಾಲಾಗಿದೆ ಉಳ್ಳವರ ಚಿತ್ತ

ಸೋತ ರೈತ, ಜೀವವಿಲ್ಲದ ಭೂಮಿ
ಇವರಿಬ್ಬರ ನೋವ ಸಹಿಸದ ವರುಣ
ಎಲ್ಲರ ಮೌನ ಕ್ರಾಂತಿಯ ಹರತಾಳಕ್ಕೆ
ತಲ್ಲಣಗೊಂಡಿದೆ ಕಾಂಚಾಣ

ಇನ್ನೆಲ್ಲಿಯ ಅನ್ನ ನೀರು ?
ಉಳುವ ಯೋಗಿಯ
ಬೆವರ ಬೆಲೆ ಅಳಸಿ
ದುಡ್ಡಿನ ಮದದಲಿ
ಮೆರೆಸವರಲ್ಲವೇ ?
ಇದೆಂತಹ ದುಸ್ಥಿತಿ
ಹಲುಬುವುದೇತಕೆ ?

ಉಪ್ಪು ತಿಂದವರು
ನೀರು ಕುಡಿಯಲೇ ಬೇಕು
ಹದ್ದು ಮೀರಿದವರ ಬದುಕಿಗೆ
ಗುದ್ದು ಬೀಳಲೇ ಬೇಕು

ರೈತ ಕಾಣೆಯಾಗಿದ್ದಾನೆ
ಶ್ರೀಮಂತರು ಭಿಕ್ಷೆ ಬೇಡುತ್ತಿದ್ದಾರೆ !

ಲತಾ ರಮೇಶ ವಾಲಿ
ಹೊಸ ಬಸ್ಟ್ಯಾಂಡ್ ಹತ್ತಿರ,
ಸವಣೂರು

ನೀಡಲಾದ್ದು ಅನೇಕ ವಿದೇಶಗಳು ಅದನ್ನು ನೀಡಿದ ನಂತರ! ಇದೊಂದು ಅಪಥ್ಯವಾದ ಪದ್ಧತಿ, ಆದರೆ ನಮ್ಮ ದೇಶದಲ್ಲಿ ಯಾವಾಗಲೂ ಇದ್ದದ್ದೆ. ೧೯೭೦ರ ದಶಕದ ಅಂತ್ಯದಲ್ಲಿ ಅಖಿಲ ಭಾರತ ತತ್ತ್ವಶಾಸ್ತ್ರಜ್ಞರ ಸಮ್ಮೇಳನ ಜಾರಿಯಲ್ಲಿತ್ತು. ಪ್ರತಿ ಎರಡು ವರ್ಷಕ್ಕೊಮ್ಮೆ ನಡೆಯುವ ಸಮಾವೇಶ ಇದು. ಅಲ್ಲಿ ಒಬ್ಬ ಹಿರಿಯ ಪ್ರಾಧ್ಯಾಪಕರು ನಿರ್ಣಯವೊಂದನ್ನು ಚರ್ಚೆಗೆ ಮಂಡಿಸಿದ್ದರು. ಅದರ ಸಾರ ಇದು : "ತನ್ನ ಕೃತಿಗಳ ಮೂಲಕ ದೇವಿಪ್ರಸಾದ ಚಟ್ಟೋಪಾಧ್ಯಾಯ ಯುವ ಪೀಳಿಗೆಯಲ್ಲಿ, ತತ್ತ್ವಶಾಸ್ತ್ರಕಾರರ ನಡುವೆ, ವಿಷಗಾಳಿ ಹಬ್ಬಿಸುತ್ತಿರುವುದನ್ನು ಪರಿಗಣಿಸಿ, ಅವರ ಅರುಚಿಕರ ಪ್ರಭಾವವನ್ನು ತಡೆಗಟ್ಟಲು ಕ್ರಮಗಳನ್ನು ಕೈಗೊಳ್ಳ ಬೇಕೆಂದು ಈ ಸಮಾವೇಶವು ನಿರ್ಣಯಿಸುತ್ತದೆ." ಚರ್ಚೆ ನಡೆದು ನಿರ್ಣಯವನ್ನು ಕೈಬಿಡಲಾಯಿತು, ನಿಜ; ಆದರೆ ದೇವಿಪ್ರಸಾದರು ಕೆಲವು ತತ್ತ್ವಶಾಸ್ತ್ರ ವಿದ್ವಾಂಸರಿಗೆ ಒಬ್ಬ ಭಯೋತ್ಪಾದಕರಾಗಿ ಕಂಡು ಬಂದಿದ್ದುದು ನಮ್ಮ ಬೌದ್ಧಿಕ ಪ್ರಪಂಚದ ಅವಲಕ್ಷಣಕ್ಕೆ ಸಾಕ್ಷಿಯಾಗಿ ಉಳಿದಿದೆ. "ವಿಷಗಾಳಿ ಹಬ್ಬಿಸಿದ" ಎನ್ನಲಾದ ಪ್ರಾಧ್ಯಾಪಕ ದೇವಿಪ್ರಸಾದ್ ಕೆಲವೇ ವರ್ಷಗಳ ನಂತರ ಭಾರತೀಯ ತತ್ತ್ವಶಾಸ್ತ್ರ ಸಂಶೋಧನಾ ಸಮಿತಿಯ ಸದಸ್ಯರಾದರು, ಆ ಸಂಸ್ಥೆಗಾಗಿ ಕೆಲವು ಮೌಲಿಕ ಕೃತಿಗಳನ್ನು ಸಂಪಾದಿಸಿ ಕೊಟ್ಟರು, ಸಂಶೋಧನಾ ಯೋಜನೆಗಳನ್ನು ಸಿದ್ಧ ಗೊಳಿಸಿದರು. ಅಂತೆಯೇ ಅವರು ಭಾರತೀಯ ಇತಿಹಾಸ ಸಂಶೋಧನಾ ಸಮಿತಿಯ ಸದಸ್ಯರಾಗಿಯೂ ಜವಾಬ್ದಾರಿಗಳನ್ನು ನಿರ್ವಹಿಸಿ ಎಲ್ಲರಿಂದಲೂ ಮೆಚ್ಚುಗೆ ಪಡೆದರು. ಭಾರತೀಯ ವಿಜ್ಞಾನ – ತಂತ್ರಜ್ಞಾನ ಸಂಶೋಧನಾ ಸಮಿತಿಯ ಅಂಗವಾಗಿ "ನಿಸ್ಟಾಡ್ಸ್"ನ ಒಂದು ಯೋಜನೆಗೆ ನಿರ್ದೇಶಕರಾಗಿ ಹಲವು ವಿದ್ವಾಂಸರನ್ನು ಜೊತೆಗೂಡಿಸಿ ಮಹತ್ವದ ಪ್ರಕಟಣೆ ಗಳನ್ನು ಹೊರತಂದರು. "ಪ್ರಾಚೀನ ಭಾರತೀಯ ವಿಜ್ಞಾನ ಮತ್ತು ತಂತ್ರಜ್ಞಾನದ ಇತಿಹಾಸ" ಎಂಬ ಶೀರ್ಷಿಕೆಯಲ್ಲಿ ಅವರು ಪ್ರಕಟಿಸಿದ ಮೂರು ಸಂಪುಟ ಗಳು ಅನನ್ಯವಾದುವೆಂದು ವಿದ್ವಜ್ಜನ ಒಪ್ಪಿದ್ದಾರೆ.

ನನ್ನದೇ ಒಂದು ಸ್ವಾರಸ್ಯಕರ ಅನುಭವದ ಪ್ರಸ್ತಾಪ ಅಸಂಗತವಾಗಲಾರದು. ತಿರುಪತಿಯ ಶ್ರೀವೆಂಕಟೇಶ್ವರ ವಿಶ್ವವಿದ್ಯಾಲಯದ ತತ್ತ್ವಶಾಸ್ತ್ರ ವಿಭಾಗವು ಮೂರು ದಿನಗಳ ರಾಷ್ಟ್ರೀಯ ವಿಚಾರಗೋಷ್ಠಿಯನ್ನು ಆಯೋಜಿಸಿತ್ತು. ಕಾರ್ಲ್ ಮಾರ್ಕ್ಸ್ ತೀರಿಕೊಂಡ ಶತಮಾನದ ನಂತರದ ಒಂದು ಕಾರ್ಯಕ್ರಮ ಅದು. ಜಾದವಪುರ ವಿಶ್ವವಿದ್ಯಾಲಯದಿಂದ ಒಬ್ಬ ಯುವಕ ಬಂದಿದ್ದ. ಸುಮಾರು ಮೂವತ್ತರ ಹರೆಯದವನು. ಆತ ತತ್ತ್ವಶಾಸ್ತ್ರದ ಅಧ್ಯಾಪಕ. ಚರ್ಚೆಯೊಂದರಲ್ಲಿ ಭಾಗವಹಿಸುತ್ತಾ ಅಲ್ಲಿರದಿದ್ದ ದೇವಿಪ್ರಸಾದರ ಬಗ್ಗೆ ಅತ್ಯಂತ ಹೇಯವಾದ ಮೂದಲಿಕೆಯ ಮಾತು ಗಳನ್ನಾಡಿ ಭಾವೋದ್ರೇಕ ತೋರ್ಪಡಿಸಿದ. ಅಂತಹ ಪ್ರಸಂಗವೇನಿತ್ತು? ನನ್ನ ಪ್ರಬಂಧ ಮಂಡಿಸುವಾಗ ದೇವಿಪ್ರಸಾದರ ಯಾವುದೋ ಅಭಿಪ್ರಾಯವನ್ನು ಪ್ರಸ್ತಾಪಿಸಿ ಅದು ಸರಿಯಾದ ನಿಲುವೆಂದು ಸಮರ್ಥಿಸಿದ್ದೆ. ಋಗ್ವೇದದ ಒಂದು ಸೂಕ್ತಕ್ಕೆ ಸಂಬಂಧಿಸಿದ್ದ ಚರ್ಚೆ




ಅದು. "ಅರಣಿ"ಗಳನ್ನು ಲೈಂಗಿಕತೆಯ ಹಿನ್ನೆಲೆಯಲ್ಲಿ ದೇವಿಪ್ರಸಾದ್ ವ್ಯಾಖ್ಯಾನಿಸಿಬಿಟ್ಟಿದ್ದಾರೆಂದು ಈತನಿಗೆ ಕಸಿವಿಸಿಯಾಗಿ ಏನೇನೋ ಆರ್ಭಟಿಸಿದ. ತನ್ನ ಬಣದ ಸಾಂಪ್ರದಾಯಿಕ ವ್ಯಾಖ್ಯಾನವನ್ನು ದೇವಿಪ್ರಸಾದ್ ಬುಡಮೇಲು ಮಾಡಿದ್ದರೆಂದು ಕ್ರುದ್ಧನಾಗಿದ್ದ ಈತನಿಗೆ ಇನ್ನೆಲ್ಲಿ ತನ್ನವರ ವ್ಯಾಖ್ಯಾನ ಮುದುಡಿಹೋಗುವುದೋ ಎಂಬ ತಳಮಳ! ಚಾರಿತ್ರಿಕವಾಗಿ ದೇವಿಪ್ರಸಾದ್ ನೀಡಿದ್ದ ವಿವರಣೆಯನ್ನು ಸಹನೆಯಿಂದ ಅಭ್ಯಾಸ ಮಾಡುವಷ್ಟು ಬೌದ್ಧಿಕ ಶಿಸ್ತು ಆತನನಲ್ಲಿಲ್ಲದಿದ್ದುದು ಶೋಚನೀಯ. ಅಂತಹ ವಿದ್ವಾಂಸರು ಹಲವರು ಆಗಿಹೋಗಿದ್ದಾರೆ.

ಯಾವುದೇ ಅರ್ಥೈಸುವಿಕೆಯನ್ನು ಹಂಗಿಸಿ ಲೇವಡಿ ಮಾಡುವುದಾಗಲಿ, ಅದನ್ನು ವಿರೋಧಿಸಿ ಕೇಕೆ ಹಾಕುವು ದಾಗಲಿ ದೇವಿಪ್ರಸಾದರ ಪದ್ಧತಿಯಲ್ಲ. ಭಾರತೀಯ ಪರಂಪರೆಯ ಬಗೆಗಿನ ಅವರ ಅಪಾರ ಹೆಮ್ಮೆಯನ್ನು ತಿಳಿಯಲು ಅವರ ಮಾತುಗಳನ್ನು ಕೇಳಬೇಕಿತ್ತು ಇಲ್ಲವೆ ಅವರ ಕೃತಿಗಳನ್ನು ಓದಬೇಕಿತ್ತು. ಹರಪ್ಪ ನಾಗರಿಕತೆಯ ಶ್ರೇಷ್ಠ ಸಾಧನೆಗಳು, ಋಗ್ವೇದದ ಅಮೋಘ ಕಾವ್ಯತ್ವ, ಉಪನಿಷತ್ತುಗಳ ಗಹನ ಚಿಂತನೆ, ಮುಂತಾದುವುಗಳು ಅವರನ್ನು ಪುಳಕಿತರನ್ನಾಗಿಸುತ್ತಿದ್ದವು. ಛಾಂದೋಗ್ಯ ಉಪನಿಷತ್ತಿನ ಉದ್ದಾಲಕ ಆರುಣಿಯ ವೈಜ್ಞಾನಿಕ ಪ್ರಯೋಗಶೀಲತ್ವವು ವಿಶ್ವದ ವಿಜ್ಞಾನದ ಇತಿಹಾಸದಲ್ಲಿ ಅಮರವಾದುದೆಂದೂ ಆದಿಯಾದುದೆಂದೂ ಸ್ಥಾಪಿಸು ವಾಗ ಅವರ ಹುಮ್ಮಸ್ಸು ಮತ್ತು ಹೆಮ್ಮೆ ಅವಿಸ್ಮರಣೀಯ ವಾಗಿರುತ್ತಿತ್ತು. ವಿಶ್ವದ ಮೊದಲ ಪ್ರಯೋಗ ವಿಜ್ಞಾನಿಯ ಪಟ್ಟವನ್ನು ಉದ್ದಾಲಕನಿಗೆ ನೀಡಿದ್ದನ್ನು ಪ್ರಶ್ನಿಸಿದವರು ಹಲವರು. ಪ್ರಾಚೀನ ಚೀನಾದ ಸಂಸ್ಕೃತಿ ಮತ್ತು ನಾಗರಿಕತೆಯ ಇತಿಹಾಸವನ್ನು ಹಲವು ಸಂಪುಟ ಗಳಲ್ಲಿ ರಚಿಸಿದ್ದ ಕೇಂಬ್ರಿಜ್ಜಿನ ಉದ್ದಾಮ ಜೀವಶಾಸ್ತ್ರಜ್ಞ – ಇತಿಹಾಸಕಾರ ಜೋಸೆಫ್ ನೀಡ್‌ಹ್ಯಾಮ್ ಸಮ್ಮುಖದಲ್ಲಿ ಉದ್ದಾಲಕನ ಪ್ರಶಂಸನೀಯ ಪ್ರಯೋಗ ಗಳನ್ನು ದೇವಿಪ್ರಸಾದ್ ವಿಸ್ತಾರವಾಗಿ ಬಣ್ಣಿಸಿ ಅವನು ಏನಿಲ್ಲವೆಂದರೂ ಕ್ರಿ. ಪೂ. ಎಂಟು ಅಥವಾ ಏಳನೆಯ ಶತಮಾನದವನೆಂದು ದಾಖಲೆಗಳ ಸಮೇತ ಸ್ಥಾಪಿಸಿ ದರು. ಉದ್ದಾಲಕನು ಮೂಲತಃ ತರ್ಕಬದ್ಧವಾದ ಜ್ಞಾನ ಪಡೆಯಲು ಅವಲೋಕನ ಮತ್ತು ಪ್ರಯೋಗ ಗಳನ್ನು ಅವಲಂಬಿಸಿದ್ದನೆಂಬುದನ್ನು ನೀಡ್‌ಹ್ಯಾಮ್ ಅಂಗೀಕರಿಸಿದರು.

ದೇವಿಪ್ರಸಾದರ ಯಾನ ಆರಂಭವಾದುದು ಮುಂಬೈನ ಒಂದು ಕಾಲೇಜಿನಲ್ಲಿ ಅಧ್ಯಾಪಕರಾಗಿ; ೧೯೪೦ರ ದಶಕದ ಆರಂಭದಲ್ಲಿ. ಆಶ್ಚರ್ಯವೆಂದರೆ ಅವರು ಮೊದಲಿಗೆ ಮುಂಬೈಗೆ ಹೋದದ್ದು ಚಲನಚಿತ್ರ ಗಳಿಗೆ ಕತೆ–ಸಂಭಾಷಣೆ ಬರೆಯುವ ಉದ್ದೇಶದಿಂದ. ಎರಡೋ ಮೂರೋ ಚಿತ್ರಗಳಿಗೆ ಬರೆದು ವಿರಮಿಸಿದರು. ಅದರಲ್ಲಿ ಒಂದು ಪ್ರಸಿದ್ಧಿಗೆ ಬಂದಿದ್ದಿತೆಂದು ಹೇಳುತ್ತಾರೆ. ಕೆಲಕಾಲದನಂತರ ಕಲ್ಕತ್ತೆಗೆ ಹಿಂದಿರುಗಿ ಸಿಟಿ ಕಾಲೇಜಿನಲ್ಲಿ ಅಧ್ಯಾಪಕರಾಗಿ ೧೯೭೦ರ ದಶಕದ ಕಡೆಯವರೆಗೂ ಅಲ್ಲಿದ್ದರು. ಕಲ್ಕತ್ತ ವಿಶ್ವವಿದ್ಯಾನಿಲಯ ಅವರಿಗೆ ಮುಂದೊಂದು ದಿನ ಡಿ.ಲಿಟ್. ಪದವಿ ನೀಡಿತು. ಆದರೆ ಎರಡು ಮೂರು ಬಾರಿ ಅಭ್ಯರ್ಥಿ ಆಗಿದ್ದಾಗ ಅಧ್ಯಾಪಕನ ಕೆಲಸ ನೀಡಿರಲಿಲ್ಲ. ಕಾಲಿದಾಸ ಭಟ್ಟಾಚಾರ್ಯ ಎಂಬ ಪ್ರಸಿದ್ಧ ವೇದಾಂತಿ ಅಲ್ಲಿ ಮುಖ್ಯಸ್ಥರು. ಅವರೊಮ್ಮೆ ಹೇಳಿದ್ದರಂತೆ : "ಈ ವಿಭಾಗದಲ್ಲಿ ನಾನಿರಬೇಕು, ಇಲ್ಲವೇ ನೀನಿರಬೇಕು. ಇಬ್ಬರೂ ಇರುವುದು ಅಸಾಧ್ಯ" ಎಂದು. ಆಮೇಲೆ ೧೯೭೦ರ ದಶಕದ ನಂತರ ಪೂರ್ಣಾವಧಿ ಸಂಶೋಧಕ – ಲೇಖಕನಾಗಿ ದೇವಿಪ್ರಸಾದ್ ಶಿಸ್ತು–ಶ್ರದ್ಧೆಗಳಿಂದ ಕೆಲಸ ಮಾಡಿದರು. ಅದಕ್ಕೆ ಮುನ್ನ ೧೯೫೦ರ ದಶಕದ ಆದಿಭಾಗದಲ್ಲಿ ಅವರು ಲಂಡನ್ನಿಗೆ ತೆರಳಿ ಬ್ರಿಟಿಷ್ ಮ್ಯೂಸಿಯಂನಲ್ಲಿ ಆಳವಾದ ಅಧ್ಯಯನದಲ್ಲಿ ಮುಳುಗಿದ್ದರು. ಯಾವ ವಿದ್ಯಾರ್ಥಿವೇತನವೂ ಇಲ್ಲದೆ ಸ್ವಂತ ಖರ್ಚಿನಲ್ಲಿ ಹಾಗೆ ಹೋದದ್ದು ಅವರ ಅಧ್ಯಯನ ನಿಷ್ಠೆಗೆ ಸಾಕ್ಷಿ. ಊಟ ಇದ್ದರೆ ಇತ್ತು, ಇಲ್ಲದಿದ್ದರೆ ಇಲ್ಲ; ಉಳಿತಾಯದ ಯೋಜನೆ ಹಾಗಿದ್ದಿತಂತೆ. ಅವರ ಅಧ್ಯಯನದ ವಿಧಾನಗಳನ್ನು ಚರ್ಚಿಸಲು ಆಗಿಂದಾಗ್ಗೆ ಬರ್ಮಿಂಗ್‌ಹ್ಯಾಮ್‌ಗೆ ಬೇರೆ ಹೋಗಬೇಕಾಗುತ್ತಿತ್ತು. ಏಕೆಂದರೆ, ಕೇಂಬ್ರಿಜ್‌ನಿಂದ ದೂಡಲ್ಪಟ್ಟಿದ್ದ ಜಾರ್ಜ್ ಥಾಮ್ಸನ್ ಇದ್ದುದು ಅಲ್ಲಿ. ಥಾಮ್ಸನ್ ಇಡೀ ಯೂರೋಪಿನಲ್ಲಿ ಪ್ರಾಚೀನ ಗ್ರೀಸ್ ಸಾಹಿತ್ಯ–ಸಂಸ್ಕೃತಿ ಗಳ ಬಗ್ಗೆ ಅಪ್ರತಿಮ ಪಾಂಡಿತ್ಯ ಹೊಂದಿದ್ದವರೆಂದು ಪ್ರಸಿದ್ಧರಾಗಿದ್ದರು. ಲಂಡನ್ನಿನ ಅಧ್ಯಯನದ ಫಲವೇ ೧೯೫೯ರಲ್ಲಿ ಪ್ರಕಟವಾದ 'ಲೋಕಾಯತ'. (ಮೊದಲು ಅದು ಬಂಗಾಳಿ ಭಾಷೆಯಲ್ಲಿ ಪ್ರಕಟವಾಗಿತ್ತು. ನಂತರದ ದಶಕಗಳಲ್ಲಿ ಅದು ಕನ್ನಡ, ತೆಲುಗು, ಮಲಯಾಳಂ, ಅಸ್ಸಾಮಿ, ಹಿಂದಿ, ರಷ್ಯನ್, ಚೀನಿ, ಜಪಾನಿ, ಜರ್ಮನ್ ಹೀಗೆ ಅನೇಕ ಭಾಷೆಗಳಿಗೆ ಅನುವಾದಿಸಲ್ಪಟ್ಟಿದೆ.) ಈ ಮಹದ್ಗ್ರಂಥವು ವಿದ್ವಜ್ಜನರನ್ನು ಚುಚ್ಚಿತು, ಹೊಡೆದೆಬ್ಬಿಸಿತು, ಬೆಚ್ಚಿಬೀಳಿಸಿತು; ಕೆಲವರಿಗೆ ಆಘಾತವೂ ಆಯಿತು. ವಿದ್ವಾಂಸರಲ್ಲಿ ಮೂರು ಬಗೆಯವರು ಕಂಡುಬಂದರು: ಸಮರ್ಥಕರು, ಕಟ್ಟಾ ವಿರೋಧಿಗಳು, ಮತ್ತು ಓದದೆ ಮುಗುಳ್ನಕ್ಕು ಸುಮ್ಮನೆ ಕೂತವರು. ಕ್ರಾಂತಿಕಾರಿ ಹೋರಾಟದ ಒಂದು ಭಾಗವು ಬೌದ್ಧಿಕ ಸಂಘರ್ಷ ಎಂದು ಲೆನಿನ್ ನಂಬಿದ್ದರು. ದೇವಿಪ್ರಸಾದ್ ಆ

ಹೋರಾಟವನ್ನು ನಮ್ಮಲ್ಲಿ ಮೊನಚಾಗಿ ಆರಂಭಿಸಿದರು. ಅದರಿಂದ ಭಾರತ ಕಮ್ಯುನಿಸ್ಟ್ ಪಕ್ಷವು ಬಲಿಷ್ಠವಾಯಿತೋ ಇಲ್ಲವೋ ಅದು ಬೇರೆ ಪ್ರಶ್ನೆ. (ತಮ್ಮ ವಿದ್ಯಾರ್ಥಿದೆಸೆಯಿಂದ ಕೊನೆಯವರೆಗೆ ದೇವಿಪ್ರಸಾದ್ ಪಕ್ಷದ ಸದಸ್ಯರಾಗಿದ್ದವರು). ಆದರೆ ತರ್ಕಶುದ್ಧ ಮಂಥನ, ವೈಚಾರಿಕ ತಳಹದಿ, ಚಾರಿತ್ರಿಕ ದೃಷ್ಟಿಕೋನ, ಸೈದ್ಧಾಂತಿಕ ಸ್ಪಷ್ಟತೆ, ಇವೆಲ್ಲಾ ಗಟ್ಟಿಗೊಂಡಿದ್ದಂತೂ ನಿಜ. ದುಡಿಯುವ ಜನರ ತತ್ತ್ವಶಾಸ್ತ್ರವೆಂಬುದೇನಾದರೂ ಇದ್ದರೆ ಭಾರತದಲ್ಲಿ ಅದನ್ನು ಅವರಿಗೆ ಕೊಡಮಾಡಿದವರು ದೇವಿಪ್ರಸಾದ್. ಅದು ಅವರ ಅಮೋಘ ಸಾಧನೆ. ಆದ್ದರಿಂದಲೇ ಅವರನ್ನು "ಪ್ರತಿಗಾಮಿ ಅಂಧಶ್ರದ್ಧೆಯ ವಿರುದ್ಧದ ಏಕವ್ಯಕ್ತಿ ಸೈನ್ಯ" ಎಂದು ಕರೆಯಲಾಗುತ್ತಿತ್ತು.

'ಲೋಕಾಯತ'ದ ನಂತರ ದೇವಿಪ್ರಸಾದರ ಲೇಖನಿಯಿಂದ ಸತತವಾಗಿ ಪಾಂಡಿತ್ಯಪೂರ್ಣವಾದ ಸೈದ್ಧಾಂತಿಕ ಗ್ರಂಥಗಳು ಹಲವಾರು ಬಂದವು. ಪ್ರತಿಯೊಂದೂ ಆಳವಾದ ವಿದ್ವತ್ತು, ಹರಹು, ಒಳನೋಟಗಳಿಂದ ಸಂಪದ್ಭರಿತವಾಗಿದ್ದಿತು. ಇಂದಿಗೂ ಅವು ದಿಗ್ದರ್ಶನ ಮಾಡುವಂತಹ ದೀವಿಗೆಗಳು. ಅಲ್ಲಿಂದಾಚೆಗೆ ಅವರ ಕಾರ್ಯಕ್ಷೇತ್ರ ವಿಶಾಲವಾಗಿ ಬೆಳೆಯಿತು. ಹತ್ತಾರು ವಿಶ್ವವಿದ್ಯಾನಿಲಯಗಳು ಅವರನ್ನು ಬರಮಾಡಿಕೊಂಡವು. ೧೯೭೦ರಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಅವರನ್ನು ಡಾ॥ ಹಾ. ಮಾ. ನಾಯಕ್ ಅವರು ಆಹ್ವಾನಿಸಿದರು. "ಇದು ನಮ್ಮೆಲ್ಲರ ಮಾರ್ಗದರ್ಶಕರಾದ ಪ್ರೊ॥ ಎಂ. ಹಿರಿಯಣ್ಣನವರ ವಿಶ್ವವಿದ್ಯಾನಿಲಯ, ಆದ್ದರಿಂದ ನನಗಿಲ್ಲಿ ಯಾರ ಪರಿಚಯವಿಲ್ಲದಿದ್ದರೂ ಆಹ್ವಾನವನ್ನು ಸ್ವೀಕರಿಸಿ ಸಂತೋಷದಿಂದ ಬಂದಿದ್ದೇನೆ" ಎಂದು ವಿಚಾರಗೋಷ್ಠಿಯಲ್ಲಿ ನಿವೇದಿಸಿಕೊಂಡರು. ನಮ್ಮ ರಾಜ್ಯಕ್ಕೆ ಅದೇ ಅವರ ಮೊದಲ ಭೇಟಿ. ನಮ್ಮ ಪರಸ್ಪರ ಪರಿಚಯವೂ ಆಗಲೇ ಆದದ್ದು. ಈ ಭೇಟಿಯ ಪರಿಣಾಮ ಅವರಿಗೆ ಅತೀವ ಸಂತಸದ್ದು. ಹಾಗೆಂದು ಆಗ್ಗೆ ಅವರು ಅಮೆರಿಕಾದ ಸ್ನೇಹಿತ ಡೇಲ್ ರೀಪ್‌ಗೆ ಬರೆದ ಪತ್ರದಲ್ಲಿ ದಾಖಲಿಸಿದ್ದಾರೆ. "ನಾನು ಮಾಡುತ್ತಿರುವ ಕೆಲಸ ನಿರರ್ಥಕವಲ್ಲವೆಂದು ಬೆಂಗಳೂರಿನ ಅನುಭವ ಖಚಿತಪಡಿಸಿದೆ" ಎಂದವರು ಹೇಳಿದ್ದಾರೆ. ಅದು ಅವರಿಗಿದ್ದಂತೆ ನಮಗೂ ಹುರುಪಿನ ಸಂದರ್ಭವೇ ಆಗಿತ್ತು. ಬೇರಾವುದೇ ಊರಿಗಿಂತ ಹೆಚ್ಚಾಗಿ ಅವರು ಭೇಟಿ ನೀಡಿದ್ದು ಬೆಂಗಳೂರಿಗೆ. ಕಲ್ಕತ್ತೆಯನ್ನು ಬಿಟ್ಟು ಬೇರೆಲ್ಲೂ ಅವರಿಗೆ ಬೆಂಗಳೂರು – ಮೈಸೂರುಗಳಲ್ಲಿ ಇದ್ದಷ್ಟು ಸ್ನೇಹಿತರಿರಲಿಲ್ಲ. ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯ ಜೊತೆಗಿನ ಅವರ ನಂಟು ಸದಾ ಅವರಿಗೆ ಉಲ್ಲಾಸ ತರುತ್ತಿತ್ತು, ಬೌದ್ಧಿಕ ಸವಾಲುಗಳನ್ನೆಸೆಯುತ್ತಿತ್ತು. ಕಲ್ಕತ್ತೆಯ ಸಿಟಿ ಕಾಲೇಜಿನಲ್ಲಿ ಅಧ್ಯಾಪನ ಕಾರ್ಯ ಮುಂದುವರಿಸುತ್ತಾ ದೇಶ – ವಿದೇಶಗಳ ಅನೇಕ ಉನ್ನತ ಶಿಕ್ಷಣ ಮತ್ತು ಸಂಶೋಧನಾ ಸಂಸ್ಥೆಗಳಿಗೆ ದೇವಿಪ್ರಸಾದ್ ಹೋಗಿ ಬರುತ್ತಿದ್ದರು. ಆಂಧ್ರ ಮತ್ತು ಪುಣೆ ವಿಶ್ವವಿದ್ಯಾನಿಲಯಗಳಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಕೆಲಸ ಮಾಡಿದರು. ಕಲ್ಕತ್ತಾ ವಿಶ್ವವಿದ್ಯಾನಿಲಯದ ಡಿ.ಲಿಟ್. ಪದವಿ ಪಡೆದರು, ವಿಶ್ವವಿದ್ಯಾಲಯ ಧನಸಹಾಯ ಆಯೋಗದ ಪ್ರತಿಷ್ಠಿತ 'ಹರಿ ಓಂ' ಪ್ರಶಸ್ತಿ ಪಡೆದರು. ಇದು ವಿಜ್ಞಾನದ ಸಂಶೋಧನೆಗಾಗಿ ಮೀಸಲಾದ ಪ್ರಶಸ್ತಿ. ಕಲ್ಕತ್ತ ವಿಶ್ವವಿದ್ಯಾಲಯ ಡಿ.ಲಿಟ್. ಪದವಿ ಕೊಡುವ ಮುನ್ನ ಅದನ್ನು ಪಡೆಯಲು ಅವರು ಅರ್ಹರೇ ಎಂದು ಕೇಳಲು ಹಲವು ವಿದ್ವಾಂಸರಿಗೆ ಪತ್ರ ಬರೆದಿತ್ತು. ಅವರಲ್ಲಿ ಕೇಂಬ್ರಿಜ್‌ನ ಜೋಸೆಫ್ ನೀಡ್‌ಹ್ಯಾಮ್ ಸಹ ಒಬ್ಬರು. ಅವರು ಬರೆದ ಉತ್ತರದ ಸಾರ ಹೀಗಿತ್ತು : "ಇದೇನು ಹೀಗೆ ಕೇಳುತ್ತಿದ್ದೀರಿ? ಅವರು ಅರ್ಹರಲ್ಲದಿದ್ದರೆ ಮತ್ತಾರು ಅರ್ಹರಾಗಲು ಸಾಧ್ಯ? ಈವರೆಗೆ ಅದನ್ನವರಿಗೆ ನೀವು ನೀಡಿಲ್ಲವೆಂದು ತಿಳಿದು ಆಶ್ಚರ್ಯವಾಯಿತು." ಜರ್ಮನ್ ಪ್ರಜಾಪ್ರಭುತ್ವವಾದಿ ಗಣರಾಜ್ಯ ಮತ್ತು ಸೋವಿಯೆತ್ ಒಕ್ಕೂಟಗಳ ವಿಜ್ಞಾನ ಅಕಾಡೆಮಿಗಳು ಅವರಿಗೆ ಸದಸ್ಯತ್ವ ನೀಡಿದವು ಮತ್ತು ಪಶ್ಚಿಮ ಬಂಗಾಳ ಸರ್ಕಾರ ವಿದ್ಯಾಸಾಗರ ಪ್ರಶಸ್ತಿ ನೀಡಿತು. ಇದಾವುದರಿಂದಲೂ ದೇವಿಪ್ರಸಾದ್ ಉಬ್ಬಿ ಹೋಗಲಿಲ್ಲ. ಅವರು ಅದೇ ಹಳೆಯ ಅಧ್ಯಯನಶೀಲ, ಜನಪರ ವಿದ್ವಾಂಸರಾಗಿ ಮುಂದುವರಿದರು. ಅವರಿಗೆ ಭಾರತ ಸರ್ಕಾರವು ಮರಣೋತ್ತರದಲ್ಲಿ 'ಪದ್ಮಭೂಷಣ' ಪ್ರಶಸ್ತಿಯನ್ನು ನೀಡಿತು. ಆದರೆ ದೇವಿಪ್ರಸಾದ್ ಕುಟುಂಬದವರಿಗೆ ಅದರ ಮಾಹಿತಿಯನ್ನಾಗಲಿ, ಪ್ರಶಸ್ತಿ ಫಲಕವನ್ನಾಗಲಿ, ಈವರೆಗೂ ನೀಡಿಲ್ಲ. ಕುಟುಂಬವೂ ಆ ಬಗ್ಗೆ ವಿಶೇಷ ಆಸಕ್ತಿಯನ್ನು ತೋರಿಲ್ಲ.

ಅವರ ಹತ್ತಾರು ಕೃತಿಗಳ ಪೈಕಿ ಕೆಲವನ್ನು ಹೆಸರಿಸಬಹುದು: ಭಾರತೀಯ ತತ್ತ್ವಶಾಸ್ತ್ರ – ಒಂದು ಜನಪ್ರಿಯ ಕೈಪಿಡಿ (೧೯೬೪), ಭಾರತೀಯ ನಾಸ್ತಿಕತೆ (೧೯೬೯), ಭಾರತೀಯ ತತ್ತ್ವಶಾಸ್ತ್ರದಲ್ಲಿ ಕಾಳು–ಜೊಳ್ಳು (೧೯೭೬), ಪ್ರಾಚೀನ ಭಾರತದಲ್ಲಿ ವಿಜ್ಞಾನ ಮತ್ತು ಸಮಾಜ (೧೯೭೭), ತತ್ತ್ವಶಾಸ್ತ್ರಜ್ಞನಾಗಿ ಲೆನಿನ್ (೧೯೭೯) ಜ್ಞಾನ ಮತ್ತು ಮಧ್ಯಪ್ರವೇಶ (೧೯೮೫), ಧರ್ಮ ಮತ್ತು ಸಮಾಜ (೧೯೮೭), ಪ್ರಾಚೀನ ಭಾರತದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನಗಳ ಇತಿಹಾಸ (ಮೂರು ಸಂಪುಟಗಳು , ೧೯೮೬–೮೮), ಇತ್ಯಾದಿ, ಪ್ರಸ್ತುತ ಲೇಖಕ ಮತ್ತು ಎನ್. ಗಾಯತ್ರಿಯವರ ಜೊತೆ ಸೇರಿ 'ದಕ್ಷಿಣ ಭಾರತದ ಸಂಸ್ಕೃತಿಯ ವಿಶ್ವಕೋಶ' (೧೯೮೩) ಎಂಬುದನ್ನು ಸಂಪಾದಿಸಿದ್ದುದು ನಮಗೆ ಹೆಮ್ಮೆಯ ವಿಷಯ. ಭಾರತೀಯ ತತ್ತ್ವಶಾಸ್ತ್ರದ ಪರಂಪರೆಯಲ್ಲಿ ಭೌತವಾದ ಮತ್ತು ಭಾವನಾವಾದದ ಹೊಳೆಗಳು ಮೊದಲಿನಿಂದಲೂ ಇವೆ, ಪರಸ್ಪರ ಸಂಘರ್ಷ ನಡೆಸಿವೆ ಹಾಗೂ ಪ್ರಭಾವ ಬೀರಿವೆ ಎಂಬುದನ್ನು ಸಪ್ರಮಾಣವಾಗಿ ವಿಶದೀಕರಿಸಿದ್ದು ದೇವಿಪ್ರಸಾದರ ಮಹತ್ತರ ಕೊಡುಗೆ. "ಭಾರತೀಯ ತತ್ತ್ವಶಾಸ್ತ್ರದ ಎರಡು ಪ್ರವೃತ್ತಿಗಳು" ಎಂಬ ಉಪನ್ಯಾಸವನ್ನು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಅವರು ನೀಡಿದ್ದರು ಮತ್ತು ಅದು ಪ್ರಕಟವಾಗಿದೆ. ಹೀಗೆ ದೀಪಧಾರಿಯಾಗಿ ನಮ್ಮನ್ನು ಮುನ್ನಡೆಸಿದ ದೇವಿಪ್ರಸಾದ್ ತಾವಿಲ್ಲದಿದ್ದರೂ ಕಂಗೊಳಿಸುವ ದೀಪವನ್ನು ಬಿಟ್ಟು ಹೋಗಿದ್ದಾರೆ. ಅದನ್ನು ನಂದದೆ ಪ್ರಕಾಶಮಾನವಾಗಿ ಉಳಿಯುವಂತೆ ಮಾಡುವ ಕೆಲಸ ನಮ್ಮ ಪೀಳಿಗೆಯವರದ್ದಾಗಿದೆ. ಇತ್ತೀಚಿನ ದಶಕಗಳಲ್ಲಿ ಹಲವು ಅವೈಜ್ಞಾನಿಕ ಸಂಶೋಧನೆಗಳು ಪ್ರಖರವಾದ ಸಂಶೋಧನೆಗಳೆಂಬ ರೀತಿಯಲ್ಲಿ ಬಿಂಬಿತವಾಗುತ್ತಿವೆ, ಉಚ್ಚಕಂಠದಿಂದ ಕೂಗಿದರೆ ಅದೇ ಸತ್ಯವೆಂಬ ಮೋಹ ವ್ಯಾಪಿಸುತ್ತಿದೆ. "ಇತಿಹಾಸದ ತಪ್ಪುಗಳನ್ನು ತೊಡೆದುಹಾಕುವ" ಯತ್ನದ ಹೆಸರಲ್ಲಿ ಭೀಕರ ಹಿಂಸೆ ಮತ್ತು ಅವೈಚಾರಿಕತೆಗಳು ಹೆಚ್ಚುತ್ತಿವೆ. ಅಂತಹ ಸನ್ನಿವೇಶದಲ್ಲಿ ದೇವಿಪ್ರಸಾದ್ ಮೊಳಗಿಸಿದ ಧ್ವನಿ ಮತ್ತು ಹೊತ್ತಿಸಿದ ದೀಪ ನಮಗೆ ಪ್ರಚಂಡ ಬೌದ್ಧಿಕ ಆಯುಧಗಳಾಗಿ ಕಂಡುಬರುತ್ತವೆ. ಭೂತದ ವೈಜ್ಞಾನಿಕ ಶೋಧ ಮತ್ತು ಭವಿಷ್ಯತ್ತಿನ ಅಡಿಪಾಯ, ಎರಡಕ್ಕೂ ಅವರ ಅಸಾಧಾರಣ ಕಾಣಿಕೆ ಇದೆ. ಭಾರತದ ಪ್ರಾಚೀನ ಚಿಂತನೆ–ಸಂಸ್ಕೃತಿಗಳನ್ನು ಅರ್ಥಹೀನವಾದ್ದು ಅಥವಾ ಕಳಪೆಯಾದ್ದು ಎಂದು ಹೇಳಿ ಕೈತೊಳೆದುಕೊಳ್ಳುವುದು ಎಷ್ಟು ಮೂರ್ಖತನವೋ ಅವನ್ನು ನಿರರ್ಥಕವಾಗಿ ವೈಭವೀಕರಿಸುವುದು ಅಷ್ಟೇ ಅಚಾರಿತ್ರಿಕವಾದ್ದು. ನಮ್ಮ ಪ್ರಾಚೀನ ಸಂಸ್ಕೃತಿಯಲ್ಲಿ ಅಮೋಘವಾದ ಅಂಶಗಳಿವೆ, ಖಂಡನೀಯ ಸಂರಚನೆಗಳೂ ಇವೆ. ಅವುಗಳಲ್ಲಿ ಒಂದನ್ನು ತಿಳಿದು ಪೋಷಿಸಿ ಬೆಳೆಸಬೇಕು, ವಿಸ್ತರಿಸಬೇಕು ಮತ್ತು ಇನ್ನೊಂದನ್ನು ವರ್ಜ್ಯವೆಂದು, ಜನವಿರೋಧಿಯೆಂದು ದೂರೀಕರಿಸಬೇಕು. ಒಂದು ದೊಡ್ಡ ಆಸ್ತಿ, ಇನ್ನೊಂದು ಹೆಣಭಾರ; ಒಂದು ಮಧುರ ಗಾನದಂತೆ, ಇನ್ನೊಂದು ಕುತ್ತಿಗೆಯ ಸುತ್ತ ತೂಗಿಹಾಕಿಕೊಂಡ ಬೀಸುವ ಕಲ್ಲು. ಒಂದು ನಮ್ಮನ್ನು ಉಜ್ವಲ ಭವಿಷ್ಯದತ್ತ ಕೊಂಡೊಯ್ಯುತ್ತದೆ, ಇನ್ನೊಂದು ಅಪಥ್ಯವಾದ ಭೂತದತ್ತ ಎಳೆದು ಬಾಧಿಸುತ್ತದೆ. ಎರಡನ್ನೂ ಗುರುತಿಸಿ ಶುದ್ಧವಾದ್ದನ್ನು, ಭವ್ಯವಾದ್ದನ್ನು, ಆತುಕೊಳ್ಳಬೇಕು ಮತ್ತು ಮಲಿನವಾದ್ದನ್ನು ಅಬದ್ಧವಾದ್ದನ್ನು ತಳ್ಳಿಹಾಕಬೇಕು. ಆಯ್ಕೆ ನಮ್ಮದು ಮತ್ತು ಜೀವನ ನಮ್ಮದು. ದೇವಿಪ್ರಸಾದ್ ಭವಿಷ್ಯದ ಹರಿಕಾರ, ಜನಪರ ದಾರ್ಶನಿಕ.



ದೇವಿಪ್ರಸಾದರು ಬೆಳಗುವ ನಾಳೆಗಳನ್ನು ಬಿಡಿಸಿಟ್ಟಿರುವುದು ಅವರ ಅತ್ಯುಚ್ಚ ಸಾಧನೆ, ಕೊಡುಗೆ. ಅದರಿಂದ ಹಿಂದಕ್ಕೆ ಸರಿಯುವ ಪ್ರಶ್ನೆಯೇ ಇಲ್ಲ. ಹಿಂದಕ್ಕೆ ಸರಿಯುವುದೆಂದರೆ ಕ್ರಮೇಣ ಶಿಲಾಯುಗದತ್ತ ಧುಮುಕುವುದು ಎಂದಾಗುತ್ತದೆ.

**ಡಾ॥ ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ಆದಿಮ ಸಂಪತ್ತಿನ ಸಂಗ್ರಹಣೆ ಮತ್ತು ಭಾರತೀಯ ಪ್ರಜಾಪ್ರಭುತ್ವ

**ಹೊಸತು-೨೦**

**ವಿಶೇಷ ಲೇಖನ**

ಚರಿತ್ರೆಯಲ್ಲಿ ಅಂತರ್ ಅನುಸಂಧಾನಾತ್ಮಕ ಸಂಬಂಧವಿರುವ ಸಾತತ್ಯ ಮತ್ತು ಬದಲಾವಣೆಗಳ ವಿದ್ಯಮಾನಗಳು ವಿಶಿಷ್ಟ ಲಕ್ಷಣಗಳೊಂದಿಗೆ ಕಾಲಕಾಲಕ್ಕೆ ಸಂಭವಿಸುತ್ತಿರುತ್ತವೆ. ಇವು ದಿಢೀರನೆ ಮತ್ತು ಮೂಲಭೂತ ಬದಲಾವಣೆಯನ್ನು ಮತ್ತು ಕಣ್ಣಿಗೆ ಕಾಣುವಂತಹ ರೀತಿಯಲ್ಲಿ ಚರಿತ್ರೆಯ ಪಥದಲ್ಲಿ ತಿರುವನ್ನು ಉಂಟುಮಾಡುವ ವಿದ್ಯಮಾನಗಳಾಗಿರುತ್ತವೆ. ಉದಾಹರಣೆಗೆ, ಕ್ರಾಂತಿಗಳು ಮತ್ತು ಯುದ್ಧಗಳು. ಇದರ ಜೊತೆಯಲ್ಲಿ ಮಂದಗತಿ ಮತ್ತು ಸೂಕ್ಷ್ಮರೀತಿಯಲ್ಲಿ ಬದಲಾವಣೆಗಳನ್ನು ಉಂಟುಮಾಡುವ ವಿದ್ಯಮಾನಗಳೂ ಇರುತ್ತವೆ. ಇವುಗಳ ತಕ್ಷಣದ ಪರಿಣಾಮಗಳು ಸ್ಪಷ್ಟವಾಗಿರುವುದಿಲ್ಲ. ಆದರೆ ಕಾಲಾನಂತರದಲ್ಲಿ ಇವು ಮಹತ್ವವನ್ನು ಗಳಿಸಿಕೊಂಡುಬಿಡುತ್ತವೆ. ಇವುಗಳ ಸಂಚಿತ ಪರಿಣಾಮಗಳು ದೀರ್ಘ ಕಾಲಾವಧಿ ವ್ಯಾಪ್ತಿಯಲ್ಲಿ ಅನುಭವಕ್ಕೆ ಬರುತ್ತವೆ. ಹೀಗೆ ದಿಢೀರನೆ ಸಂಭವಿಸುವ ಗತಿಶೀಲ ಬದಲಾವಣೆಗಳು ಮತ್ತು ಮಂದಗತಿಯಲ್ಲಿನ ನಡೆಯುವ ಗತಿಶೀಲ ಬದಲಾವಣೆಗಳ ಏರಿಕೆ ಕ್ರಮದ ಸಂಚಿತ ಬದಲಾವಣೆಗಳು ಚಾಲಕ ಶಕ್ತಿಗಳಾಗಿ ಚರಿತ್ರೆಯನ್ನು ಮುಂದೆ ಎಳೆಯುತ್ತಿರುತ್ತವೆ. ಮೊದಲನೆಯ ರೀತಿಯ ಬದಲಾವಣೆಗಳು ಅಸ್ತಿತ್ವದಲ್ಲಿರುವ ಕಾನೂನಾತ್ಮಕ ಚೌಕಟ್ಟಿಗೆ ಬಾಹ್ಯ ನೆಲೆಗಳಿಂದ ಉಗ್ರ ರೀತಿಯಲ್ಲಿ ಪರಿವರ್ತನೆ ತರಲು ಸವಾಲು ಹಾಕುತ್ತಿರುತ್ತವೆ. ಕ್ರಾಂತಿಗಳಿಗೆ ಮತ್ತು ಯುದ್ಧಗಳಿಗೆ ಕಾನೂನಿನ ಮೇರೆಗಳಿರುವುದಿಲ್ಲ. ಆದರೆ ಸಂಚಿತ ಬದಲಾವಣೆಗಳು ಅಸ್ತಿತ್ವದಲ್ಲಿರುವ ಕಾನೂನಿನ ಚೌಕಟ್ಟಿನಲ್ಲಿಯೇ ಸಂಭವಿಸುತ್ತಿರುತ್ತವೆ. ಆಳುವ ವರ್ಗಗಳು ಇವನ್ನು ತಮ್ಮ ಹಿತಾಸಕ್ತಿಗಳಿಗೆ ಅನುಗುಣವಾಗಿ ಬಳಸಿಕೊಳ್ಳಲು ಪ್ರಯತ್ನಿಸುತ್ತಿರುತ್ತವೆ. ಆದರೂ ಪರಿವರ್ತನಾತ್ಮಕ ಬದಲಾವಣೆಗಳು ಮಂದಗತಿಯಲ್ಲಿ ಸಂಭವಿಸುತ್ತಿರುತ್ತವೆ. ಇದಕ್ಕೆ ಸಂಬಂಧಿಸಿದ ನಂಬಬಹುದಾದ ಸಂಗತಿಯೆಂದರೆ (ಲೆನಿನ್) ಆಳುವ ವರ್ಗಗಳು ಪ್ರಭುತ್ವದ ಶಕ್ತಿಯನ್ನು ಬಳಸಿಕೊಂಡು ಆದಿಮ ಸಾಧನಗಳ ಮೂಲಕ ಕಾನೂನುಗಳನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುತ್ತವೆ. ಯಾವಾಗ ಆಳುವ ವರ್ಗಕ್ಕೆ ಹಳೆಯ ಕಾಲದ ಸಾಧನಗಳನ್ನು ಬಳಸಿಕೊಂಡು ಆಳ್ವಿಕೆ ನಡೆಸಲು ಸಾಧ್ಯವಾಗುವುದಿಲ್ಲವೋ ಆಗ ಬಿಕ್ಕಟ್ಟಿನ ಸ್ಥಿತಿ ಉಂಟಾಗಿ ದಿಢೀರ್ ಮತ್ತು ಮೂಲಭೂತ ಬದಲಾವಣೆಗಳಿಗೆ ಅವಕಾಶ ಸಾಧ್ಯವಾಗಿಬಿಡುತ್ತದೆ.

ಈ ದೃಷ್ಟಿಯಿಂದ, ಆಸ್ತಿ ಮಾಲೀಕತ್ವದ ಶಾಸನಗಳಲ್ಲಿನ ಬದಲಾವಣೆಗಳು ಸಾಪೇಕ್ಷವಾಗಿ ಸಾವಧಾನದ ಗತಿಶೀಲತೆಯ ಪ್ರವೇಶಕ್ಕೆ, ತದನಂತರ ಕೆಲವೊಮ್ಮೆ ಅವು ಪ್ರಮುಖವಾದ ಸಂಚಿತ ಬದಲಾವಣೆಗೆ ಕಾರಣವಾಗುವ ಶಕ್ತಿಯುತ ಸಾಧನವಾಗಬಹುದು. ಈ ಪ್ರತಿಪಾದನೆಯನ್ನು ವಿವರಿಸುವ ವ್ಯಾಪಕ ಅಧ್ಯಯನಕ್ಕೆ ಒಳಗಾಗಿರುವ ಪ್ರಕರಣವೆಂದರೆ ೧೫ನೆಯ ಶತಮಾನದ ಇಂಗ್ಲೆಂಡಿನಲ್ಲಿ ಆರಂಭವಾದ 'ಸುತ್ತುಬೇಲಿ ಚಳುವಳಿ'. ಈ ಚಳುವಳಿಗೆ ಕುಮ್ಮಕ್ಕು ಪ್ರಧಾನವಾಗಿ ಕುರಿ ಸಾಕಾಣಿಕೆ ಕಾವಲು ಮತ್ತು ವಾಣಿಜ್ಯ ಕೃಷಿಯಿಂದ ಪ್ರಾಪ್ತವಾಯಿತು. ಈ ವೃತ್ತಿಗಳನ್ನು ಕೈಗೊಳ್ಳಲು ತೆರೆದ ಹೊಲಗಳಿಗೆ ಸುತ್ತು ಬೇಲಿ ಹಾಕುವುದು ಅಗತ್ಯವಾಯಿತು. ಈ ಕ್ರಮಗಳನ್ನು ೧೮ನೆಯ ಶತಮಾನದಲ್ಲಿ ಸಂಸತ್ತಿನ ಅಧಿನಿಯಮಗಳ ಮೂಲಕ ವಿಸ್ತೃತವಾಗಿ ಶಾಸನಬದ್ಧಗೊಳಿಸಲಾಗಿತ್ತು. ಬೃಹತ್ ಜಮೀನ್ದಾರರ ಪ್ರೋತ್ಸಾಹದಿಂದ ಜಾರಿಗೆ ಬಂದಿದ್ದ ಸದರಿ ಶಾಸನಗಳು ಸಾಮಾನ್ಯರ ಜೀವನಾಧಾರಗಳನ್ನು ನಾಶಮಾಡಿದವು. ಸಾಮಾನ್ಯ ರೈತರು ತಮ್ಮ ಜೀವನಾಧಾರಕ್ಕೆ ಊರೊಟ್ಟಿಗಿನ ಸಂಪನ್ಮೂಲಗಳಾದ ಹುಲ್ಲುಗಾವಲು, ಅರಣ್ಯ, ಪರ್ವತ ಪ್ರದೇಶ ಮತ್ತು ನೀರಿನ ಮೂಲಗಳನ್ನು ಅವಲಂಬಿಸಿದ್ದರು. ಈಗ ಅವರೆಲ್ಲ ಸದರಿ ಶಾಸನಗಳ ಕಾರಣವಾಗಿ ಒತ್ತುವರಿದಾರರಾಗಿದ್ದಾರೆ ಮತ್ತು ಕೆಲವೊಮ್ಮೆ ಸಮಾಜದಲ್ಲಿನ ಶಾಸನಗಳ ಕಣ್ಣಿನಲ್ಲಿ ಇವರೆಲ್ಲ ಅಪರಾಧಿಗಳಾಗಿ, ಅಲೆಮಾರಿಗಳಾಗಿ ಮತ್ತು ಭಿಕಾರಿಗಳಾಗಿ ಕಂಡುಬರತೊಡಗಿದರು. ಸಾಮಾನ್ಯಜನರ ಪ್ರತಿಭಟನೆಗಳನ್ನು 'ರಾಬಿನ್ ಹುಡ್' ಸಾಹಸ ಕಥೆಗಳು ಶಾಶ್ವತ ಗಾಥೆಯನ್ನಾಗಿಸಿವೆ.

ಶೈಶವಾವಸ್ಥೆಯಲ್ಲಿದ್ದ ಕೈಗಾರಿಕಾ ಬಂಡವಾಳದ ಬಗ್ಗೆ ೧೯ನೆಯ ಶತಮಾನದ ಆದಿ ಭಾಗದಲ್ಲಿ ಬರೆಯುತ್ತಿದ್ದ ಮಾರ್ಕ್ಸ್ ಬ್ರಿಟನ್ನಿನಲ್ಲಿ ಬಂಡವಾಳದ ಅಭಿವೃದ್ಧಿಗೆ

**ಕೆಲವೇ ಕೆಲವರ ಆಧಿಪತ್ಯದಿಂದ ಕೂಡಿದ ಜನತಂತ್ರದ ಬೆಳವಣಿಗೆ ಮತ್ತು ಸಾಮಾಜಿಕ ಸಾಂಪ್ರದಾಯೀಕರಣ ಹಾಗೂ ಬಹುಮತಾಂಧತೆಯ ರಾಜಕೀಯ ಅಸಹಿಷ್ಣುತೆಗಳು ಒಂದರೊಡನೊಂದು ಬೆರೆತು ಜನತಂತ್ರದ ವಿಶ್ವಾಸದ ಮೇಲೆ ಆಧಿಪತ್ಯ ಸ್ಥಾಪಿಸಿಬಿಟ್ಟಿವೆ. ನಾವು ದಾಂತೆಯ ನರಕದ ಕಡೆಗೆ ಚಲಿಸುತ್ತಿದ್ದೇವೆ. ಇಲ್ಲಿನ ಗೋಡೆಯ ಮೇಲಿನ ಬರಹ ಹೀಗಿದೆ: 'ಎಲ್ಲ ಭರವಸೆಯನ್ನು ಬಿಟ್ಟುಕೊಟ್ಟು ಈ ಸ್ಥಳವನ್ನು ಪ್ರವೇಶಿಸು'. ಯಾರಿಗೆ ವಿಶ್ವಾಸವನ್ನು ಬಿಟ್ಟುಕೊಡಲು ಮನಸ್ಸಿಲ್ಲವೋ ಅವರಿಗೆ ಉಳಿದಿರುವ ಒಂದೇ ಮಾರ್ಗ 'ಪ್ರತಿಭಟನೆ'.**

**ಮೂಲ : ಶ್ರೀ ಅಮಿತ್ ಬಾಧುರಿ**

**ಅನುವಾದ : ಡಾ॥ ಟಿ. ಆರ್. ಚಂದ್ರಶೇಖರ**

ಚಾಲಕ ಶಕ್ತಿಯಾಗಿ ಕೆಲಸ ಮಾಡಿದ ಸುತ್ತುಬೇಲಿ ಚಳುವಳಿ ಅಥವಾ 'ಆದಿಮ ಸಂಪತ್ತಿನ ಸಂಗ್ರಹ'ದ ಎರಡು ಮುಖಗಳ ಪಾತ್ರವನ್ನು ಅಥವಾ ಅದರ ದ್ವಂದ್ವಮಾನ ಪಾತ್ರವನ್ನು ಗುರುತಿಸಿದ್ದ. ಒಂದು ಕಡೆ ಇದು ವಾಣಿಜ್ಯ ಕೃಷಿ ಮತ್ತು ಪಶು ಸಾಕಾಣಿಕೆ ಕಾವಲುಗಳ ಮೂಲಕ ಅಗಾಧವಾದ ಹಣಕಾಸಿನ ಅಧಿಕಾರವನ್ನು ಕೈಯಲ್ಲಿ ವಶಪಡಿಸಿಕೊಂಡು ದೇಶವನ್ನು ಕೈಗಾರಿಕೀಕರಣಗೊಳಿಸುವ ಸಾಮರ್ಥ್ಯ ಹೊಂದಿದ್ದ ಶಕ್ತಿಶಾಲಿ ವರ್ಗವನ್ನು ಸೃಷ್ಟಿಸಿತು. ಮತ್ತೊಂದು ಕಡೆ ಸಾಂಪ್ರದಾಯಿಕ ಜೀವನಾಧಾರವನ್ನು ನಾಶಪಡಿಸಿತು ಮತ್ತು ದೊಡ್ಡ ಪ್ರಮಾಣದಲ್ಲಿ ರೈತರನ್ನು ಭೂಹೀನರನ್ನಾಗಿ ಮಾಡಿತು. ಆ ಮೂಲಕ ಕಾಲಕ್ರಮೇಣ ಬಂಡವಾಳಶಾಹಿ ವ್ಯವಸ್ಥೆಯನ್ನು ಪಲ್ಲಟಗೊಳಿಸುವುದಕ್ಕಾಗಿ 'ಕಳೆದುಕೊಳ್ಳಲು ಸಂಕೋಲೆಯನ್ನು ಬಿಟ್ಟು ಮತ್ತೇನೂ ಇಲ್ಲದ' ದುಡಿಮೆಗಾರ ವರ್ಗವನ್ನು ಅದು ಸೃಷ್ಟಿಸಿತು. ಮುಂದೆ ಅರ್ಥಶಾಸ್ತ್ರದ ಬರಹಗಾರರಾದ ಜೋಸೆಫ್ ಶಂಪೀಟರ್ ಮತ್ತು ಆರ್ಥರ್ ಲಿವೀಸ್ ಇದನ್ನು ಬಂಡವಾಳಶಾಹಿ ವ್ಯವಸ್ಥೆಯ ಅಭಿವೃದ್ಧಿಯ ಯಶಸ್ವೀ ಗಾಥೆಯೆಂದು ವರ್ಣಿಸಿದ್ದಾರೆ. ಜನರ ಜೀವನಾಧಾರಗಳನ್ನು ನಾಶಮಾಡಿ ಭೂಹೀನರಾದವರೆಲ್ಲರನ್ನು ತಾತ್ಕಾಲಿಕ ಘರ್ಷಣೆಯ ನಂತರ ಉನ್ನತ ಉತ್ಪಾದಕತೆಯ ವೃತ್ತಿಗಳಲ್ಲಿ ಒಳಗುಮಾಡಿಕೊಂಡ ಸದರಿ ಪ್ರಕ್ರಿಯೆಯನ್ನು ಶಂಪೀಟರ್ 'ಸೃಜನಾತ್ಮಕ ವಿನಾಶ'ದ ಆರಂಭವನ್ನಾಗಿ ಪರಿಭಾವಿಸಿಕೊಂಡನು. ಈ ಪ್ರಕ್ರಿಯೆಯು ದುಡಿಮೆಗಾರ ವರ್ಗವನ್ನು ಸಾಂಪ್ರದಾಯಿಕ ಕೃಷಿಯಿಂದ ಹೊರಗೆಳೆದು ಸ್ವಯಿಚ್ಛೆಯಿಂದ ಉನ್ನತ ಸಂಭಾವನೆಯ ಕೈಗಾರಿಕಾ ವಲಯವನ್ನು ಪ್ರವೇಶಿಸುವಂತೆ ಮಾಡುತ್ತದೆ ಎಂಬ ಸಿದ್ಧಾಂತವನ್ನು ಲಿವೀಸ್ ರಚಿಸಿದನು. ಸಂಕ್ಷಿಪ್ತವಾಗಿ ಹೇಳುವುದಾದರೆ, ಸುತ್ತುಬೇಲಿ ಚಳುವಳಿಯು ಬಂಡವಾಳಶಾಹಿ ಕೈಗಾರಿಕಾರಂಗದ ಅಭಿವೃದ್ಧಿಯ ಸುದೀರ್ಘ ಬೆಳವಣಿಗೆಯ ಮೈಲುಗಲ್ಲಾಗಿದೆ ಮತ್ತು ಈ ಪ್ರಕ್ರಿಯೆಯು ಕಾಲಾನಂತರ ಅದ್ಭುತ ಉತ್ಪಾದನಾ ಶಕ್ತಿಯ ಆಸ್ಫೋಟವನ್ನು ಉಂಟುಮಾಡಿತು.

ಸುತ್ತುಬೇಲಿ ಚಳುವಳಿ ಮತ್ತು ಕೈಗಾರಿಕಾ ಬಂಡವಾಳಶಾಹಿಗಳ ನಡುವಿನ ಊಹಾತ್ಮಕ ಸಂಬಂಧದ ಬಗ್ಗೆ ಆರ್ಥಿಕ ಚರಿತ್ರೆಕಾರರ ನಡುವಿನ ಚರ್ಚೆಯ ವಿಷಯವಾಗುವುದರ ಜೊತೆಗೆ ಇಂದು ಇದು ತುಂಬ ಹೆಚ್ಚು ಪ್ರಸ್ತುತವಾಗಿರುವ ಅನೇಕ ಇತರೆ ಸಮಸ್ಯೆಗಳನ್ನು ಹುಟ್ಟುಹಾಕಿದೆ. ತಡವಾಗಿ ಕೈಗಾರಿಕೀಕರಣ ಪ್ರಕ್ರಿಯೆಯನ್ನು ಪ್ರವೇಶಿಸಿರುವ ಚೀನ ಮತ್ತು ಭಾರತ ದೇಶಗಳಿಗೆ ದೊಡ್ಡ ಪ್ರಮಾಣದಲ್ಲಿ ಭೂಮಿ ಮತ್ತು ನೈಸರ್ಗಿಕ ಸಂಪನ್ಮೂಲಗಳ ಅಗತ್ಯ ಉಂಟಾಯಿತು. ವಸಾಹತುಶಾಹಿ ಅನುಭವದ ಹಿನ್ನೆಲೆಯಲ್ಲಿ ಅನೇಕ ದೇಶಗಳಲ್ಲಿ ಪ್ರಮುಖವಾಗಿ ಸ್ಥಳೀಯ ಜನಸಂಖ್ಯೆ ಭೂಹೀನರಾಗುತ್ತಿರುವ ಪ್ರವೃತ್ತಿಯು ವೇಗವಾಗಿ ನಡೆಯುತ್ತಿರುವ ಸಂದರ್ಭದಲ್ಲಿ ಮೂಲ ಮಾರ್ಕ್ಸಿಯನ್ ನಿರೂಪಣೆಯ ಕೂಲಂಕಷ ಚರ್ಚೆಯು ಅಪೇಕ್ಷಣೀಯವಾಗಿದೆ. ಈ ಚರ್ಚೆಗಾಗಿ ಕೆಳಗಿನ ಪ್ರಶ್ನೆಗಳು ಮತ್ತು ಸಮಸ್ಯೆಗಳು ಅತ್ಯಂತ ಪ್ರಮುಖವಾಗಿವೆ:

(೧) ಕೈಗಾರಿಕಾ ಬಂಡವಾಳಶಾಹಿಯ ಬೆಳವಣಿಗೆಗೆ ಭೂಮಿಯನ್ನು ಆಧಾರ ಮಾಡಿಕೊಂಡ ಆದಿಮ ಸಂಪತ್ತಿನ ಸಂಗ್ರಹದ ಚಾರಿತ್ರಿಕ ಸರಣಿಯು ಆಯಕಟ್ಟಿನ ಸಂಗತಿಯೇ? ಅಥವಾ ಬಂಡವಾಳಶಾಹಿಯ ನಂತರ ನಡೆಯಬಹುದಾದ ಸದರಿ ಪ್ರಕ್ರಿಯೆಯು ಈಗಾಗಲೆ ಸಂಭವಿಸಿಬಿಟ್ಟಿದೆಯೇ?

(೨) ಭೂಹೀನರಾದ ಜನರ ಉಳಿತಾಯ ಮತ್ತು ಸಂಗ್ರಹವಾಗಿದ್ದ ಹಣಕಾಸು ಸಂಪತ್ತು ತನ್ನಷ್ಟಕ್ಕೆ ಕೈಗಾರಿಕೆಗಳ ಅಭಿವೃದ್ಧಿಗೆ ಹೂಡಿಕೆಯಾಗುತ್ತದೆಯೇ? ಕೆಲವು ಅರ್ಥಶಾಸ್ತ್ರಜ್ಞರು ಇದನ್ನು ಕಿನೀಸಿಯನ್ ಸಮಸ್ಯೆಯಾದ ಉಳಿತಾಯ ಮತ್ತು ಹೂಡಿಕೆ ನಡುವಿನ ಭಿನ್ನತೆಯ ಬದಲಾದ ಸ್ವರೂಪವನ್ನಾಗಿ ಗುರುತಿಸಬಹುದು.

(೩) ಸಾಂಪ್ರದಾಯಿಕ ಕೃಷಿ ವ್ಯವಸ್ಥೆಯಿಂದ ಕೈಗಾರಿಕಾ ಆರ್ಥಿಕತೆಯಾಗಿ ಪರಿವರ್ತನೆಯಾಗಲು ಚಾರಿತ್ರಿಕವಾಗಿ ಇಂಗ್ಲೆಂಡಿಗೆ ದೀರ್ಘಕಾಲ ಬೇಕಾಯಿತು (೯೦ರಿಂದ ೧೨೦ ವರ್ಷಗಳು). ಪಶ್ಚಿಮ ಯುರೋಪು ಮತ್ತು ಯುನೈಟೆಡ್ ಸ್ಟೇಟ್ಸಿನಲ್ಲಿ ಇದು ೫೦ ವರ್ಷಗಳ ಕಾಲಾವಧಿಗಿಂತ ಕಡಿಮೆ ಕಾಲಾವಧಿಯಲ್ಲಿ ಸಂಭವಿಸಿದ್ದು ಕಂಡುಬರುವುದಿಲ್ಲ. ಈ ದೇಶಗಳಲ್ಲಿ ಕೈಗಾರಿಕೀಕರಣದ ಜೊತೆಯಲ್ಲಿ ತಂತ್ರಜ್ಞಾನವೂ ಬೆಳೆಯಿತು. ತಂತ್ರಜ್ಞಾನದ ವರ್ಗಾವಣೆಯಿಂದಾಗಿ ಸದರಿ ದೇಶಗಳಲ್ಲಿ ಕೈಗಾರಿಕೀಕರಣಕ್ಕೆ ಅಗತ್ಯವಾಗಿದ್ದ ಕಾಲಾವಧಿ ಕಡಿಮೆಯಾಗಿರಬಹುದು (ಉದಾಹರಣೆಗೆ, ಜಪಾನ್, ದಕ್ಷಿಣ ಕೊರಿಯ ಇತ್ಯಾದಿ). ಜನತಂತ್ರ ಉತ್ತರದಾಯಿತ್ವವಿರುವ ನಿಯತವಾಗಿ ಚುನಾವಣೆ ನಡೆಯುತ್ತಿರುವ ಭಾರತದಂತಹ ದೇಶದಲ್ಲಿ ದೀರ್ಘಕಾಲೀನ ಕೈಗಾರಿಕೀಕರಣ ಪ್ರಕ್ರಿಯೆಯನ್ನು ಸಾಧಿಸಿಕೊಳ್ಳಲು ಕಾಲಾವಧಿಯನ್ನು ಎಷ್ಟು ಮೊಟಕುಗೊಳಿಸಬಹುದು ಎಂಬ ಪ್ರಶ್ನೆ ನಮ್ಮ ಮುಂದಿದೆ. ಬಂಡವಾಳಶಾಹಿಗೆ ಪ್ರತಿಯಾದ ಕ್ರಮವನ್ನು ಅನುಸರಿಸಿ ತೀವ್ರ ಕೈಗಾರಿಕೀಕರಣ ಸಾಧಿಸಿಕೊಂಡ ಹಳೆಯ ಸೋವಿಯತ್ ರಷ್ಯದ ಅನುಭವವು ಇಲ್ಲಿ ಚರ್ಚೆಗೆ ಪ್ರಸ್ತುತವಾಗಿದೆ.

(೪) ಅಂತಿಮವಾಗಿ, ವಸಾಹತುಶಾಹಿಯ ಜೊತೆಗಿನ ಇದರ ಸಂಬಂಧ. ಚಾರಿತ್ರಿಕವಾಗಿ ಭೂಮಿ ಮತ್ತು ನೈಸರ್ಗಿಕ ಸಂಪನ್ಮೂಲಗಳ ಸ್ವಾಧೀನ ಪ್ರಕ್ರಿಯೆಯಲ್ಲಿ ಬಾಹ್ಯ ವಸಾಹತೀಕರಣವು ಚಾಲಕ ಶಕ್ತಿಯಾಗಿ ಕೆಲಸ ಮಾಡಿದೆ. ತಡವಾಗಿ ಕೈಗಾರಿಕೀಕರಣ ಪ್ರಕ್ರಿಯೆಯನ್ನು ಪ್ರವೇಶಿಸಿದ ದೇಶಗಳಿಗೆ ಸದರಿ ಆಯ್ಕೆಗೆ ಅವಕಾಶ ಇಲ್ಲ. ಭೂಸ್ವಾಧೀನ ಪ್ರಕ್ರಿಯೆಯು ಆಂತರಿಕವಾಗಿ ನಡೆದರೆ ಅದು ಆಂತರಿಕ ವಸಾಹತುಶಾಹಿಯಾಗುವುದಿಲ್ಲವೇ? ಅಥವಾ ಕೆಳಮಟ್ಟದ ಅಭಿವೃದ್ಧಿಶೀಲ ದೇಶಗಳಲ್ಲಿ ಹೊಸ ವಿಕಲ್ಪಗಳಾದ ವ್ಯಾಪಾರ ಮತ್ತು ವಿದೇಶಿ ನೆರವಿನ ರಾಯಭಾರದ ಮೂಲಕ ನಡೆಸುವ ಪ್ರಯತ್ನಗಳು, ಅಂದರೆ ಹೊರೆಯನ್ನು ಮತ್ತೊಂದು ಕಡೆ ವರ್ಗಾಯಿಸಿ ಈ ಸಮಸ್ಯೆಯನ್ನು ನಿವಾರಿಸಿಕೊಳ್ಳಬಹುದೇ?

ಈ ಪ್ರಶ್ನೆಗಳು – ಪ್ರಸ್ತುತ ಸಂದರ್ಭದಲ್ಲಿ, ಪ್ರಮುಖವಾಗಿ ಇತ್ತೀಚೆಗೆ ಕೈಗಾರಿಕೀಕರಣಗೊಳ್ಳುತ್ತಿರುವ ದೇಶಗಳಲ್ಲಿ ತುಂಬ ಮುಖ್ಯವಾಗುತ್ತವೆ ಮತ್ತು ಇವುಗಳಿಗೆ ತೃಪ್ತಿಕರವಾದ ವಿವರಣೆ ಕುರಿತ ಚರ್ಚೆಗಳು ನಿರ್ದಿಷ್ಟ ಚಾರಿತ್ರಿಕ ಸಂಗತಿಗಳನ್ನು ಒಳಗೊಳ್ಳಬೇಕಾಗುತ್ತದೆ. ಇಲ್ಲಿ ನಾನು ಸದರಿ ಪ್ರಶ್ನೆಗಳನ್ನು ಭಾರತದ ಸಂದರ್ಭದಲ್ಲಿ ಚರ್ಚೆ ಮಾಡಲು ಬಯಸುತ್ತೇನೆ.

ಭಾರತದಲ್ಲಿ ಯಾವುದನ್ನು ಆರ್ಥಿಕ ಉದಾರೀಕರಣ ಪರ್ವವೆಂದು ಕರೆಯಲಾಗುತ್ತಿದೆಯೋ ಅದರ ಉದ್ದೇಶ ಜನಪ್ರಿಯತೆಯನ್ನು ಕಳೆದುಕೊಂಡಿದ್ದ 'ಪೊಲೀಸ್–ಇನ್ಸ್‌ಪೆಕ್ಟರ್ ರಾಜ್' ಎಂಬ ವ್ಯವಸ್ಥೆಯನ್ನು ತೊಡೆದುಹಾಕುವುದಾಗಿತ್ತು. ಇದಕ್ಕಾಗಿ ೧೯೯೧ರ ಆಸುಪಾಸಿನಲ್ಲಿ ಅಂತಾರಾಷ್ಟ್ರೀಯ ಪಾವತಿ ಬಿಕ್ಕಟ್ಟಿನ ಕಾರಣವಾಗಿ ಮಾರುಕಟ್ಟೆ–ಸ್ನೇಹಿ ಸುಧಾರಣೆಗಳನ್ನು ಸರಣಿಯೋಪಾದಿಯಲ್ಲಿ ಆರಂಭಿಸಲಾಯಿತು. ಇದನ್ನು ಒತ್ತು ನೀಡಿ ಯಾರೂ ಉಲ್ಲೇಖಿಸದಿದ್ದರೂ, ಇದು ಸ್ವಾತಂತ್ರ್ಯೋತ್ತರ ಭಾರತೀಯ ಆರ್ಥಿಕತೆ ಅಭಿವೃದ್ಧಿಯನ್ನು ನಿರ್ವಹಿಸುತ್ತಿದ್ದ ವರ್ಗ ಸಂಬಂಧಗಳ ಸ್ವರೂಪದಲ್ಲಿ ಬದಲಾವಣೆಯನ್ನು ಉಂಟುಮಾಡಿತು. ಭಾರತವು ಉನ್ನತ ಆರ್ಥಿಕ ಬೆಳವಣಿಗೆಯನ್ನು ಸಾಧಿಸಿಕೊಳ್ಳುವ ಸಲುವಾಗಿ ಹೆಚ್ಚು ಹೆಚ್ಚು ಖಾಸಗಿ ಉದ್ಯಮಪತಿಗಳನ್ನು ಮತ್ತು ಬೃಹತ್ ಉದ್ಯಮಪತಿ ಕುಟುಂಬಗಳನ್ನು ಅವಲಂಬಿಸತೊಡಗಿತು. ಇದು ಅಳವಡಿಸಿಕೊಂಡ ಉದಾರೀಕರಣ, ಅನಿಯಂತ್ರಣ ಮತ್ತು ಖಾಸಗೀಕರಣ ಕ್ರಮಗಳ ನೆರವನ್ನು ಪಡೆದುಕೊಂಡು ಖಾಸಗಿ ಉದ್ಯಮಪತಿಗಳು ಪ್ರಭಾವಶಾಲಿ ಸ್ಥಾನಗಳನ್ನು ಆಕ್ರಮಿಸಿಕೊಂಡುಬಿಟ್ಟರು. ಖಾಸಗಿ ಉದ್ಯಮಪತಿಗಳ ಮೇಲಿನ ಅತಿಹೆಚ್ಚಿನ ಅವಲಂಬನೆಯಿಂದಾಗಿ ಖಾಸಗಿ ಹೂಡಿಕೆಗೆ ವಾತಾವರಣವನ್ನು ಉತ್ತಮಪಡಿಸುವುದು ಅನಿವಾರ್ಯವಾಯಿತು. ಆದರೆ ಪೊಲೀಸ್–ಇನ್ಸ್‌ಪೆಕ್ಟರ್ ರಾಜ್ ವ್ಯವಸ್ಥೆಯನ್ನು ತೊಡೆದುಹಾಕುವ ಸರ್ಕಾರದ ಜನಪ್ರಿಯ ಧೋರಣೆಯು ಮುಂದುವರಿಯಿತು. ಇದರ ಪರಿಣಾಮಗಳು ನಾಲ್ಕು ಬಗೆಯಲ್ಲಿ ಕಾಣಲು ತೊಡಗಿದವು. ಅವುಗಳಲ್ಲಿ ಕೆಲವು ಸಾವಧಾನವಾಗಿ ಸ್ಪಷ್ಟವಾಗತೊಡಗಿದವು.

ಮೊದಲನೆಯದಾಗಿ, ಉದಾರೀಕರಣ ನೀತಿಯ

**ಹುಡುಕುವಾಟ**



ಈಗೀಗ
ನಗೂ
ಕಾರಣ ಹುಡುಕುತ್ತಿದ್ದೇನೆ;
ಗೊಂದಲದಿಂದ
ಹೊರಬರಲು
ಮಕ್ಕಳ ಜೊತೆ ಆಡುತ್ತಿದ್ದೇನೆ!

• ಗೋಪಿ •
ಹಿರೇಬಿಟ್ಟು

ಭಾಗವಾಗಿ ಸರ್ಕಾರವು ಹಿಂದಿನಿಂದ ಮುಂದುವರಿದುಕೊಂಡು ಬರುತ್ತಿದ್ದ ವಿದೇಶಿ ವಿನಿಯಮ ಕೊರತೆಯನ್ನು ನಿರ್ವಹಿಸಲು ಮುಖ್ಯವಾಗಿ ಅಲ್ಪಾವಧಿ ಬಂಡವಾಳದ ಒಳಪ್ರವೇಶವನ್ನು ಆಕರ್ಷಿಸತೊಡಗಿತು. ಆ ಮೂಲಕ ವಿದೇಶಿ ವಿನಿಮಯದ ಚಾಲ್ತಿ ಖಾತೆಯಲ್ಲಿನ ಕೊರತೆಯು ನಿರಂತರವಾಗಿ ಮುಂದುವರಿಯುತ್ತಿದ್ದ ಸಂದರ್ಭ ದಲ್ಲಿಯೇ ಬೃಹತ್ ವಿದೇಶಿ ವಿನಿಮಯ ಮೀಸಲನ್ನು ಸಂಗ್ರಹಿಸತೊಡಗಿತು. ಇದರಿಂದಾಗಿ ಭಾರತೀಯ ಆರ್ಥಿಕ ನೀತಿಗಳು ಕೈಗಾರಿಕೆ ಮತ್ತು ಹಣಕಾಸು ಹಿತಾಸಕ್ತಿಗಳು ಹೆಚ್ಚು ಹೆಚ್ಚು ಒಂದರೊಡನೆ ಒಂದು ಬೆರೆತಿರುವ ಹಣಕಾಸು ಮಾರುಕಟ್ಟೆ ಹಿತಾಸಕ್ತಿಗಳಿಗೆ ಸ್ಪಂದಿಸುವಂತಾಯಿತು.

ಎರಡನೆಯದಾಗಿ, ಬಡವರಿಗೆ ನೀಡುತ್ತಿರುವ ಅನುಪಯುಕ್ತ ಸಹಾಯಧನವನ್ನು ಕುರಿತ ಚರ್ಚೆಯ ಹಿನ್ನೆಲೆಯಲ್ಲಿ ಶ್ರೀಮಂತರಿಗೆ ಮತ್ತು ಕಾರ್ಪೊರೇಟ್ ಶಕ್ತಿಗಳಿಗೆ ನೀಡುತ್ತಿರುವ ಸರಾಸರಿ ವಾರ್ಷಿಕ ಸಹಾಯಧನದ ಮೊತ್ತವು ಬಡವರಿಗೆ ನೀಡು ತ್ತಿರುವ ಸಹಾಯಧನದ ಮೊತ್ತದಷ್ಟೇ ಇದೆಯೆಂದು ಅಂದಾಜು ಮಾಡಲಾಗಿದೆ. ಖಾಸಗಿ ವ್ಯಾಪಾರ ವಾತಾವರಣವನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಸರ್ಕಾರವು 'ಬಿಟ್ಟುಕೊಟ್ಟ ರಾಜಸ್ವ ಸ್ವೀಕೃತಿ'ಯು ಬಡವರಿಗೆ ನೀಡುವ ಹಾನಿಕಾರಕವೆಂದು ಕರೆಯುವ ಸಹಾಯಧನ, ಸಾರ್ವಜನಿಕ ವಿತರಣೆ, ಉದ್ಯೋಗ ಖಾತರಿ ಮುಂತಾದವುಗಳ ಮೇಲಿನ ಖರ್ಚಿಗಿಂತ ಕಡಿಮೆಯೇನಿಲ್ಲ (ಎರಡೂ ಕೂಡಿ ಜಿಡಿಪಿಯ ಶೇ. ೪.೫., ೨೦೧೩-೧೪).

ಮೂರನೆಯದಾಗಿ, ಈ ಎಲ್ಲ ಹಣಕಾಸಿನ ವಿವರಗಳು ಪೂರ್ಣ ಚಿತ್ರವನ್ನೇನೂ ನೀಡುವುದಿಲ್ಲ. ಉದ್ದೇಶಪೂರ್ವಕವಾಗಿ ಸಾಲ ವಾಪಸ್ಸು ನೀಡದ ಕಾರ್ಪೊರೇಷನ್‌ಗಳ ಮತ್ತು ಬೃಹತ್ ಉದ್ದಿಮೆಗಳ ಸಾಲವನ್ನು ಒಟ್ಟಿಗೆ ಕೂಡಿಸಿರುವ ನಾನ್-ಪರ್‌ಫಾರ್ಮಿಂಗ್ ಅಸೆಟ್ ಸರಿಸುಮಾರು ಜಿಡಿಪಿಯ ಶೇ. ೧೦ರಷ್ಟಿದೆ. ರಾಷ್ಟ್ರೀಕೃತ ಬ್ಯಾಂಕುಗಳ ಅಡಾವೆ ಪತ್ರಗಳಲ್ಲಿ ಶೇಖರಣೆಗೊಂಡಿರುವ ಸದರಿ ನಾನ್-ಪರ್‌ಫಾರ್ಮಿಂಗ್ ಅಸೆಟ್ ಸರ್ಕಾರದ ಮತ್ತು ಕೇಂದ್ರ ಬ್ಯಾಂಕುಗಳು ಇದರ ಬಗ್ಗೆ ತಳೆದಿರುವ ಉದ್ದೇಶಪೂರ್ವಕ ನಿರ್ಲಕ್ಷ್ಯದ ಕಥೆಯನ್ನು ಹೇಳುತ್ತದೆ. ಈ ಸಾಲದ ಮರುಪಾವತಿ ಬಗ್ಗೆ ಗಂಭೀರ ಕ್ರಮಗಳನ್ನು ತೆಗೆದುಕೊಳ್ಳುವ ಪ್ರಯತ್ನ ಮಾಡದಿರುವುದು ಮತ್ತು ಕಟ್ಟುನಿಟ್ಟಿನ ದಿವಾಳಿ ಕಾನೂನನ್ನು ಪಾಲಿಸದಿರುವ ಸನ್ನಿವೇಶವನ್ನು ಗಮನಿಸಿದರೆ ಇದು ಖಾಸಗಿ ಬಂಡವಾಳ ಹೂಡಿಕೆಗೆ ಉತ್ತಮವಾದ ವಾತಾವರಣವನ್ನು ಉಂಟುಮಾಡುವ ಕ್ರಮಗಳ ಭಾಗವೇ ಆಗಿರುವಂತೆ ಕಾಣುತ್ತದೆ.

ಆದರೆ ಇದುವರೆವಿಗೂ ತೆಗೆದುಕೊಂಡ ಕ್ರಮಗಳಲ್ಲಿ ಅತ್ಯಂತ ಸೂಕ್ಷ್ಮವೂ ಮತ್ತು ರಾಜಕೀಯವಾಗಿ ಆಸ್ಫೋಟಕಾರಿಯೂ ಹಾಗೂ ಆರ್ಥಿಕವಾಗಿ ಅತ್ಯಂತ ಶಕ್ತಿಯುತವಾದ ಕ್ರಮವೆಂದರೆ ಭೂಮಿ ಮತ್ತು ನೈಸರ್ಗಿಕ ಸಂಪನ್ಮೂಲವನ್ನು ಸರ್ಕಾರ ಸ್ವಾಧೀನಪಡಿಸಿ ಕೊಂಡು ಖಾಸಗಿ ಬಂಡವಾಳ ಹೂಡಿಕೆಯನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಸೋವಿ ಬೆಲೆಗೆ ಅವುಗಳನ್ನು ಬೃಹತ್ ಕಾರ್ಪೊರೇಟುಗಳಿಗೆ ನೀಡಿದ್ದಾಗಿದೆ. ಇದನ್ನು ಆದಿಮ ಸಂಪತ್ತು ಸಂಗ್ರಹಣೆಯ ಮತ್ತೊಂದು ಮುಖವೆಂದು ಪರಿಗಣಿಸಬಹುದು. ಇದು ಸುತ್ತುಬೇಲಿ ಚಳುವಳಿ ಸಂದರ್ಭದಲ್ಲಿ ನಡೆದ ರೀತಿಗಿಂತ ಭಿನ್ನವಾಗಿ ನಡೆಯುತ್ತಿದೆ. ಏಕೆಂದರೆ ಈ ಹೊತ್ತಿಗಾಗಲೆ ಬಂಡವಾಳಶಾಹಿ ವರ್ಗವು ಭಾರತದಲ್ಲಿ ಬೆಳೆದುಬಿಟ್ಟಿತ್ತು.

ಇದು ಕಾರ್ಪೊರೇಟ್ ಪ್ರಣೀತ ಕೈಗಾರಿಕೀಕರಣದ ಗತಿಯನ್ನು ಹೆಚ್ಚಿಸುವ ಖಚಿತವಾದ ಶಕ್ತಿಶಾಲಿ ಕಾರ್ಯತಂತ್ರದ ಯಶಸ್ಸಿನ ಸಾಧ್ಯತೆಯ ಬಗ್ಗೆ ಒಂದು ಪ್ರಶ್ನೆಯು ನಮ್ಮ ಮುಂದೆ ಬಂದು ನಿಲ್ಲುತ್ತದೆ. ಈ ಪ್ರಕ್ರಿಯೆಯು ಉಳಿತಾಯವನ್ನು ಉತ್ಪಾದಕತಾ ರೀತಿಯಲ್ಲಿ ಹೂಡಿಕೆಗೆ ದೊರೆಯದಿರುವ 'ಕಿನೀಸಿಯನ್' ಬೋಣಿಗೆ ಬೀಳಬಹುದಾದ ಹೆಚ್ಚಿನ ಸಾಧ್ಯತೆಯನ್ನು ಸಾಮಾನ್ಯವಾಗಿ ನಿರ್ಲಕ್ಷಿಸಲಾಗುತ್ತಿದೆ. ಊರೊಟ್ಟಿಗಿನ ಸಂಪನ್ಮೂಲಗಳಲ್ಲಿ ಹೆಚ್ಚಿನ ಭಾಗ ಪೂರ್ಣವಾಗಿ ಅಥವಾ ಆಂಶಿಕವಾಗಿ ನವೀಕರಿಸಲು ಬಾರದ ಸಂಪನ್ಮೂಲವಾಗಿರುತ್ತದೆ. ಅವುಗಳಾವುವೆಂದರೆ ಖಾಸಗಿ ಭೂಮಿ, ಹುಲ್ಲುಗಾವಲು, ಅರಣ್ಯಗಳು, ಪರ್ವತಗಳು, ನದಿಗಳು, ಜಲಮೂಲಗಳು, ಕರಾವಳಿ ಮತ್ತು ಖನಿಜ ಸಂಪನ್ಮೂಲಗಳು. ಈ ಎಲ್ಲ ಸಂಪನ್ಮೂಲಗಳಿಗೆ ಒಂದಲ್ಲ ಒಂದು ರೀತಿಯಲ್ಲಿ ಅಗತ್ಯವಾಗಿರುವುದು ಭೂಮಿ. ಆದ್ದರಿಂದ ಕೈಗಾರಿಕೀಕರಣಕ್ಕಾಗಿ ಕಾರ್ಪೊರೇಟುಗಳಿಗೆ ಉತ್ತೇಜನ ನೀಡುವ ಪ್ರಗಾಥೆಯಲ್ಲಿ ಭೂಸ್ವಾಧೀನವು ಕೇಂದ್ರ ವಿಷಯವಸ್ತುವಾಗಿ ಬಿಡುತ್ತದೆ. ಈ ಎಲ್ಲ ಸಂಪನ್ಮೂಲಗಳೆಲ್ಲ ಜಾಗತಿಕವಾಗಿ ಹೆಚ್ಚು ಹೆಚ್ಚು ಕೊರತೆಯಿಂದ ಕೂಡಿರುವುದರಿಂದ ಭವಿಷ್ಯದಲ್ಲಿ ಅವುಗಳ ಮೂಲಕ ಅಪಾರ ಬಂಡವಾಳ ಲಾಭ ಗಳಿಸುವ ಸಂಭವ ಅಧಿಕವಾಗಿದೆ. ಲಾಭವನ್ನು ಗಳಿಸುವುದನ್ನೇ ಪ್ರಧಾನ ಉದ್ದೇಶವನ್ನಾಗಿ ಮಾಡಿಕೊಂಡಿರುವ ಕಾರ್ಪೊರೇಟುಗಳು ಇಂತಹ ಆಸ್ತಿಗಳನ್ನು ಕೈಗಾರಿಕೆಗಳನ್ನು ನಿರ್ಮಿಸಲು ಬಳಸುವುದಕ್ಕೆ ಪ್ರತಿಯಾಗಿ ಲಾಭ ಗಳಿಸುವ ಉದ್ದೇಶಗಳಿಗಾಗಿ ಬಳಸುವುದಕ್ಕೆ ಶಕ್ತಿಯುತವಾದ ಪ್ರಚೋದನೆಯಿರುತ್ತದೆ.

ಕಾರ್ಪೊರೇಟುಗಳು ತಂತ್ರಜ್ಞಾನಕ್ಕಾಗಿ ಅಥವಾ ಮಾರುಕಟ್ಟೆಯಲ್ಲಿನ ಪಾಲಿಗಾಗಿ ಪರಸ್ಪರ ಪೈಪೋಟಿ ಮಾಡುವುದನ್ನು ತಡೆಯಲು ಉತ್ತೇಜನ ದೊರೆಯುವಂತೆ ಮಾಡಲಾಗುತ್ತದೆ ಮತ್ತು ಸರ್ಕಾರವು ಹೆಚ್ಚು ಹೆಚ್ಚು ಭೂಮಿಯನ್ನು ವಿಶೇಷ ರೀತಿಯಲ್ಲಿ ಕಾರ್ಪೊರೇಟುಗಳಿಗೆ ಒದಗಿಸುವಂತಹ ಪ್ರಬಲ ವ್ಯಾಪಾರಿ ಮಾದರಿ ಗಳನ್ನು ರೂಪಿಸಲಾಗುತ್ತದೆ. ಇದರ ಕೆಟ್ಟ ಉತ್ಪನ್ನವೆಂದರೆ ಭಾರಿ ಪ್ರಮಾಣದ ಭ್ರಷ್ಟಾಚಾರ ಮತ್ತು ಹಗರಣಗಳು ಮತ್ತು ಇವು ಕಾಲಕ್ರಮೇಣ ಸಾಂಸ್ಥಿಕ ರೂಪವನ್ನು ತಳೆದುಬಿಡುತ್ತವೆ. ವೈಯಕ್ತಿಕ ಭ್ರಷ್ಟಾಚಾರ ಮತ್ತು ಹಗರಣಗಳಲ್ಲದೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಪಾರದರ್ಶಕ ಕ್ರಮಗಳಿಗೆ ಪ್ರತಿಯಾಗಿ ಅಕ್ರಮ ದಾರಿಯ ಮೂಲಕ ಇದನ್ನು ಸಾಧ್ಯ ಮಾಡುವುದಕ್ಕಾಗಿ ಸೂಕ್ತ ಶಾಸನಗಳನ್ನು ರಚಿಸುತ್ತವೆ.

ಉನ್ನತ ಆರ್ಥಿಕ ಬೆಳವಣಿಗೆಯನ್ನು ಸಾಧಿಸಿಕೊಳ್ಳುವುದಕ್ಕೆ ಆತುರದಲ್ಲಿರುವ ಸರ್ಕಾರಗಳು ಖಾಸಗಿ ಕಾರ್ಪೊರೇಟುಗಳಿಗೆ ಪ್ರೋತ್ಸಾಹ-ಉತ್ತೇಜನ ನೀಡುವ ಉದ್ದೇಶದಿಂದ ಸೂಕ್ತ ಸಿದ್ಧತೆಯನ್ನು ಮಾಡಿಕೊಳ್ಳದೆ ಅಥವಾ ಪರಿಣಾಮಗಳ ಬಗ್ಗೆ ಪರ್ಯಾಲೋಚಿಸದೆ ಅವುಗಳಿಗೆ ಭೂಮಿಯನ್ನು ನೀಡುವುದಕ್ಕಾಗಿ ಅದನ್ನು ಸ್ವಾಧೀನಪಡಿಸಿಕೊಳ್ಳುವುದು ಹೆಚ್ಚು ಆಕರ್ಷಣೀಯವಾಗಿಬಿಟ್ಟಿತು. ಇದರಿಂದಾಗಿ ಅತ್ಯಲ್ಪ ಕಾಲಾವಧಿಯಲ್ಲಿ ಇಂತಹ ಭೂಮಿಯ ವರ್ಗಾವಣೆಯಿಂದಾಗಿ ಕಾರ್ಪೊರೇಟುಗಳು ಅಪಾರ ಸಂಪತ್ತನ್ನು ಸಂಗ್ರಹಿಸಿಕೊಳ್ಳುವುದು ಸಾಧ್ಯವಾಯಿತು. ರೂಢಿಗತ ಉತ್ಪಾದನೆಯ ಮೂಲಕ ಇಂತಹ ಲಾಭ ಗಳಿಸುವುದು ನಿಜಕ್ಕೂ ಅಸಾಧ್ಯ. ಇಲ್ಲಿನ ವಿಕೃತಿಯೆಂದರೆ ಇಲ್ಲಿ ಅಸಮಾನತೆಯು ತೀವ್ರಗತಿಯಲ್ಲಿ ಏರಿಕೆಯಾಗಿದ್ದು ಮತ್ತು ಸಾಮಾಜಿಕ ರಚನೆಯ ಮೇಲುತುದಿಯಲ್ಲಿ ಸಂಪತ್ತು ಅಪಾರ ಪ್ರಮಾಣದಲ್ಲಿ ಶೇಖರಣೆಗೊಂಡಿದ್ದಾಗಿದೆ. ಇದು ಬಡ ದೇಶದಲ್ಲಿ ಬಡವರ ಕೊಳ್ಳುವ ಶಕ್ತಿಯನ್ನು ಹತ್ತಿಕ್ಕಿ ಕೈಗಾರಿಕಾ ಹೂಡಿಕೆಯ ವಾತಾವರಣವನ್ನು ವಿಕೃತಿಗೊಳಿಸಿಬಿಡುತ್ತದೆ. ಇದರಿಂದಾಗಿ ಉತ್ಪಾದನೆ ಮತ್ತು ಬಂಡವಾಳ ಹೂಡಿಕೆಗಳು ಹೆಚ್ಚು ಹೆಚ್ಚು ಶ್ರೀಮಂತರ ಅನುಭೋಗ ಸರಕುಗಳ ಉದ್ದಿಮೆ, ಮಾಲುಗಳು, ಐಷಾರಾಮಿ ಕಾರುಗಳು, ಗಗನಚುಂಬಿ ಅಪಾರ್ಟ್‌ಮೆಂಟುಗಳು ಮತ್ತು ರಿಯಲ್ ಎಸ್ಟೇಟುಗಳ ಕ್ಷೇತ್ರಗಳಿಗೆ ಹರಿಯುವಂತೆ ಮಾಡಲಾಗುತ್ತದೆ (ಈ ವಿಕೃತಿಗೆ ಮುಂಬೈನ ಕೊಳೆಗೇರಿಗಳ ನಡುವೆ ಥಳಥಳನೆ ಹೊಳೆಯುತ್ತಿರುವ ಅಂಬಾನಿ ಕಟ್ಟಿಸಿರುವ ೨೭ ಅಂತಸ್ತಿನ ಕಟ್ಟಡ ಒಂದು ನಿದರ್ಶನವಾಗಿದೆ). ಈ ಅದ್ಭುತ ವಿದ್ಯಮಾನ ವನ್ನು ಜಗತ್ತಿನ 'ಶ್ರೀಮಂತರ ಪಟ್ಟಿ'ಯಲ್ಲಿ ಅದ್ಭುತ ರೀತಿಯಲ್ಲಿ ಏರಿಕೆಯಾಗಿರುವ ಅತ್ಯಧಿಕ 'ಉನ್ನತ ನಿವ್ವಳ ಸಂಪತ್ತಿ'ನ ಒಡೆಯರಾದ ಭಾರತೀಯರ ಸಂಖ್ಯೆ ಒಂದು ದಶಕಕ್ಕಿಂತ ಕಡಿಮೆ ಅವಧಿಯಲ್ಲಿ ೮ರಿಂದ ೫೨ಕ್ಕೆ ಏರಿಕೆಯಾಗಿರುವುದರಲ್ಲಿ ಕಾಣಬಹುದು (ಇವರ ಸಂಖ್ಯೆ ೨೦೧೫ರಲ್ಲಿ ೯೦ರಷ್ಟಾಗಿತ್ತು ಮತ್ತು ಇವರ ನಿವ್ವಳ ಸಂಪತ್ತಿನ ಮೌಲ್ಯ ೧೯೧.೫ ಬಿಲಿಯನ್ ಡಾಲರುಗಳಷ್ಟಾಗಿತ್ತು). ಈ ರೀತಿಯಲ್ಲಿ ಹೊಸದಾಗಿ ಶ್ರೀಮಂತರಾಗಿ ಉದ್ಭವಿಸಿದವರೆಲ್ಲ ಭೂಮಿಯನ್ನು ಮತ್ತು ನೈಸರ್ಗಿಕ ಸಂಪನ್ಮೂಲವನ್ನು ವರ್ಗಾವಣೆ ಮೂಲಕ ಪಡೆದವರೇ ಆಗಿದ್ದಾರೆ. ಸಾರ್ವಜನಿಕ ಉದ್ದಿಮೆಗಳ ಆಸ್ತಿಯ ಮೌಲ್ಯವನ್ನು ಕೆಳಮಟ್ಟದಲ್ಲಿಟ್ಟು ಅವುಗಳನ್ನು ಖಾಸಗೀಕರಣ ಮಾಡಿ ರಾತ್ರೋರಾತ್ರಿ ರಷ್ಯವು ಬಿಲಿಯನ್ನರನ್ನು ಸೃಷ್ಟಿಮಾಡಿದರೆ, ಅನಧಿಕೃತವಾಗಿ ಭೂ ಸ್ವಾಧೀನದ ಮೂಲಕ ನೈಸರ್ಗಿಕ ಸಂಪನ್ಮೂಲವನ್ನು ಖಾಸಗೀಕರಣ ಮಾಡಿದ್ದು ಭಾರತವು ಅಳವಡಿಸಿಕೊಂಡ ವಿಧಾನವಾಗಿದೆ. ಸಂಸತ್ತಿನಲ್ಲಿ ನಂಬಲಾರದ ರೀತಿಯಲ್ಲಿ ಉದ್ಭವಿಸಿದ ನವೀನ ಶ್ರೀಮಂತರ ಸಂಖ್ಯೆಯು ಏರಿಕೆಯಾಗಿದ್ದರ ಬಗ್ಗೆಯೂ ನಮಗೆ ಕೆಲವು ಅಂದಾಜುಗಳು ದೊರೆಯುತ್ತವೆ. ದೇಶದಲ್ಲಿ ಶೇ. ೭೭ರಷ್ಟು ಜನರು ದಿನಕ್ಕೆ ರೂ. ೨೦ಕ್ಕಿಂತ ಕಡಿಮೆ ಖರ್ಚು ಮಾಡಿ ಬದುಕುತ್ತಿದ್ದರೆ (೨೦೦೫), ದೇಶದಲ್ಲಿ ಶೇ. ೬೦ರಷ್ಟು ಜನಪ್ರತಿನಿಧಿಗಳು ಬಹುಕೋಟಿ ಶ್ರೀಮಂತರಾಗಿದ್ದಾರೆ.

ಸಾಂಸ್ಥಿಕ ಭ್ರಷ್ಟಾಚಾರದ ಬಗ್ಗೆ ನಮಗೆ ಸರ್ಕಾರದ ವರದಿಗಳಲ್ಲಿಯೂ ಪುರಾವೆ ಗಳು ದೊರೆಯುತ್ತವೆ. ಭಾರತ ಸರ್ಕಾರದ ಆಡಿಟರ್ ಆ್ಯಂಡ್ ಕಾಂಪ್‌ಟ್ರೋಲರ್ ಜನರಲ್ ಅವರ ೨೦೧೨-೧೩ರ ವರದಿ ಪ್ರಕಾರ ವಿಶೇಷ ಆರ್ಥಿಕ ವಲಯಕ್ಕಾಗಿ (ವಿಶೇಷ ಆರ್ಥಿಕ ವಲಯ : ಎಸ್.ಈ.ಝೆಡ್. : ೨೦೦೫ರಲ್ಲಿ ಆರಂಭವಾಯಿತು) ಸ್ವಾಧೀನಪಡಿಸಿಕೊಂಡ ಭೂಮಿಯಲ್ಲಿ ಶೇ. ೩೮ರಷ್ಟನ್ನು ಬಳಕೆ ಮಾಡಿಕೊಂಡಿಲ್ಲ. ಇದರಲ್ಲಿ ತಯಾರಿಕಾ ಉದ್ದಿಮೆಗಳ ಪ್ರಮಾಣ ಶೇ. ೯. ನಿಗದಿಪಡಿಸಿದ್ದ

ಉದ್ಯೋಗದ ಗುರಿಯಲ್ಲಿ ಶೇ. ೮ರಷ್ಟನ್ನು ಮಾತ್ರ ಸಾಧಿಸಿಕೊಳ್ಳಲಾಗಿದೆ. ಕೆಲವು ರಾಜ್ಯಗಳಲ್ಲಿ ರಚಿಸಲಾಗಿರುವ ಭೂಬ್ಯಾಂಕುಗಳು ಸ್ವಾಧೀನಪಡಿಸಿಕೊಂಡ ಭೂಮಿಯಲ್ಲಿ ಬೃಹತ್ ಉದ್ದಿಮೆಪತಿ ಕುಟುಂಬಗಳು ಮತ್ತು ಕಂಪನಿಗಳು ಸಾಕಷ್ಟು ಕಾಲ ವಿಳಂಬ ಮಾಡಿ ತಮಗೆ ಸೂಕ್ತವಾದ ಸ್ಥಳದಲ್ಲಿ ಭೂಮಿಯನ್ನು ಪಡೆದುಕೊಂಡಿವೆ.

ಈ ಬೆಳವಣಿಗೆಯ ನಕಾರಾತ್ಮಕ ಮುಖವೆಂದರೆ ಗ್ರಾಮೀಣ ಜೀವನಾಧಾರವನ್ನು ವ್ಯಾಪಕವಾಗಿ ನಾಶಮಾಡಿದ್ದಾಗಿದೆ. ಹೀಗೆ ನಾಶವಾದವರಲ್ಲಿ ಭೂಮಾಲೀಕತ್ವ ಹೊಂದಿದ್ದ ಅತಿಸಣ್ಣ ಮತ್ತು ಸಣ್ಣ ರೈತರಲ್ಲದೆ (ಮಾಲೀಕ ಉಳುಮೆಗಾರರು) ಗೇಣಿದಾರರು, ಭೂರಹಿತ ಕೃಷಿ ಕೂಲಿಕಾರರು, ಮೀನುಗಾರರು, ಬೆಸ್ತರು ಮತ್ತು ಅರೆ ಅಲೆಮಾರಿಗಳು ಹಾಗೂ ಪಶುಸಂಗೋಪನೆಯಲ್ಲಿ ನಿರತರಾಗಿದ್ದವರೂ ಸೇರಿದ್ದಾರೆ. ನಗರ ಅನೌಪಚಾರಿಕ ವಲಯ ಎನ್ನುವುದು ಬದುಕುಳಿಯುವುದಕ್ಕಾಗಿ ದುಡಿಮೆಯಲ್ಲಿ ನಿರತರಾದವರ ವಾಸದ ಗೂಡುಗಳಾಗಿದೆ. ಇವರೆಲ್ಲ ಅಲ್ಲಿ ಸಾಮಾನ್ಯವಾಗಿ ಕಾನೂನನ್ನು ಉಲ್ಲಂಘಿಸಿ ವಾಸಸ್ಥಳಕ್ಕಾಗಿ, ಇತರೆ ಸಂಪನ್ಮೂಲಕ್ಕಾಗಿ, ಆಸ್ಪತ್ರೆಗಳಿಗಾಗಿ, ಶಾಲೆಗಳಿಗಾಗಿ ಮತ್ತು ರಸ್ತೆಗಳಿಗಾಗಿ ಹೋರಾಟ ಮಾಡುವವರಾಗಿದ್ದಾರೆ. ಇದರಿಂದಾಗಿ ನಗರ ಪ್ರದೇಶಗಳು ಜನದಟ್ಟಣೆಯ ಸಮಸ್ಯೆಯನ್ನು ಎದುರಿಸುವಂತಾಗಿದೆ. ಈ ಬೆಳವಣಿಗೆ ಯಿಂದಾಗಿ ಕಾರ್ಪೊರೇಟ್ ವಲಯದ ಸಾಧನೆಯ ಮೇಲೂ ಪರಿಣಾಮ ಉಂಟಾಗಿದೆ.

ಬಂಡವಾಳಶಾಹಿ ಜನತಂತ್ರದಲ್ಲಿ ಸಾಮಾನ್ಯವಾಗಿ ಸರ್ಕಾರವು ಶ್ರಮಶಕ್ತಿ ಪರವಾಗಿಲ್ಲದೆ ಬಂಡವಾಳದ ಪರವಾಗಿರುವುದು ಅಚ್ಚರಿಯ ಸಂಗತಿಯೇನಲ್ಲ. ಈ ಬೆಳವಣಿಗೆಯಿಂದ ಭಾರತವೂ ಹೊರತಲ್ಲ. ಇಷ್ಟಾದ ಮೇಲೂ ಉಳಿಯುವ ಪ್ರಶ್ನೆಯೆಂದರೆ ಅಪಾರ ಪ್ರಮಾಣದ ಬಡ ಜನರಿಂದ ಕೂಡಿದ ಜನತಂತ್ರದಲ್ಲಿ ಬಂಡವಾಳ ಹೂಡಿಕೆಯನ್ನು ಉತ್ತೇಜಿಸುವ ಸಲುವಾಗಿ ಕಾರ್ಪೊರೇಟ್ ಬಂಡವಾಳದ ಪರವಾಗಿ ಸರ್ಕಾರವು ಎಷ್ಟು ಬಾಗಬಹುದು? ಇದಕ್ಕೆ ಜಗತ್ತಿನ ಅತಿದೊಡ್ಡ ಜನತಂತ್ರವಾದ ಭಾರತವು ಕನಿಷ್ಠ ಅಲ್ಪಾವಧಿಯಲ್ಲಾದರೂ ಉತ್ತರವನ್ನು ನೀಡಿದೆ. ಸರ್ಕಾರ ಮತ್ತು ಕಾರ್ಪೊರೇಟುಗಳ ನಡುವೆ ಭೂಸ್ವಾಧೀನಕ್ಕೆ ಸಂಬಂಧಿಸಿದಂತೆ ಅಪಾಯಕಾರಿ ಪರಸ್ಪರಾವಲಂಬನೆ ಸಂಬಂಧ ಬೆಳೆದುಬಿಟ್ಟಿದೆ. ಈ ಕಾರ್ಪೊರೇಟು ಗಳು ಭೂಮಿ ಮತ್ತು ನೈಸರ್ಗಿಕ ಸಂಪನ್ಮೂಲಗಳ ಸ್ವಾಧೀನ ನೀತಿಗಳನ್ನು ಊರ್ಜಿತ ಗೊಳಿಸುವುದಕ್ಕಾಗಿ ರಾಜಕೀಯ ವರ್ಗದ ಮನವೊಲಿಸುವುದಕ್ಕೆ ರಾಜಕೀಯ ಪಕ್ಷ ಗಳಿಗೆ ಭಾರಿ ದೇಣಿಗೆ ನೀಡುತ್ತವೆ. ದೇಣಿಗೆಗಳು ಅಪಾರ ಪ್ರಮಾಣದಲ್ಲಿರಬಹುದು. ಏಕೆಂದರೆ ಸರಿಸುಮಾರು ಉಚಿತವಾಗಿ ಕಾಣಿಕೆ ರೀತಿಯಲ್ಲಿ ದೊರೆಯುವ ಭೂಮಿಯಿಂದ ಅವು ನೀಡಿದ ದೇಣಿಗೆಗಿಂತ ಹೆಚ್ಚು ಪಟ್ಟು ಗಳಿಸಿಕೊಳ್ಳಬಹುದು. ಬಹುಪಕ್ಷೀಯ ಜನತಂತ್ರದಲ್ಲಿನ ಸ್ಪರ್ಧಾತ್ಮಕ ಚುನಾವಣೆ ಹೋರಾಟದಲ್ಲಿ ದೇಣಿಗೆ ಸಂಗ್ರಹಿಸುವುದರಲ್ಲಿ ಯಾವ ರಾಜಕೀಯ ಪಕ್ಷಗಳೂ ಹಿಂದೆ ಬಿದ್ದು ಅವಕಾಶವನ್ನು ಕಳೆದುಕೊಳ್ಳುವುದಕ್ಕೆ ಸಿದ್ಧವಿರುವುದಿಲ್ಲ. ಡೆಮೊಕ್ರಸಿ ವಾಚ್ ಎಂಬ ಸಂಸ್ಥೆಯು ಬಹಳ ಎಚ್ಚರಿಕೆಯಿಂದ ಮಾಡಿದ ಅಂದಾಜಿನ ಪ್ರಕಾರ ಎರಡು ರಾಷ್ಟ್ರೀಯ ಪಕ್ಷಗಳಾದ ಕಾಂಗ್ರೆಸ್ ಮತ್ತು ಬಿಜೆಪಿಗಳ ಪಕ್ಷನಿಧಿಯು ಅರ್ಧ ದಶಕಕ್ಕಿಂತ ಕಡಿಮೆ ಕಾಲಾವಧಿ ಯಲ್ಲಿ ಕ್ರಮವಾಗಿ ಶೇ. ೨೦೦ ಮತ್ತು ಶೇ. ೬೦೦ರಷ್ಟು ಏರಿಕೆಯಾಗಿದೆ. ಈ ಬೃಹತ್ ಎರಡು ರಾಷ್ಟ್ರೀಯ ಪಕ್ಷಗಳ ನಿಧಿಯಲ್ಲಿ ಏರಿಕೆಯಾದ ಪ್ರಮಾಣದಲ್ಲಿ ಏರಿಕೆಯಾಗದಿದ್ದರೂ ಸಣ್ಣ ಪಕ್ಷಗಳಾದ ಸಿ.ಪಿ.ಎಮ್. ಮತ್ತು ಎ.ಪಿ.ಪಿ. ಪಕ್ಷಗಳ ನಿಧಿಯು ಕೂಡ ಶೇಕಡ ಪ್ರಮಾಣದಲ್ಲಿ ಏರಿಕೆಯಾಗಿದೆ.

ಜನಪ್ರಿಯ ಪ್ರಾತಿನಿಧ್ಯವು ಗಂಭೀರವಾದ ವಿಕಲತೆಗೆ ಒಳಗಾಗಿದೆ. ಬಡಜನ ರಿಂದಲೇ ಕೂಡಿರುವ ದೇಶದಲ್ಲಿ ಬಹುಜನರ ಬದುಕು ಗ್ರಾಮೀಣ ಆರ್ಥಿಕತೆಯನ್ನು ಮತ್ತು ಸಾಂಪ್ರದಾಯಿಕ ಕೃಷಿಯನ್ನು ಅವಲಂಬಿಸಿರುತ್ತದೆ. ಜನತಂತ್ರದ ಸುಸ್ಥಿರತೆಗೆ ಬಡವರ ಬಗ್ಗೆ ಜನಪ್ರಿಯ ಧೋರಣೆಯನ್ನು ತಳೆಯುವುದು ಅಗತ್ಯವಾಗುತ್ತದೆ. ಆದ್ದರಿಂದ ವಿರೋಧ ಪಕ್ಷದಲ್ಲಿದ್ದಾಗ ಎಲ್ಲ ರಾಜಕೀಯ ಪಕ್ಷಗಳು ಬಲವಂತದ ಭೂಸ್ವಾಧೀನದ ಬಗ್ಗೆ ಅತ್ಯಂತ ವಿಮರ್ಶಾತ್ಮಕ ನಿಲುವು ತಳೆಯುತ್ತವೆ ಮತ್ತು ಬಡವರ ಪರವಾಗಿ ಶಾಸನಗಳಲ್ಲಿ ತಿದ್ದುಪಡಿಗಾಗಿ ಒತ್ತಾಯಿಸುತ್ತವೆ. ಆದರೆ ಅಧಿಕಾರಕ್ಕೆ ಬಂದಾಗ ಅವು ಅದೇ ಕಾರ್ಪೊರೇಟ್ ಪರವಾದ ಧೋರಣೆಯನ್ನು ಅನುಸರಿಸುತ್ತವೆ. ಇಲ್ಲಿನ ಕುತೂಹಲಕಾರಿ ಸಂಗತಿಯೆಂದರೆ ಅಧಿಕಾರದಲ್ಲಿದ್ದಾಗ ರಾಜಕೀಯ ಪಕ್ಷಗಳು ಕಾರ್ಪೊರೇಟುಗಳಿಗೆ ವಿಶೇಷ ಉತ್ತೇಜನ ಮತ್ತು ವಿನಾಯಿತಿಗಳನ್ನು ನೀಡಲು ಯಾವ ಮಟ್ಟಕ್ಕಾದರೂ ಇಳಿಯುತ್ತವೆ. ಆದರೆ ಅದೇ ರಾಜಕೀಯ ಪಕ್ಷವು ಅಧಿಕಾರದಲ್ಲಿಲ್ಲ ದಿದ್ದಾಗ ಕಾರ್ಪೊರೇಟ್ ಪರವಾದ ನೀತಿಗಳನ್ನು ತೀವ್ರವಾಗಿ ಟೀಕಿಸುವುದಕ್ಕೆ ಯಾವ ಮಟ್ಟಕ್ಕಾದರೂ ಎದ್ದುನಿಲ್ಲುತ್ತವೆ. ಪ್ರತಿ ಚುನಾವಣೆಯ ನಂತರ ಅವುಗಳ ವಿಶ್ವಾಸಾರ್ಹತೆಯ ಕೊರತೆ ಹೆಚ್ಚುತ್ತಾ ಹೋಗುತ್ತದೆ. ಜನಪ್ರಿಯ ವಿರೋಧವೂ ಸಂಚಯನಗೊಳ್ಳುತ್ತಾ ನಡೆಯುತ್ತದೆ. ಚುನಾಯಿತ ಜನಪ್ರತಿನಿಧಿಗಳು ಮತ್ತು ಅವರನ್ನು ಆಯ್ಕೆಮಾಡಿದ ಜನರ ನಡುವಿನ ಅಸಮಾಧಾನವೂ ಆತಂಕಕಾರಿ ಮಟ್ಟವನ್ನು ತಲುಪಿಬಿಟ್ಟಿದೆ.

ಇಷ್ಟಾದ ಮೇಲೂ ಜನತಂತ್ರದ ಕ್ರಿಯೆಯು ಮುಂದುವರಿಯಲು ಜನರ ಅಸಮಾಧಾನವನ್ನು ನಿರ್ವಹಿಸಬೇಕಾಗುತ್ತದೆ. ಇದಕ್ಕೆ ಜನತಂತ್ರದ ಸ್ವರೂಪವನ್ನು ಭದ್ರವಾಗಿ ರಕ್ಷಿಸಿಕೊಂಡು ಜನಪ್ರಾತಿನಿಧ್ಯದ ಒಳರಚನೆಯನ್ನು ಬದಲಾಯಿಸ ಬೇಕಾಗುತ್ತದೆ. ರಾಜಕೀಯ ಪಕ್ಷಗಳಿಗೆ ಕಾರ್ಪೊರೇಟುಗಳು ನೀಡುವ ಕಾಣಿಕೆ ಯಿಂದಾಗಿ ರಾಜಕೀಯ ಪಕ್ಷಗಳ ಚುನಾವಣಾ ವೆಚ್ಚವು ವಿವಿಧ ಪ್ರಮಾಣದಲ್ಲಿ ಬೃಹತ್ ಪ್ರಮಾಣದಲ್ಲಿ ಏರಿಕೆಯಾಗುತ್ತದೆ. ರಾಜಕೀಯರಂಗದ ಪ್ರವೇಶಕ್ಕೆ ಅಧಿಕಾಧಿಕ ಹಣ ಬೇಕಾಗುವುದರಿಂದ ಅದು ಚುನಾವಣಾ ಕ್ಷೇತ್ರವನ್ನು ಪ್ರವೇಶಿಸುವವರಿಗೆ ಅಡ್ಡಿಯಾಗಿ ಬಿಟ್ಟಿದೆ. ಹೀಗೆ ದೊಡ್ಡ ಸಂಖ್ಯೆಯಲ್ಲಿರುವ ರೂಕ್ಷ ಬಡವರ ಪ್ರವೇಶವನ್ನು ಪರಿಣಾಮಕಾರಿಯಾಗಿ ಇದು ತಡೆದುಬಿಡುತ್ತದೆ. ಇದರ ಜೊತೆಗೆ ಒತ್ತಡಕ್ಕೆ ಬಾಗುವ ಬುದ್ಧಿಜೀವಿಗಳ ನೆರವಿನೊಂದಿಗೆ ಜಾಹೀರಾತಿನ ಮೂಲಕ ಮತ್ತು ಮಾಧ್ಯಮದ ಬೆಂಬಲದ ಮೂಲಕ ವರಮಾನದ ಬೆಳವಣಿಗೆ ಮತ್ತು ಜನತಂತ್ರದ ಪರವಾದ ಸಾರ್ವಜನಿಕ ಅಭಿಮತವನ್ನು ನಿರಂತರವಾಗಿ ತಯಾರಿಸುವ ಕಾರ್ಯವು ನಡೆಯುತ್ತಿದೆ.

ಆದರೆ ಈ ಜನತಂತ್ರದ 'ನಿರ್ವಹಣೆ' ಎನ್ನುವುದು ತನ್ನದೇ ಸಮಸ್ಯೆಯನ್ನು ಹುಟ್ಟುಹಾಕುತ್ತಿದೆ.

ಉತ್ಪಾದನೆಯ ಮೂಲಕ ಲಾಭ ಮಾಡಿಕೊಳ್ಳುವ ಕ್ರಮಕ್ಕೆ ಪ್ರತಿಯಾಗಿ ಕಾರ್ಪೊರೇಟುಗಳ ಗಮನವು ಭೂಮಿ ಮತ್ತು ನೈಸರ್ಗಿಕ ಸಂಪನ್ಮೂಲವನ್ನು ಕಬಳಿಸುವ ಚಟುವಟಿಕೆಗಳನ್ನು ಸರ್ಕಾರವು ಆಗುಮಾಡಿಕೊಡುತ್ತಿರುತ್ತದೆ. ಇದರಿಂದಾಗಿ ಹಣವಂತ ವರ್ಗ ಮತ್ತು ಪ್ರಬಲವಾದ ಕೆಲವೇ ಕೆಲವು ಬಂಡವಾಳಶಾಹಿಗಳ ಆಧಿಪತ್ಯವು ನಿಧಾನವಾಗಿ ನೀತಿಗಳನ್ನು ನಿಯಂತ್ರಿಸತೊಡಗುತ್ತದೆ. ಕಾರ್ಖಾನೆಗಳಲ್ಲಿನ ಕಾರ್ಮಿಕರ ನೇರ ಶೋಷಣೆಯ ಮೂಲಕ ಲಾಭ ಗಳಿಸುವ ಮಾರ್ಗವನ್ನು ಬಿಟ್ಟು ಗ್ರಾಮೀಣ ಪ್ರದೇಶದಲ್ಲಿ ಬಡವರ ಭೂಮಿಯನ್ನು ಕಬಳಿಸುವ ಮೂಲಕ ಸಂಪತ್ತಿನ ಸಂಗ್ರಹಣೆಯ ಮಾರ್ಗವನ್ನು ಅಳವಡಿಸಿಕೊಂಡಿರುವುದರಿಂದ ಬಂಡವಾಳಶಾಹಿಗಳ ಜೊತೆ ಶಾಮೀಲಾಗದ ಕಾರ್ಮಿಕರ ಚಳುವಳಿ ಮತ್ತು ಕಾರ್ಮಿಕ ಸಂಘಗಳ ನಿಜವಾದ ವಿರೋಧವು ಹೆಚ್ಚು ಹೆಚ್ಚು ಪ್ರಸ್ತುತತೆಯನ್ನು ಕಳೆದುಕೊಳ್ಳತೊಡಗುತ್ತದೆ. ಇಲ್ಲಿ ಸಂಘಟಿತ ಕಾರ್ಮಿಕ ಚಳುವಳಿಯು ಇಲ್ಲವೇ ಇಲ್ಲ ಎನ್ನುವಂತಾಗಿದೆ. ಸಂಘಟಿತ ವಲಯದ ಮತ್ತು ಅಸಂಘಟಿತ ವಲಯದ ಕಾರ್ಮಿಕರ ಅನೌಪಚಾರೀಕರಣ ಮತ್ತು ಹಂಗಾಮೀಕರಣದಿಂದಾಗಿ ಕಾರ್ಮಿಕ ಚಳುವಳಿಗಳು ಮತ್ತಷ್ಟು ಛಿದ್ರೀಕರಣಗೊಂಡಿವೆ.

ಕೆಲವೇ ಕೆಲವರ ಆಧಿಪತ್ಯ ಜನತಂತ್ರದ ಕಡೆಗೆ ಸಾಗುತ್ತಿರುವುದರ ನಡುವೆ ಅಂದರೆ ಒಳರಚನೆಯು ಕೆಲವರ ಆಧಿಪತ್ಯವಾಗಿ ಮತ್ತು ಬಾಹ್ಯ ರೂಪದಲ್ಲಿ ಜನತಂತ್ರ ವಾಗಿರುವ ವ್ಯವಸ್ಥೆಯಲ್ಲಿ ಭೂಮಿಯ ಆಕ್ರಮಣದ ವಿರುದ್ಧ ಸ್ವಯಂಪ್ರೇರಿತವಾಗಿ ಕಾಲಕಾಲಕ್ಕೆ ಆಸ್ಫೋಟಗೊಳ್ಳುವ ಜನಪ್ರಿಯ ಚಳುವಳಿಗಳ ರಾಜಕೀಯ ನಿರ್ವಾತವನ್ನು ತುಂಬುತ್ತಿದೆ. ಸಮಾಧಾನಕರ ವಿಚಾರವೆಂದರೆ ಕೈಗಾರಿಕೀಕರಣವು ದೀರ್ಘಾವಧಿಯಲ್ಲಿ ನಿರುದ್ಯೋಗ ಸಮಸ್ಯೆಯನ್ನು ಪರಿಹರಿಸುತ್ತದೆ ಎಂಬ ನಂಬಿಕೆ ಮತ್ತು ಅಲ್ಪಾವಧಿಯ ಜನತಂತ್ರದ ಉತ್ತರದಾಯಿತ್ವದ ನಡುವೆ ಸಮಂಜಸ ಹೊಂದಾಣಿಕೆ ಕಾಣುವುದಿಲ್ಲ. ಕೆಲವೇ ಕೆಲವರ ಆಧಿಪತ್ಯದಿಂದ ಕೂಡಿದ ಜನತಂತ್ರದ ಬೆಳವಣಿಗೆ ಮತ್ತು ಸಾಮಾಜಿಕ ಸಾಂಪ್ರದಾಯೀಕರಣ ಹಾಗೂ ಬಹುಮತಾಂಧತೆಯ ರಾಜಕೀಯ ಅಸಹಿಷ್ಣುತೆಗಳು ಒಂದರೊಡನೊಂದು ಬೆರೆತು ಜನತಂತ್ರದ ವಿಶ್ವಾಸದ ಮೇಲೆ ಆಧಿಪತ್ಯ ಸ್ಥಾಪಿಸಿಬಿಟ್ಟಿವೆ. ನಾವು ದಾಂತೆಯ ನರಕದ ಕಡೆಗೆ ಚಲಿಸುತ್ತಿದ್ದೇವೆ. ಇಲ್ಲಿನ ಗೋಡೆಯ ಮೇಲಿನ ಬರಹ ಹೀಗಿದೆ: 'ಎಲ್ಲ ಭರವಸೆಯನ್ನು ಬಿಟ್ಟುಕೊಟ್ಟು ಈ ಸ್ಥಳವನ್ನು ಪ್ರವೇಶಿಸು'. ಯಾರಿಗೆ ವಿಶ್ವಾಸವನ್ನು ಬಿಟ್ಟುಕೊಡಲು ಮನಸ್ಸಿಲ್ಲವೋ ಅವರಿಗೆ ಉಳಿದಿರುವ ಒಂದೇ ಮಾರ್ಗ 'ಪ್ರತಿಭಟನೆ'.

ಮೂಲ : **ಶ್ರೀ ಅಮಿತ್ ಬಾಧುರಿ**
ಅನುವಾದ : **ಡಾ॥ ಟಿ. ಆರ್. ಚಂದ್ರಶೇಖರ**
ಸಮಾಲೋಚಕರು, ನಾಲ್ಕನೇ ರಾಜ್ಯ ಹಣಕಾಸು ಆಯೋಗ, ದಕ್ಷಿಣ ಭಾಗ, ಮೂರನೆ ಮಹಡಿ
ಖನಿಜ ಭವನ, ರೇಸ್ ಕೋರ್ಸ್ ರೋಡ್, ಬೆಂಗಳೂರು – ೫೬೦ ೦೦೧

ಕಳೆದ ನಾಲ್ಕೂವರೆ ವರ್ಷಗಳ ಹಿಂದೆ ಕೇಂದ್ರದಲ್ಲಿ ಅಧಿಕಾರ ಸ್ಥಾಪಿಸಿದ ನರೇಂದ್ರ ಮೋದಿಯವರ ನೇತೃತ್ವದ ಎನ್.ಡಿ.ಎ. ಮೈತ್ರಿಕೂಟದ ಸರ್ಕಾರ ಇನ್ನು ಆರು ತಿಂಗಳಲ್ಲಿ ಪೂರ್ಣಾವಧಿಯನ್ನು ಮುಗಿಸಿ ೨೦೧೯ರ ಸಾರ್ವತ್ರಿಕ ಚುನಾವಣೆಗೆ ಸಜ್ಜುಗೊಳ್ಳುತ್ತಿದೆ. ಆದರೆ ಮೋದಿಯ ಸರ್ಕಾರದ ಸಾಧನೆಗಳನ್ನು ಪರಾಮರ್ಶೆಗೆ ಒಳಪಡಿಸಿದಾಗ ನಿರಾಸೆ ಮತ್ತು ಅತೃಪ್ತಿ ಎದ್ದು ಕಾಣುತ್ತದೆ. ಈ ಹಿನ್ನೆಲೆಯಲ್ಲಿ ಸಂಘಪರಿವಾರದ ಆತ್ಮಸ್ಥೈರ್ಯ ಕುಗ್ಗಿರುವುದನ್ನು ನಾವು ನೋಡಬಹುದು. ೨೦೧೯ರ ಚುನಾವಣೆಯ ಅಖಾಡಕ್ಕೆ ಇಳಿಯುವ ಮುನ್ನ ಯಾವ ವಿಷಯವನ್ನು ಆಧಾರವಾಗಿಟ್ಟುಕೊಂಡು ಮತದಾರರ ಮನ ಗೆಲ್ಲಬೇಕು ಎಂಬುದರ ಕುರಿತು ಪ್ರಧಾನಿ ಮೋದಿಯವರಿಂದ ಹಿಡಿದು ಬಹುತೇಕ ಬಿ.ಜೆ.ಪಿ. ನಾಯಕರಿಗೆ ಸ್ಪಷ್ಟವಾದ ಕಲ್ಪನೆಯಾಗಲಿ, ಆತ್ಮವಿಶ್ವಾಸವಾಗಲಿ ಇದ್ದಂತೆ ಕಾಣುವುದಿಲ್ಲ.

ಅಧಿಕಾರದ ಚುಕ್ಕಾಣಿ ಹಿಡಿಯಬೇಕು ಎಂಬ ಏಕೈಕ ಉದ್ದೇಶದಿಂದ ಕೇವಲ ಮಾತುಗಳನ್ನು ಬಂಡವಾಳ ಮಾಡಿಕೊಂಡು, ಈಡೇರಿಸಲು ಸಾಧ್ಯವಾಗದ ಯೋಜನೆಗಳ ಕನಸುಗಳನ್ನು ಕಳೆದ ಚುನಾವಣೆಯಲ್ಲಿ ಮತದಾರರ ಮನಸ್ಸಿನೊಳಗೆ ಬಿತ್ತಿದ ಮೋದಿಯವರು ಈಗ ಮೌನಕ್ಕೆ ಶರಣಾಗಿದ್ದಾರೆ. ಹಿಂದಿನ ಯು.ಪಿ.ಎ. ಸರ್ಕಾರದ ಆಡಳಿತದ ವೈಫಲ್ಯಗಳನ್ನು ಎತ್ತಿ ತೋರಿಸುವಾಗ ತಮ್ಮ ೫೬ ಇಂಚಿನ ಎದೆಯನ್ನುಬ್ಬಿಸಿ ಮಾತನಾಡಿದ ಸಂಘಪರಿವಾರದ ಈ ನಾಯಕರಿಗೆ ತಮ್ಮ ಸರ್ಕಾರದ ಸಾಧನೆಗಳ ಕುರಿತು ಹೇಳಿಕೊಳ್ಳುವಾಗ ಎದೆ ೨೮ ಇಂಚಿಗೆ ಕುಗ್ಗುತ್ತಿದೆ. ತೈಲ ಬೆಲೆ ಏರಿಕೆ, ಅಡುಗೆ ಅನಿಲ ಬೆಲೆ ಏರಿಕೆಯಿಂದ ಹಿಡಿದು, ಕಲ್ಲಿದ್ದಲು ಹಗರಣ, ೨ ಜಿ. ಸ್ಪೆಕ್ಟ್ರಂ ಹಗರಣಗಳನ್ನು ಮುಂದಿಟ್ಟುಕೊಂಡು ಯು.ಪಿ.ಎ. ಸರ್ಕಾರದ ವಿರುದ್ಧ ಬೀದಿಗಿಳಿದಿದ್ದ "ದೇಶಭಕ್ತರು" ಮತ್ತು ಮೋದಿಯ ಆರಾಧಕರೆಲ್ಲಾ ಮಿಂಚಿನಂತೆ ಮಾಯವಾಗಿದ್ದಾರೆ. ಸಾಮಾಜಿಕ ಜಾಲತಾಣಗಳಲ್ಲಿ ಹಾಗೂ ದೃಶ್ಯಮಾಧ್ಯಮಗಳಲ್ಲಿ "ನಮ್ಮ ಮೋದಿಯವರು ವಿದೇಶದಲ್ಲಿರುವ ಕಪ್ಪುಹಣವನ್ನು ವಾಪಸ್ ತರುತ್ತಾರೆ, ಭಾರತದ ರಸ್ತೆಗಳನ್ನು ಚಿನ್ನದ ರಸ್ತೆಗಳನ್ನಾಗಿ ಪರಿವರ್ತಿಸುತ್ತಾರೆ, ಎಲ್ಲರ ಖಾತೆಗಳಿಗೆ ತಲಾ ಹದಿನೈದು ಲಕ್ಷ ರೂಪಾಯಿ ಜಮೆ ಮಾಡುತ್ತಾರೆ" ಎಂಬ ಮಾತುಗಳ ಕತ್ತಿಯನ್ನು ಝಳಪಿಸಿದ ಶೂರರು ಇದೀಗ ಹೊಸ ಸುಳ್ಳುಗಳನ್ನು ಸೃಷ್ಟಿಸಲಾಗದೆ ಅಡಗುತಾಣಗಳನ್ನು ಆಶ್ರಯಿಸಿದ್ದಾರೆ.

ಹಿಂದಿನ ಯು.ಪಿ.ಎ. ಸರ್ಕಾರದಲ್ಲಿ ಪ್ರಧಾನಿಯಾಗಿದ್ದ ಡಾ॥ ಮನಮೋಹನ್ ಸಿಂಗ್‌ರವರು ಏನನ್ನೂ ಮಾತನಾಡಲಾರದೆ ಮತದಾರರ ವಿಶ್ವಾಸ ಕಳೆದುಕೊಂಡರು. ಇಂದಿನ ಎನ್.ಡಿ.ಎ. ಮೈತ್ರಿಕೂಟದ ಪ್ರಧಾನಿ ನರೇಂದ್ರ ಮೋದಿ ಅನಾವಶ್ಯಕವಾಗಿ ಮಾತನಾಡಿ ವಿಶ್ವಾಸ ಕಳೆದುಕೊಂಡಿದ್ದಾರೆ. ೨೦೧೪ರ ಸಾರ್ವತ್ರಿಕ ಚುನಾವಣೆಯ ಸಂದರ್ಭದಲ್ಲಿ ತಮ್ಮ ದೇಹಕ್ಕೆ ರೆಕ್ಕೆಗಳನ್ನು ಕಟ್ಟಿಕೊಂಡವರಂತೆ ದೇಶಾದ್ಯಂತ ೩೨೭ ಚುನಾವಣಾ ರ‍್ಯಾಲಿಗಳಲ್ಲಿ ಪಾಲ್ಗೊಂಡು ದಾಖಲೆ ನಿರ್ಮಿಸಿದ ನರೇಂದ್ರ ಮೋದಿಯವರು ತಮ್ಮ ವಿದೇಶ ಪ್ರವಾಸದಲ್ಲಿಯೂ ಸಹ ಹಿಂದಿನ ಎಲ್ಲಾ ಪ್ರಧಾನಿಗಳ ದಾಖಲೆಯನ್ನು ಅಳಿಸಿಹಾಕಿದ್ದಾರೆ. ಪ್ರಧಾನಿಯಾದ ನಂತರ ಅವರು ೨೦೧೮ರ ಜುಲೈ ತಿಂಗಳವರೆಗೆ ಒಟ್ಟು ೭೧ ರಾಷ್ಟ್ರಗಳಿಗೆ ಭೇಟಿ ನೀಡಿದ್ದಾರೆ. ಅಮೆರಿಕಾಕ್ಕೆ ಐದು ಸಲ ಪ್ರವಾಸ ಕೈಗೊಂಡಿದ್ದಾರೆ. ಅವರ ಈವರೆಗಿನ ಒಟ್ಟು ವಿದೇಶ ಪ್ರವಾಸದ ವೆಚ್ಚ ೧೪೮೪ ಕೋಟಿ ರೂಪಾಯಿಗಳು. ಅಮೆರಿಕಾ, ಕೆನಡಾ ಮತ್ತು ಫ್ರಾನ್ಸ್ ದೇಶಗಳಿಗೆ ಪ್ರವಾಸ ಕೈಗೊಂಡ ಸಂದರ್ಭದಲ್ಲಿ ಉಪಗ್ರಹದ ಮೂಲಕ ಸಂಪರ್ಕ ಸಾಧಿಸುವ ಹಾಟ್ ಲೈನ್ ದೂರವಾಣಿ ವ್ಯವಸ್ಥೆ ಇದ್ದ ಚಾರ್ಟರ್ಡ್ ವಿಶೇಷ ವಿಮಾನವನ್ನು ಬಳಸಿದ ಪರಿಣಾಮವಾಗಿ ೩೭ ಕೋಟಿ ರೂಪಾಯಿಗಳನ್ನು ವ್ಯಯಮಾಡಿದ್ದಾರೆ. ಡಾ॥ ಮನಮೋಹನ ಸಿಂಗ್ ಪ್ರಧಾನಿಯಾಗಿದ್ದ ಎರಡು ಅವಧಿಯ ಒಟ್ಟು ಒಂಬತ್ತೂವರೆ ವರ್ಷಗಳಲ್ಲಿ ವಿದೇಶ ಪ್ರವಾಸದ ವೆಚ್ಚ ೬೪೨ ಕೋಟಿ ರೂಪಾಯಿಗಳಾಗಿತ್ತು. ಜಾಗತಿಕ ಮಟ್ಟದಲ್ಲಿ ನಾಯಕನಾಗಿ ಪ್ರತಿಬಿಂಬಿಸಿಕೊಳ್ಳಲು ಹೊರಟ ನರೇಂದ್ರ ಮೋದಿಯವರ ಹಪಾಹಪಿತನಕ್ಕೆ ಭಾರತದ ಬಡಜನತೆಯ ತೆರಿಗೆ ರೂಪದ ಹಣ ನೀರಿನಂತೆ ಖರ್ಚಾಯಿತು.

ದೆಹಲಿ ಕೆಂಪುಕೋಟೆಯ ವೇದಿಕೆಯಲ್ಲಿ, ಆಕಾಶವಾಣಿಯ "ಮನ್ ಕಿ ಬಾತ್" ಕಾರ್ಯಕ್ರಮದಲ್ಲಿ ಹಾಗೂ ಬಿ.ಜೆ.ಪಿ. ಕಾರ್ಯಕರ್ತರ ಸಮಾವೇಶಗಳಲ್ಲಿ ಹೆಮ್ಮೆಯಿಂದ ಘೋಷಿಸಿದ ಮೇಕ್ ಇನ್ ಇಂಡಿಯ, ನಮಾಮಿ ಗಂಗಾ, ಸ್ವಚ್ಛ ಭಾರತ್ ಅಭಿಯಾನವೂ ಸೇರಿದಂತೆ ವಿದೇಶದಲ್ಲಿರುವ ಕಪ್ಪು ಹಣವನ್ನು ವಾಪಸ್ ತರುವ ಯೋಜನೆಗಳು ವಿಫಲವಾಗಿ ಮಕಾಡೆ ಮಲಗುವುದರ ಜೊತೆಗೆ ಸಂಘಪರಿವಾರದ ನಾಯಕರ ಮಾತು ಮತ್ತು ಕೃತಿಯ ನಡುವಿನ ಅಂತರವನ್ನು ಎತ್ತಿ ತೋರಿಸಿದವು. ೨೦೧೬ರ ನವೆಂಬರ್ ತಿಂಗಳಿನಲ್ಲಿ ದೇಶದಲ್ಲಿ ಚಲಾವಣೆಯಲ್ಲಿರುವ ಲಕ್ಷಾಂತರ ಕೋಟಿ ರೂಪಾಯಿಗಳ ಕಪ್ಪು ಹಣವನ್ನು ನಿಗ್ರಹಿಸುತ್ತೇನೆ ಎಂದು ಹೇಳುವುದರ ಮೂಲಕ ರಾತ್ರೋರಾತ್ರಿ ಘೋಷಿಸಿದ ಕ್ಷಿಪ್ರ ಕ್ರಾಂತಿಯ ಹಳೆಯ ನೋಟುಗಳ ನಿಷೇಧ ಪ್ರಕ್ರಿಯೆ ಜಾಗತಿಕ ಮಟ್ಟದಲ್ಲಿ ನಗೆಪಾಟಲಿಗೀಡಾಯಿತು. ಚಲಾವಣೆಯಲ್ಲಿದ್ದ ಐನೂರು ಮತ್ತು ಸಾವಿರ ನೋಟುಗಳ ಬದಲಾಗಿ ಹೊಸದಾಗಿ ಬಿಡುಗಡೆ ಮಾಡಿದ ಎರಡು ಸಾವಿರ ಮತ್ತು ಐನೂರು ರೂಪಾಯಿ ನೋಟುಗಳ ಮುದ್ರಣ ವೆಚ್ಚ ಮತ್ತು

# ದೇಶಭಕ್ತರ ದಶಾವತಾರಗಳು



ಡಾ॥ ಎನ್. ಜಗದೀಶ್ ಕೊಪ್ಪ

ಅವುಗಳ ಆಕಾರಕ್ಕೆ ತಕ್ಕಂತೆ ಬ್ಯಾಂಕುಗಳ ಎ.ಟಿ.ಎಂ. ಯಂತ್ರಗಳ ವಿನ್ಯಾಸದ ಬದಲಾವಣೆಗೆ ಬರೋಬ್ಬರಿ ಹದಿನೆಂಟು ಸಾವಿರ ಕೋಟಿ ರೂಪಾಯಿ ವೆಚ್ಚವಾಯಿತು. ಚಲಾವಣೆಯಲ್ಲಿದ್ದ ಹಳೆಯ ನೋಟುಗಳಲ್ಲಿ ಶೇಕಡ ೯೮ರಷ್ಟು ಬ್ಯಾಂಕುಗಳಿಗೆ ಜಮೆಯಾದವು. ಹಾಗಾದರೆ ದೇಶದಲ್ಲಿ ಚಲಾವಣೆಯಲ್ಲಿ ಇದೆ ಎನ್ನಲಾಗಿದ್ದ ಕಪ್ಪುಹಣದ ಪ್ರಮಾಣ ಎಷ್ಟು? ಈ ಕುರಿತು ಯಾರಿಗೂ ಮಾಹಿತಿ ಇದ್ದಂತಿಲ್ಲ. ಮೋದಿಯವರ ಅವಿವೇಕತನದ ಪರಮಾವಧಿಗೆ ಸಾಕ್ಷಿಯಾದ ಈ ಪ್ರಕ್ರಿಯೆ ತುಘಲಕ್ ಆಡಳಿತದ ಪುನರಾವರ್ತನೆ ಎಂದು ಬಣ್ಣಿಸಬಹುದು.

ಇತ್ತೀಚೆಗೆ ವಿಶ್ವಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ನಿಧಿ ಸಂಸ್ಥೆ, ಅಂತರರಾಷ್ಟ್ರೀಯ ಮಾನವ ಸಂಪನ್ಮೂಲಗಳ ಸೂಚ್ಯಂಕ ಹಾಗೂ ಇನ್ನಿತರೆ ಜಾಗತಿಕ ಸಂಸ್ಥೆಗಳ ಸಮೀಕ್ಷಾ ವರದಿಗಳು ನರೇಂದ್ರ ಮೋದಿಯವರ ನಾಲ್ಕೂವರೆ ಆಡಳಿತದ ವೈಫಲ್ಯಗಳನ್ನು ಅನಾವರಣಗೊಳಿಸಿವೆ. ಜಾಗತಿಕ ಹಸಿವು ಸೂಚ್ಯಂಕದಲ್ಲಿ ೨೦೧೪ರಲ್ಲಿ ೫೫ನೇ ಸ್ಥಾನದಲ್ಲಿದ್ದ ಭಾರತ ೨೦೧೮ರಲ್ಲಿ ೧೦೩ನೇ ಸ್ಥಾನಕ್ಕೆ ಕುಸಿದಿದೆ. ಪಾಕಿಸ್ತಾನವನ್ನು ಹೊರತುಪಡಿಸಿದಂತೆ (೧೦೬ನೇ ಸ್ಥಾನ) ನೆರೆಯ ಚೀನಾ ೨೫ನೇ ಸ್ಥಾನ, ನೇಪಾಳ ೭೨, ಶ್ರೀಲಂಕಾ ೬೭ ಮತ್ತು ಬಂಗ್ಲಾದೇಶ ೮೬ನೇ ಸ್ಥಾನದಲ್ಲಿದ್ದು, ಭಾರತದ ನೈಜ ಚಿತ್ರ ಏನೆಂಬುದನ್ನು ಈ ಸೂಚ್ಯಂಕ ತೋರಿಸುತ್ತಿದೆ. ಆರೋಗ್ಯ ಮತ್ತು ಶಿಕ್ಷಣ ಈ ಎರಡೂ ಕ್ಷೇತ್ರಗಳು ಯಾವಾಗಲೂ ಸರ್ಕಾರದ ನಿಯಂತ್ರಣದಲ್ಲಿದ್ದುಕೊಂಡು, ಇವುಗಳ ಸೇವೆಗಳು ಕೈಗೆಟುಕುವ ಬೆಲೆಯಲ್ಲಿ ಬಡವರಿಗೆ ನಿಲುಕುವಂತಿರಬೇಕು. ಇದು ಪ್ರಜಾಪ್ರಭುತ್ವ ವ್ಯವಸ್ಥೆ ಇರುವ ರಾಷ್ಟ್ರಗಳ ಲಕ್ಷಣ. ಆದರೆ, ಇತ್ತೀಚೆಗಿನ ವರ್ಷಗಳಲ್ಲಿ ನಮ್ಮನ್ನಾಳುವ ಸರ್ಕಾರಗಳು ಮತ್ತು ಜನಪ್ರತಿನಿಧಿಗಳ ಬೇಜವಾಬ್ದಾರಿತನದಿಂದಾಗಿ ಖಾಸಗಿರಂಗದ ಬಂಡವಾಳಶಾಹಿಗಳ ಕೈಗೆ ಜಾರಿವೆ. ಇವುಗಳು ಸೇವಾಕ್ಷೇತ್ರಗಳಾಗುವ ಬದಲು ಉದ್ದಿಮೆಗಳಾಗಿ ಪರಿವರ್ತನೆಗೊಂಡಿವೆ. ಈ ಲಾಭದಾಯಕ ದಂಧೆಯಲ್ಲಿ ನಾಡಿನುದ್ದಕ್ಕೂ ಮಠಾಧೀಶರು, ರಾಜಕಾರಣಿಗಳು, ಬೃಹತ್ ಉದ್ದಿಮೆದಾರರು ಯಾವುದೇ ಆತ್ಮಸಾಕ್ಷಿಯ ಪ್ರಜ್ಞೆ ಇಲ್ಲದವರಂತೆ ಶಾಮೀಲಾಗಿದ್ದಾರೆ. ದುಬಾರಿಯಾದ ಶಿಕ್ಷಣ ಶುಲ್ಕವನ್ನು ಭರಿಸಲಾಗದೆ ಪ್ರತಿಭಾವಂತ ಬಡವಿದ್ಯಾರ್ಥಿಗಳು ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ, ಜಾಗತಿಕ ಮಟ್ಟದಲ್ಲಿ ವರ್ಷವೊಂದಕ್ಕೆ ಸುಮಾರು ಎಂಟು ಲಕ್ಷ ವಿದ್ಯಾರ್ಥಿಗಳು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದು, ಭಾರತವೊಂದರಲ್ಲಿ ಒಂದು ಲಕ್ಷದ ಮುವತ್ತೈದು ಸಾವಿರ ಮಂದಿ ಬಲಿಯಾಗುತ್ತಿದ್ದಾರೆ. ತಮಿಳುನಾಡು ಪ್ರಥಮ ಸ್ಥಾನದಲ್ಲಿದ್ದರೆ, ಕ್ರಮವಾಗಿ ಮಹಾರಾಷ್ಟ್ರ ಮತ್ತು ಪಶ್ಚಿಮ ಬಂಗಾಳ ಎರಡನೆಯ ಮತ್ತು ಮೂರನೆಯ ಸ್ಥಾನದಲ್ಲಿವೆ.

ಬಣ್ಣಬಣ್ಣದ ಜಾಹೀರಾತುಗಳಿಂದ ಸರ್ಕಾರದ ಸಾಧನೆಗಳನ್ನು ಪ್ರತಿಬಿಂಬಿಸಿಕೊಳ್ಳುತ್ತಿರುವ ಮೋದಿ ನೇತೃತ್ವದ ಸರ್ಕಾರಕ್ಕೆ ಈ ದೇಶದ ಬಡತನ, ಹಸಿವು, ಆರೋಗ್ಯ ಮತ್ತು ಶಿಕ್ಷಣರಂಗದ ಅವ್ಯವಸ್ಥೆ, ಹೆಚ್ಚುತ್ತಿರುವ ಕೋಮುಗಲಭೆ ಇವುಗಳ ಕುರಿತು ಪರಾಮರ್ಶಿಸುವ ವಿವೇಕವಾಗಲಿ, ತಾಳ್ಮೆಯಾಗಲಿ ಇದ್ದಂತಿಲ್ಲ. ೨೦೧೪ರ ಮೇ ತಿಂಗಳಿಂದ ೨೦೧೮ರ ಮೇವರೆಗೆ ಜಾಹೀರಾತಿಗಾಗಿ ಎನ್.ಡಿ.ಎ. ಸರ್ಕಾರ ೪೩೪೩ ಕೋಟಿ ರೂ.ಗಳನ್ನು ವ್ಯಯ ಮಾಡಿದೆ. ಆದರೆ, ಈ ಜಾಹೀರಾತು ಅಭಿಯಾನದಿಂದ ಭಾರತವೂ ಸ್ವಚ್ಛವಾಗಲಿಲ್ಲ, ಮಲಿನ ಗಂಗೆಯೂ ಪರಿಶುದ್ಧಳಾಗಲಿಲ್ಲ. ಪ್ರಧಾನಿಯವರು ಲೋಕಸಭೆಗೆ ಪ್ರತಿನಿಧಿಸುತ್ತಿರುವ ಕ್ಷೇತ್ರ ಎಂಬ ಕಾರಣಕ್ಕಾಗಿ ಗಂಗಾನದಿಯ ತಟದಲ್ಲಿ ಇರುವ ವಾರಣಾಸಿಯಲ್ಲಿ ಏಳು ಕಿ.ಮೀ.ನಷ್ಟು ಉದ್ದಕ್ಕೂ ಇರುವ ಐವತ್ತಕ್ಕೂ ಹೆಚ್ಚು ಘಾಟ್‌ಗಳನ್ನು (ಸ್ನಾನದ ಘಟ್ಟಗಳನ್ನು) ಪುನರ್‌ನಿರ್ಮಾಣ ಮಾಡಿ ನದಿಯ ಹೂಳನ್ನು ತೆಗೆಸಿದ್ದನ್ನು ಹೊರತುಪಡಿಸಿದರೆ, ಗಂಗಾನದಿಯ ಶುದ್ಧೀಕರಣದಲ್ಲಿ ಕಿಂಚಿತ್ತೂ ಸಾಧನೆಯಾಗಿಲ್ಲ. ಈವರೆಗೆ ಎರಡು ಜೀವಗಳು (೩೬ ವರ್ಷದ ಸ್ವಾಮಿ ನಿಗಮಾನಂದ ಮತ್ತು ೮೬ ವರ್ಷದ ಅಗರ್‌ವಾಲ್) ಶುದ್ಧೀಕರಣಕ್ಕೆ ಒತ್ತಾಯಿಸಿ ಆಮರಣಾಂತ ಉಪವಾಸ ಮಾಡಿ ಪ್ರಾಣತ್ಯಾಗ ಮಾಡಿದರೂ ಸಹ ಈ ಕುರಿತು ಪ್ರಧಾನಿಯವರಿಂದ ಒಂದೇ ಒಂದು ಪ್ರತಿಕ್ರಿಯೆ ವ್ಯಕ್ತವಾಗಿಲ್ಲ.

ತಾನು ಪ್ರಧಾನಿಯಾಗಿ ಪ್ರತಿನಿಧಿಸುತ್ತಿರುವ ಭಾರತವು ಬಹುಮುಖಿ ಸಂಸ್ಕೃತಿ ಹಾಗೂ ಹಲವು ಧರ್ಮ, ಜಾತಿಗಳಿಂದ ಹೆಣೆದಿರುವ ಬಹುತ್ವದ ರಾಷ್ಟ್ರ ಎಂಬ ಪರಿವೆಯೇ ಇಲ್ಲದ ಸಂಘಪರಿವಾರದ ನಾಯಕರು ಧರ್ಮದ ಹೆಸರಿನಲ್ಲಿ ದೇಶದ ಸಂವಿಧಾನವನ್ನು ಮತ್ತು ಸರ್ವೋಚ್ಚ ನ್ಯಾಯಾಲಯದ ತೀರ್ಪನ್ನು ಉಲ್ಲಂಘಿಸಿ ಅತಿರೇಕದಿಂದ ವರ್ತಿಸುತ್ತಿದ್ದಾರೆ. ಜಾಣ ಮೌನವನ್ನು ಪ್ರದರ್ಶಿಸುತ್ತಾ ಈವರೆಗೆ ತುಟಿ ಬಿಚ್ಚದ ಪ್ರಧಾನಿಯಿಂದ ಏನನ್ನು ತಾನೆ ನಿರೀಕ್ಷಿಸಲು ಸಾಧ್ಯ? ಎಂದೂ ಮುಸ್ಲಿಂ ಸಮುದಾಯದ ಪ್ರಾರ್ಥನಾ ಮಂದಿರಗಳಿಗೆ ಭೇಟಿ ನೀಡದ ಮೋದಿಯವರು ಚುನಾವಣೆ ಹತ್ತಿರವಾಗುತ್ತಿದ್ದಂತೆ ಇಂಡೋನೇಷಿಯಾದ ಮಸೀದಿ ಹಾಗೂ ಭಾರತದಲ್ಲಿ ಮಧ್ಯಪ್ರದೇಶ ಹಾಗೂ ಗುಜರಾತಿನ ಅಹಮದಾಬಾದಿನ ಮಸೀದಿಗೆ ಈ ವರ್ಷದ ಸೆಪ್ಟೆಂಬರ್ ತಿಂಗಳಿನಿಂದ ಭೇಟಿ ನೀಡಲು ಆರಂಭಿಸಿದ್ದಾರೆ. ಬಿ.ಜೆ.ಪಿ. ಸರ್ಕಾರದ ಆಳ್ವಿಕೆ ಇರುವ ಉತ್ತರಪ್ರದೇಶ ಹಾಗೂ ರಾಜಸ್ತಾನ್ ಮತ್ತು ಮಧ್ಯಪ್ರದೇಶಗಳ ರಾಜ್ಯದಲ್ಲಿ ಅತಿ ಹೆಚ್ಚು ಗುಂಪು ಹತ್ಯೆ, ಗೋರಕ್ಷಕರಿಂದ ಅಮಾಯಕ ಮುಸ್ಲಿಮರ ಕೊಲೆ, ಆಸ್ಪತ್ರೆಗಳಲ್ಲಿ ಶಿಶುಗಳ ಮರಣ, ಇನ್ನೂ ಅಸ್ತಿತ್ವದಲ್ಲಿರುವ ಮಲ ಬಾಚುವ ಪದ್ಧತಿ ಇವುಗಳು ಒಟ್ಟಾರೆ ಸಂಘಪರಿವಾರದ ನಾಯಕರ ನಿಷ್ಕ್ರಿಯತೆಗೆ ಸಾಕ್ಷಿ ಎಂಬಂತಿವೆ. ಯಾವ ವಿಷಯಗಳಲ್ಲಿಯೂ ಸಹ ಪಾರದರ್ಶಕತೆ ಮತ್ತು ಪ್ರಾಮಾಣಿಕತೆ ಎದ್ದುಕಾಣುವುದಿಲ್ಲ. ದೇಶದ ಅತಿ ದೊಡ್ಡ ರಾಜ್ಯವಾದ ಉತ್ತರ ಪ್ರದೇಶವನ್ನು ಒಬ್ಬ ಅಸಮರ್ಥ ಸನ್ಯಾಸಿಯ ಕೈಗೆ ಒಪ್ಪಿಸಿದ್ದರ ಫಲವಾಗಿ ಅಲ್ಲಿನ ಜನತೆ ನರಕದ ವಾಸಿಗಳಂತೆ ಬದುಕುತ್ತಿದ್ದಾರೆ. ಕಟ್ಟಡಗಳಿಗೆ, ಸರ್ಕಾರಿ ವಾಹನಗಳಿಗೆ ಕಾವಿ ಬಣ್ಣ ಬಳಿಯುವುದು ಮತ್ತು ನಗರಗಳ ಹೆಸರನ್ನು ಬದಲಾಯಿಸುವುದು ಸಾಧನೆ ಎಂದುಕೊಂಡಿರುವ ಈ ಸನ್ಯಾಸಿ ಮುಖ್ಯಮಂತ್ರಿಯ ಆಡಳಿತದಲ್ಲಿ ಈವರೆಗೆ ೫೮ ಎನ್‌ಕೌಂಟರ್ ಕೃತ್ಯಗಳು ಜರುಗಿವೆ. ಇವುಗಳಲ್ಲಿ ೩೫ ನಕಲಿ ಎನ್‌ಕೌಂಟರ್‌ಗಳೆಂದು ಮಾನವ ಹಕ್ಕುಗಳ ಆಯೋಗ ಘೋಷಿಸಿದೆ.

ಎನ್.ಡಿ.ಎ. ನೇತೃತ್ವದ ಸರ್ಕಾರದ ಆಳ್ವಿಕೆಯಲ್ಲಿ ದೇಶದ ಆರ್ಥಿಕತೆ ಅಪಾಯದ ಅಂಚನ್ನು ತಲುಪಿದೆ. ರಾಷ್ಟ್ರೀಕೃತ ಬ್ಯಾಂಕುಗಳು ಅನುತ್ಪಾದಕ ಆಸ್ತಿ, ಅಂದರೆ ವಸೂಲಿಯಾಗದ ಸಾಲದಿಂದ ದಿವಾಳಿಯಾಗುವ ಸ್ಥಿತಿ ತಲುಪಿವೆ. ಲಾಭದಾಯಕ ಸ್ಥಿತಿಯಲ್ಲಿ ಇರುವ ಸಾರ್ವಜನಿಕ ರಂಗದ ಸಂಸ್ಥೆಗಳ ಬಂಡವಾಳವನ್ನು ನಷ್ಟದಲ್ಲಿರುವ ಸಂಸ್ಥೆಗಳಿಗೆ ಹರಿಸುವುದರ ಮೂಲಕ ಕಳವಳಕಾರಿ ಪರಿಸ್ಥಿತಿಯನ್ನುಂಟುಮಾಡಿ ಅದನ್ನು ಮುಚ್ಚಿಹಾಕುವ ಹುನ್ನಾರ ನಡೆಯುತ್ತಿದೆ. ದೇಶ ಬಿಟ್ಟು ಪರಾರಿಯಾಗುತ್ತಿರುವ ಉದ್ಯಮಿಗಳ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ. ಇತ್ತೀಚೆಗೆ ದಿವಾಳಿ ಎದ್ದ ಐ.ಡಿ.ಐ.ಬಿ. ಬ್ಯಾಂಕ್ ಮತ್ತು ಐ.ಎಲ್. ಅಂಡ್ ಎಫ್.ಎಸ್. ಸಂಸ್ಥೆಗಳಿಗೆ (ಈ ಎರಡು ಸಂಸ್ಥೆಗಳು ಕೈಗಾರಿಕೆಗಳಿಗೆ ಮತ್ತು ರಸ್ತೆ, ಸೇತುವೆ ಮುಂತಾದ ಮೂಲಭೂತ ಸೌಕರ್ಯ ಒದಗಿಸುವ ಕಂಪನಿಗಳಿಗೆ ದೀರ್ಘಾವಧಿ ಸಾಲ ನೀಡುತ್ತಿದ್ದವು) ಎಲ್.ಐ.ಸಿ. ಸಂಸ್ಥೆಯಿಂದ ಸಾವಿರಾರು ಕೋಟಿ ರೂಪಾಯಿಗಳ ಬಂಡವಾಳವನ್ನು ವರ್ಗಾಯಿಸಲಾಗಿದೆ. ಜನಸಾಮಾನ್ಯರು ತಮ್ಮ ಜೀವ ವಿಮಾ ಪಾಲಿಸಿಗಾಗಿ ಕಟ್ಟಿದ ಪ್ರೀಮಿಯಂ ಹಣವನ್ನು ಎಲ್.ಐ.ಸಿ. ಕಂಪನಿಯು ಈವರೆಗೆ ಲಾಭದಾಯಕವಾಗಿರುವ ಕಂಪನಿಗಳಲ್ಲಿ ಷೇರು ಬಂಡವಾಳದ ರೂಪದಲ್ಲಿ ತೊಡಗಿಸುತ್ತಿತ್ತು. ಅದರಿಂದ ಬರುವ ಆದಾಯವನ್ನು ಬೋನಸ್ ರೂಪದಲ್ಲಿ ಪಾಲಿಸಿದಾರರಿಗೆ ವರ್ಗಾಯಿಸುತ್ತಿತ್ತು. ಇನ್ನು ಮುಂದೆ ಪಾಲಿಸಿದಾರರಿಗೆ ಬೋನಸ್ ದೊರಕುವುದಿರಲಿ, ವಿಮೆ ಮೇಲೆ ತೊಡಗಿಸಿರುವ ಪ್ರೀಮಿಯಂ ಹಣ ಬಂದರೆ ಸಾಕು ಎಂಬಂತಾಗಿದೆ. ಈ ಕುರಿತು ಪ್ರಧಾನಿಯಾಗಲಿ, ಅರ್ಥ ಖಾತೆ ಸಚಿವರಾಗಲಿ ಮಾತನಾಡುತ್ತಿಲ್ಲ. ಬದಲಾಗಿ, ಮುಂದಿನ ಚುನಾವಣೆಯವರೆಗೆ ದೇಶದ ಆರ್ಥಿಕತೆಗೆ ತೇಪೆ ಹಚ್ಚುವ ಕಾಯಕದಲ್ಲಿ ನಿರತರಾಗಿದ್ದಾರೆ.

ಫ್ರಾನ್ಸ್ ದೇಶದಿಂದ ಖರೀದಿಸುತ್ತಿರುವ ರಫೇಲ್ ಯುದ್ಧ ವಿಮಾನದ ಖರೀದಿ ಒಪ್ಪಂದ ಕುರಿತ ವಿವರವನ್ನು ರಾಷ್ಟ್ರೀಯ ಭದ್ರತಾ ವಿಷಯ ಎಂಬ ಹೆಸರಿನಲ್ಲಿ ಬಹಿರಂಗಗೊಳಿಸಲು ಕೇಂದ್ರ ಸರ್ಕಾರ ನಿರಾಕರಿಸಿದೆ. ಆದರೆ ಫ್ರಾನ್ಸ್‌ನ ಮಾಜಿ ಅಧ್ಯಕ್ಷರು ನೀಡಿದ ವಿವರಗಳನ್ನು ಅಲ್ಲಿನ ಮಾಧ್ಯಮಗಳು ಬಹಿರಂಗಗೊಳಿಸಿವೆ. ಪ್ರಧಾನಿ ನರೇಂದ್ರ ಮೋದಿಯವರು ಅನಿಲ್ ಅಂಬಾನಿಗೆ ನೆರವಾಗಲು ವಹಿಸಿದ ಪಾತ್ರವನ್ನು ವಿವರಿಸಲಾಗಿದೆ. ಅಘೋಷಿತ ಭ್ರಷ್ಟಾಚಾರ ಮತ್ತು ಖಾಸಗಿ ಉದ್ಯಮದಾರರಿಗೆ ನೆರವಾಗುತ್ತಿರುವ ಈ ಹುನ್ನಾರಗಳು ದೇಶಭಕ್ತರ ದಶಾವತಾರಗಳಂತೆ ಗೋಚರಿಸುತ್ತಿವೆ. ಈವರೆಗೆ ತನ್ನ ಶೈಕ್ಷಣಿಕ ಅರ್ಹತೆಯನ್ನು ಬಹಿರಂಗಗೊಳಿಸಲು ನಿರಾಕರಿಸುವ ಪ್ರಧಾನಿಯಿಂದ ಬೇರೆ ಏನನ್ನೂ ನಿರೀಕ್ಷಿಸಲಾಗದು. ಸಂಘಪರಿವಾರದ ವಿರುದ್ಧ ಒಗ್ಗಟ್ಟು ಪ್ರದರ್ಶಿಸಲಾಗದ ಕಾಂಗ್ರೆಸ್ ಹಾಗೂ ಪ್ರಾದೇಶಿಕ ಪಕ್ಷಗಳ ಸಣ್ಣತನ ಮತ್ತು ಸ್ವಾರ್ಥ ಇವುಗಳು ಪರೋಕ್ಷವಾಗಿ ಮೋದಿ ನೇತೃತ್ವದ ಸರ್ಕಾರದ ಸುಗಮ ಆಡಳಿತಕ್ಕೆ ನೆರವಾಗಿವೆ ಎಂದರೆ ತಪ್ಪಾಗಲಾರದು. ಇದೇ ಆಧಾರದ ಮೇಲೆ ಮುಂದಿನ ೨೦೧೯ರ ಚುನಾವಣೆಯಲ್ಲಿ ಮೋದಿಯವರು ಅಧಿಕಾರಕ್ಕೆ ಬಂದರೆ ಯಾರೂ ಆಶ್ಚರ್ಯ ಪಡಬೇಕಾಗಿಲ್ಲ.

**ಡಾ॥ ಎನ್. ಜಗದೀಶ್ ಕೊಪ್ಪ**

ನಂ. ೧೦೩, 'ಅಕ್ಷರ', ಆರೋಗ್ಯ ನಗರ ಬಡಾವಣೆ, ತೇಜಸ್ವಿ ನಗರ, ಧಾರವಾಡ – ೫೮೦ ೦೦೨




ಊರ ದಕ್ಷಿಣಕ್ಕೆ ರಸ್ತೆ. ಅದಕ್ಕಂಟಿಕೊಂಡಂತೆ ಹುಣಿಸೆಮರ. ಹೊಲೆಯರ ಹುಣಿಸೆಮರ ಅಂತಲೂ ಕರೆಯುವುದುಂಟು. ಊರಲ್ಲಿ ಮುಟ್ಟಾದವರು ಎರಡು ದಿನ ಖಾಯಂ ಆಗಿ ಆ ಹುಣಿಸೆಮರದ ಜಗಲಿ ಮೂಲೆಯಲ್ಲಿ ಇರಬೇಕಾಗಿತ್ತು. ಊರ ಮೇಲಕ್ಕೆ ಕತ್ತಲು ಬಿದ್ದು ಗವ್ವ್ ಎಂದರೂ ಅದೇ ಜಗಲಿಗೆ ಅಂಟಿಕೊಂಡು ರಾತ್ರಿ ಕಳೆಯಬೇಕಿತ್ತು. ಒಂದೊಮ್ಮೆ ಒಂಟಿಯಾಗಿಯೇ ಇಲ್ಲವೆ ಜೊತೆಯಾಗಿ ಹೆಂಗಸರು ಇರುವುದುಂಟು. ಒಟ್ಟಿನಲ್ಲಿ ಹೆಂಗಸರು ಧೈರ್ಯವಾಗಿ ಎಲ್ಲವನ್ನೂ ಎದುರಿಸಿ ಕಾಲ ಕಳೆಯುತ್ತಿದ್ದರು. ಊರಿನ ಮೂಲಕ ಗುರುನಾಥ್ ಬಸ್ ಬಂದು ನಿಲ್ಲಲು ಹಾಗೂ ಹೋಗಲು ಬಸ್‌ಸ್ಟಾಂಡ್ ಕೂಡ ಅದೇ ಆಗಿತ್ತು. ಉಳಿದಂತೆ ರುದ್ರಮುನಿಯನ ಕಾರುಬಾರು ಅಲ್ಲೇ. ಪ್ರತಿದಿನ ಅಲ್ಲೇ ಝುಂಡಾ ಊರುವನು. ರುದ್ರಮುನಿ






**ದ್ವಾರನಕುಂಟೆ ಪಾತಣ್ಣ**

ಬಂದ ಅಂದ್ರೆ ಸಾಕು ಅವ್ನ ಹಿಂದೆ ಇಬ್ಬರು ಮೂವರು ಜೊತೆಗೆ ಇರುತ್ತಿದ್ದರು. ಖಾಯಂ ಆಗಿ ಅವನ ಕಾರ್ಯಸ್ಥಾನ ಕೂಡ ಅದೇ ಆಗಿತ್ತು.

ರುದ್ರಮುನಿ ನಿಮಗೆ ಗೊತ್ತುಂಟಲ್ಲ. ಹುಟ್ಟುವಾಗಲೇ ಅಂಗವಿಕಲನಾಗಿದ್ದ. ಹುಟ್ಟುವಾಗ ಎಲ್ಲರಿಗೂ ಸಮನಾದ ಎರಡು ಕೈಗಳು ಇದ್ದರೆ ರುದ್ರನಿಗೆ ಬಲಗೈ ಉದ್ದ, ಎಡಗೈ ಮಾತ್ರ ಗೇಣುದ್ದ. ಗೇಣುದ್ದ ಇದ್ದರೂ ಸಣ್ಣ ಗಾತ್ರದ ಐದು ಬೆರಳಿರುವ ಅಂಗೈಯನ್ನು ಕೊಟ್ಟಿದ್ದ. ಅದನ್ನ ಮುಟ್ಟಿದರೆ ಮೆತ್ತಗೆ ಮೆತ್ತಗೆ ಸ್ಪಂಜು ಮುಟ್ಟಿದಂಗೆ ಇತ್ತು. ಮಕ್ಕಳು ಮರಿಗಳು ಆ ಕೈಯನ್ನ ಆಟದ ಆಟಿಕೆಯಂತೆ ಮುಟ್ಟಿ ಮುಟ್ಟಿ ಖುಷಿಪಡುಕೊಂತ, ತಮಾಷೆ ಮಾಡಿಕೊಂತ, ಚೆಲ್ಲಾಟವಾಡಿ ಮುದಗೊಂಡು 'ರುದ್ರ... ರುದ್ರ' ಅಂತಾ ಸಣ್ಣ ಕೈಯನ್ನ ಎಳೆದು ಎಳೆದು ಆಕಾಶಕ್ಕೆ ಏಣಿ ಹಾಕಿ ಕುಣಿದು ಕುಪ್ಪಳಿಸುವರು. ಚಿಕ್ಕ ವಯಸ್ಸಿನಲ್ಲಿ ರುದ್ರನನ್ನು ನೋಡಲು ಬಂದವರು ಧನಿಕರಾಗಿದ್ದರೆ ಅವನಿಗೆ ತಂತಮ್ಮ ಸ್ಥಾನಮಾನಕ್ಕೆ ತಕ್ಕಂತೆ ಇನಾಮು ಕೊಟ್ಟು ಹೋಗುತ್ತಿದ್ದರು. ಆಗೆಲ್ಲಾ ಅವನು ಹಿಗ್ಗಿ ಹಿರೇಕಾಯಿ ಆಗುತ್ತಿದ್ದ.

ಹೀಗೆ ಚಿಕ್ಕ ವಯಸ್ಸಿನಲ್ಲಿ ಮುದ್ದುಮುದ್ದಾಗಿ ಕಂಡು, ಬಂದವರನ್ನ ಮಾಂತ್ರಿಕ ಶಕ್ತಿಯಿಂದ ತನ್ನೆಡೆಗೆ ಸೆಳೆಯುವ ಗುಣವುಳ್ಳವನಾಗಿದ್ದ. ಸುತ್ತಮುತ್ತಲ ಊರಿನವರಿಗೆಲ್ಲ ಎಷ್ಟೊಂದು ಫೇಮಸ್ ಅಂದ್ರೆ ಅಷ್ಟು ಫೇಮಸ್ ಆಗಿದ್ದ. ಅವನ ತುಂಟಾಟ ಅವನಿಗೊಂದು ಮೆರಗು ತಂದಿತ್ತು.

ಇಂಥ ರುದ್ರ ಮೂಡಣದಿ ಸೂರ್ಯನ ಬೆಳಕು ಭುವಿಯ ಮೇಲೆ ಹರಿದಾಗ, ನಿರ್ಜನವಾಗಿದ್ದ ಹುಣಿಸೆಮರದ ಜಗಲಿ ತಂತಾನೆ ಪ್ರಖರತೆಯನ್ನ ಬೆಳಗುವುದು. ಆಗ ಅವನು ಅಲ್ಲಿರುತ್ತಿದ್ದನು. ಹೋಗುವವರು, ಬರುವವರು 'ಏನ್ಲಾ ರುದ್ರ...' ಅಂತಲೂ 'ಏನು ರುದ್ರಣ್ಣ...' ಅಂತಲೂ ಬಿಗುಮಾನ ಬಿಟ್ಟು ಗೌರವಪೂರ್ವಕವಾಗಿ ಅವನನ್ನು ಕರೆಯುವುದುಂಟು. ಜಗಲಿ ಮೇಲೆ ರುದ್ರ ಇದ್ದಾನೆಂದರೆ, ಆ ಜಗಲಿಗೊಂದು ಖದರ್. ಅದು ಎಷ್ಟರಮಟ್ಟಿಗೆ ಅಂದರೆ, ಹುಣಿಸೆಮರ ಅಂದರೆ ರುದ್ರಮುನಿ, ರುದ್ರಮುನಿ ಅಂದರೆ ಹುಣಿಸೆಮರ ಎಂಬಂತಾಗಿತ್ತು. ಅವನ ಮುಖ ಮಾತ್ರ ಕಡು ಕಪ್ಪಾದರೂ ತೇಜಸ್‌ನಿಂದ ಕೂಡಿದ ಆಕರ್ಷಕ ಕಾಯ ಮೋಡಿ ಮಾಡಿದ ಹಾಗೆನಿಸುತ್ತಿತ್ತು. ಅಲ್ಲಿ ಕುಂತು ಏನನ್ನೋ ಧೇನಿಸುತ್ತಾ ಕುಂತಂತೆ ಗೋಚರಿಸುತ್ತೆ. ಸುಕ್ಕುಗಟ್ಟಿದ ಮುಖ ಅವನ ಚಿಂತನೆಗೆ ಕಾರಣವಿದ್ದಿರಬಹುದು. ಹೀಗೆ ಕುಂತಾಗ, ಸಕ್ಕರದ ಕಾಟ, ಬೆಟ್ಟಪ್ಪನಹಳ್ಳಿಯ ಶಂಭು, ಪಟ್ನಾಯಕನಹಳ್ಳಿಯ ಉಗ್ರಪ್ಪ ಮುಂತಾದವರು ಬಂದು ಅವನನ್ನು ಸುತ್ತುವರೆಯುವರು. ಆಗ ಅವರನ್ನ ಒಂದು ಬಾರಿ ನೋಡುವನು.

'ಏನು ಬಂದಿದ್ದು.. ಕುತ್ಕೊಳಿ..' ಎಂದ ರುದ್ರ.

'ಅದೇ ರುದ್ರಣ್ಣ... ನಂದುಕೆ ರೇಷನ್ ಕಾರ್ಡ್ ಮಾಡ್ಬೇಕಾಗಿತ್ತು. ಅದ್ಕೆ ಬಂದೆ.. ವಸಿ ಜಲ್ದಿ ಮಾಡ್ಸಿಕೊಡು..' ಸಕ್ಕರದ ಕಾಟ ದುಂಬಾಲು ಬಿದ್ದ.

'ಇನ್ನೂ ಚಣ ಹೊತ್ತಾಗ್ಲಿಲ್ಲ... ಬಂದು ಜಲ್ದಿಯಂತೆ.. ಜಲ್ದಿ... ಹೇ ಇದೇನ್ ಕಡ್ಲೇಕಾಯಿ ಯಾಪಾರ ಅಂದ್ಕೊಂಡಿದ್ದೀಯೇನ್ ಮುಕ್ಕ.. ಬಂದ್ಬಿಟ್ಟ...' ರೇಗುವನು.

'ಹೇ ಅದ್ಕ್ ಯಾಕೆ ರೇಗ್ತಿಯಾ...?' ಗಡುಸು ಧ್ವನಿಯಲ್ಲಿ ಕೇಳಿದ.

'ಹೋಗ್ಲಿ, ಆಧಾರ್ ಕಾರ್ಡ್ ಏನಾದ್ರೂ ತಂದಿದ್ದೀಯಾ...?' ಎಂದು ಕೇಳಿದ.

'ಹೌದು ತಂದಿದ್ದೀನಿ' ಅಂತ ರೇಷನ್ ಕಾರ್ಡ್‌ಗೆ, ಅದಕ್ಕೆ ಬೇಕಾಗುವ ಎಲ್ಲಾ ಡಾಕ್ಯುಮೆಂಟ್‌ನ್ನ ಅವನ ಕೈಗೆ ನೀಡಿದ. ಅದನ್ನ ತಪಸೀಲ್ ಮಾಡಿ, ಪಕ್ಕದಲ್ಲೇ ಇದ್ದ ಪ್ಯಾಡ್ ತೆಗೆದುಕೊಂಡು ಎರಡು ಮೂರು ಖಾಲಿ ಹಾಳೆಗೆ ರುಜು ಮಾಡಿಸಿಕೊಂಡ. 'ಎತ್ತು ಫೀಜು' ಎಂದಾಗ ಅವನ ಮುಖವನ್ನೇ ದುರುಗುಟ್ಟಿಕೊಂಡು ನೋಡುತ್ತಾ ಪಂಚೆಯನ್ನ ಮೇಲೆತ್ತಿ, ನಿಕ್ಕರ್ ಜೇಬಿಗೆ ಕೈ ಇಳೆ ಬಿಟ್ಟ. ಹುತ್ತದಿಂದ ಹಾವೆಳೆದಂತೆ ಗರಿಗರಿ ನೂರರ ಮೂರು ನೋಟನ್ನ ಎರಡೆರಡು ಬಾರಿ ಎಣಿಸಿ 'ತಕ್ಕೊ, ಇಷ್ಟಾಗೆ ಮುಗೀಬೇಕು. ನನ್ನತ್ರಾವೆ ಇದ್ನ ಬಿಟ್ರೆ ಬಿಡಿಗಾಸೂ ಇಲ್ಲ' ಎಂದು ಖಡಕ್ಕಾಗಿ ಹೇಳಿದ.

'ನಿಮ್ಮಪ್ಪ ಕೊಡ್ತಾನೇಲ್ಲ್ ನನ್ ಫೀಜ್ನ.. ಇದೇನ್ ಅಮ್ಮಣ್ಣಿ ಛತ್ರ ಅಂತ ತಿಳ್ಕೊಂಡಿದ್ದೀಯೇನ್. ಹೋಗ್ಲಿ, ನಿನ್ನ ಕಾರ್ಡ್ ಆದ್ಮೇಲೆ ಇನ್ನೊಂದು ನೂರು ಬಿಚ್ಚು. ಆಯ್ತಾ...?' ಎನ್ನುತ್ತಿದ್ದಂತೆ ಇಂಗು ತಿಂದ ಮಂಗನಂತೆ ಮುಖವನ್ನ ಸಿಂಡ್ರಿಸಿಕ್ಕೊಂಡು ಮನಸ್ಸಿಲ್ಲದ ಮನಸ್ಸಿನಲ್ಲಿ ಮತ್ತೆ ಅವನನ್ನು ಗುರಾಯಿಸಿ 'ಆಯ್ತು ಕೊಡ್ತೀನಿ' ಅಂದ.

'ನಿಂದೇನ್ಲಾ ಶಂಭು? ಈಚಿಗ್ಗೆ ನಿಮ್ಮೂರಾಗೆ ತರ್ಲೆ ಜಾಸ್ತಿಯಂತೆ, ಹೌದೇನ್ಲ?' ಎಂದು ಕೆಣಕಿದ್ದ.

'ಹೌದು ರುದ್ರಣ್ಣ.... ಊರ್ ಕೆಟ್ಟ ಕೆರಹಿಡ್ಡಿದೆ...' ಎಂದು ಊರಿನ ಬಗ್ಗೆ ಕೆಂಡ ಕಾರಿದ.

ಮೊದ್ಲೇ ಊರಿನ ಬಗ್ಗೆ, ಅವನ ಸರೀಕರ ಬಗ್ಗೆ ಇನ್ನಿಲ್ಲದ ಎಡವಟ್ಟನ್ನ ಮಾಡಿಕೊಂಡಿದ್ದ. ತರ್ಲೆ ತಾಪತ್ರಯಕ್ಕೆ ಸಿಲುಕಿಕೊಂಡಿದ್ದ. ಸ್ವತಃ ಸೋದರ ಸಂಬಂಧಿಯಾದ ಕರೆಂಗ, ಸಣ್ಣಪುಟ್ಟದ್ದಕ್ಕೂ ಜಗಳ ಮಾಡಿಕೊಂಡು ಅವನ ವಿರುದ್ಧ ಕತ್ತಿ ಮಸೆದುಕೊಂಡು ತಿರುಗಿ ಬಿದ್ದಿದ್ದ. ಅವನ ಐಲಾಟವನ್ನ ತಡೆಯಲಾರದೆ ಈಗ ರುದ್ರನ ಹತ್ತಿರ ಬಂದು ಅವನ ವಿರುದ್ಧ ಮಸ್ಲತ್ತು ಮಾಡೋಕೆ ಸಂಚು ರೂಪಿಸಲು ಸಹಾಯ ಬೇಡಿ ಬಂದಿದ್ದಾನೆ.

'ರುದ್ರಣ್ಣ, ನಾ ರವಷ್ಟು ಇಕ್ಕಟ್ಟಿಗೆ ಸಿಕ್ಕಿಕೊಂಡಿದ್ದೀನಿ. ನೀನ್ ಮನಸ್ಸು ಮಾಡಿ ಬಗೆಹರಿಸು' ದೈನ್ಯತೆಯಿಂದ ಕೇಳಿದನು. 'ಅದೇನ್ಲ ಹೇಳು' ಎಂದಿದ್ದೇ ತಡ ಕರೆಂಗನಿಂದ ಆಗುತ್ತಿದ್ದ ತೊಂದ್ರೆ ತಾಪತ್ರಯನ್ನ ರಸವತ್ತಾಗಿ ವಿವರಿಸಿದ. ಕೊನೆಗೆ 'ನೋಡು ರುದ್ರಣ್ಣ, ದುಡ್ಡೆಷ್ಟಾದ್ರೂ ಸರಿನೇ, ಕೊಡ್ತೀನಿ. ಅವ್ನು ಮಾತ್ರ ನನ್ನ ತಂಟ್ಗೆ ಬರ್‌ಬಾರ್ದು. ಅಂಗೆ ಮಾಡು' ಎಂದು ನಿಕ್ಕರಿನ ಜೇಬಿಗೆ ಕೈಹಾಕಿದ. ಜೇಬನ್ನ ತಡಕಿದ. ಆಗ ಅವನಿಗೆ ಏನ್ ಅನ್ನಿಸ್ತೊ ಏನೋ ಜೇಬಿನಿಂದ 'ಸೊರ್' ಅಂತ ಹಾಗೆಯೇ ಹಿಂದಕ್ಕೆ ಕೈತೆಗೆದ. ಮೂಕನಾಗಿ ನಿಂತ. ಇದನ್ನೆಲ್ಲಾ ಗಮನಿಸಿದ ರುದ್ರ ಮನದಲ್ಲೇ ಮಂಡಿಗೆ ಕಡಿದ.

ಶಂಭು ಮಾತನ್ನ ನಿಲ್ಲಿಸಿದಾಗ ಅವನನ್ನೇ ರುದ್ರ ನೋಡುತ್ತಾನೆ. ಅವನ ಸ್ಥಿತಿ ಕಂಡು ಮನದೊಳಗೆ ಲೆಕ್ಕಾಚಾರ ಮಾಡುವನು. ಇವತ್ತು ನರಿ ಮುಖ ನೋಡಿರಬಹುದು ಎಂದೆನಿಸಿತು. ರುದ್ರನಿಗೆ ಇವನಿಂದ ಎಷ್ಟು ಪೀಕಬಹುದು ಎನ್ನುವ ಪ್ಲಾನ್ ತಲೆಯಲ್ಲಿ ಮಿಂಚಿನಂತೆ ತೂರಿ ಬಂದಿತು. ಆಗ ಶಂಭುವಿನ ಭುಜದ ಮೇಲೆ ಕೈಹಾಕಿ 'ಹೆದರಬೇಡ, ನಾನಿದ್ದೀನಿ' ಅಂದಿದ್ದಕ್ಕೆ 'ನೀನಿದ್ದೀಯಾಂತ ತಾನೆ ನಾ ನಿನ್ನ ಹತ್ತಿರ ಬಂದಿದ್ದು' ಅಂತ ಬಾಯಿ ತುಂಬ ಹೊಗಳಿದ. ರುದ್ರ ಕಾರ್ಯೋನ್ಮುಖನಾದ. ಚುರುಕುಗೊಂಡ. ದೆವ್ವ ಹಿಡಿದವನಂತೆ ಕುಕ್ಕರುಗಾಲಲ್ಲಿ ಕುಂತು ಪ್ಯಾಡನ್ನ ಎರಡು ತೊಡೆಗಳ ಮಧ್ಯೆ ಇಟ್ಟು ಹಾಳೆ ಮೇಲೆ ಬರೆಯತೊಡಗಿದ. ಅದೇನೆಂದು ಶಂಭು ಬಗ್ಗಿ ಬಗ್ಗಿ ನೋಡತೊಡಗಿದ. ಬರೆದ ಹಾಳೆಯ ಮೇಲೆ ಕೈಯನ್ನ ಮರೆ ಮಾಡಿ ಯಾರೂ ನೋಡದಂಗೆ ತಡೆದ. ಶಂಭುವಿಗೆ ಕೆಡುಕೆನಿಸಿದರೂ ಅದನ್ನ ತೋರಿಸಿಕೊಳ್ಳದೆ, ದೃಷ್ಟಿಯನ್ನ ಬೇರೆ ಕಡೆ ನೆಟ್ಟ.

'ನಾಳೆ ಪೊಲೀಸ್ ಸ್ಟೇಷನ್ ಹತ್ತಿರ ಬಾ' ಎಂದು ರುದ್ರ ಹೇಳಿದ್ದೇ ತಡ ಶಂಭುವಿಗೆ ನವಿಲು ಗರಿಗೆದರಿ ಕುಣಿದಂತೆ ಭಾಸವಾಗಿ, ತನ್ನ ಹಿಮ್ಮಡಿ ಮೇಲೆತ್ತಿ ಕೆಳಗಿಳಿಸಿ, ಶತಪಥ ಮಾಡಿದ. ಮುಖ ಅರಳಿ ಗೆದ್ದತ್ತಿನ ಬಾಲ ಅಲ್ಲಾಡಿಸಿದಂಗೆ ರಂಗಾದ. ಇವ ರಂಗಾದ್ದನ್ನ ರುದ್ರ ಗಮನಿಸಿದ. ಅವನಲ್ಲಾದ ಈ ಅನಿರೀಕ್ಷಿತ ಬದಲಾವಣೆ ಬೇರೇನೇ ತಂತ್ರ ಹಣಿದು 'ನಾಳೆ ಬೇಗ ಬಾ' ಅಂತ ಹೇಳಿದ್ದೇ ತಡ ಬಿರಬಿರನೇ ಶಂಭು ಅಲ್ಲಿಂದ ಕಾಲು ಕಿತ್ತ.

ಹುಣಿಸೆಮರದ ಜಗಲಿಯಿಂದ ಮೇಲೆದ್ದು ಬಟ್ಟೆಯನ್ನ ಕೊಡವಿಕೊಂಡು ಪ್ಯಾಡ್ ಹಿಡಿದು ಕೆಳಗಿಳಿದು ಹೊರಡಬೇಕೆನ್ನುವಷ್ಟರಲ್ಲಿ ಎದುರುಗಡೆ 'ನಮಸ್ಕಾರ ರುದ್ರಣ್ಣ' ಅಂದಾಗ ತಲೆ ಎತ್ತಿ ನೋಡಿದ. ರಾಮಜೋಯಿಸ ನಿಂತಿದ್ದ. ಈ ಊರಿನಲ್ಲಿ ಹೈಸ್ಕೂಲಿನ ಕನ್ನಡ ಮೇಸ್ಟ್ರು ಭಯ ಭಕ್ತಿಯಿಂದ ನಮಸ್ಕರಿಸಿದ್ದು ನೋಡಿ 'ಹಾರುವಯ್ಯ ಬಲು ಹುಷಾರಿ, ಒಳಗೊಳಗೇ ಕತ್ತಿ ಮಸೆಯುತ್ತಾ ಒಬ್ಬರ ಮೇಲೆ ಒಬ್ಬರನ್ನ ಮೇಲೆ ಎತ್ತಿ ಕಟ್ಟೋ ಕಲೆಯನ್ನ ಕರಗತ ಮಾಡ್ಕೊಂಡಿದ್ದಾನೆ. ಯಾವಾಗ್ಲೂ ಇವ್ನ ಬಗ್ಗೆ ಎಚ್ಚರಿಕೆ ಇರಬೇಕು' ಎಂದು ಮನಸ್ಸಿನಲ್ಲೇ ಅವನ ಬಗೆಗಿನ ಯೋಚನಾ ಲಹರಿ ಹರಿಸಿದ ರುದ್ರ.

ರುದ್ರ ಆ ಕಡೆಗೆ ಹೋಗುತ್ತಿದ್ದಂತೆ, ಇತ್ತ ರಾಮಜೋಯಿಸ, ಅವನ ಅಪರಂಪಾರ ಗೊತ್ತಿದ್ದರಿಂದ, ಕೆಣಕದೆ ನಯವಾಗಿ ಅವನಿಂದ ದೂರ ಉಳಿಯುತ್ತಿದ್ದ. ಅದೇ ಸ್ಕೂಲಿನಲ್ಲಿ ಪಾಂಡುರಂಗನ ದುರ್ಗತಿಗೆ ರುದ್ರನೇ ಕಾರಣಪುರುಷ ಅಂತ ಗೊತ್ತಾದ ಮೇಲೆ ರುದ್ರನನ್ನು ಕಂಡರೆ ಸಾಕು, ಹೆದರಿ ಇಲಿಗಳಾಗುತ್ತಿದ್ದರು. ಅವನು ಮಾಡಿದ್ದಾದರೂ ಏನು? ಒಂದು ದಿನ ಅವಸರವಸರವಾಗಿ ಸ್ಕೂಲಿಗೆ ಲೇಟಾಯ್ತು ಅಂತ ಬೇಗಬೇಗನೇ ಹೋಗುತ್ತಿದ್ದನಂತೆ. ಅದೇ ಸಮಯಕ್ಕೆ ಎದುರುಗಡೆಯಿಂದ ರುದ್ರ ಬಂದನಂತೆ. ಆಗ ಅವನನ್ನು ತಡೆದು ಐದು ನೂರು ರೂಪಾಯಿ ಕೊಡುವಂತೆ ಪೀಡಿಸಿದನಂತೆ. ಹಣ ಕೊಡಲು ನಿರಾಕರಿಸಿ 'ನಿಂಗೇಕೆ ಹಣ ಕೊಡಬೇಕು? ದುಡ್ಡು ತಿನ್ನಾದನ್ನ ಮೊದ್ಲು ಕಲಿ' ಅಂತೇಳಿ ಹೋದ್ನಂತೆ. ಆಗ ರುದ್ರನಿಗೆ ಕೋಪ ಬಂದು, 'ಪಾಂಡುರಂಗ ಹುಡುಗಿ ಮೇಲೆ ರೇಪ್ ಮಾಡಲು ಪ್ರಯತ್ನಿಸಿದ' ಅಂತ ಅವನ ವಿರುದ್ಧ ಮೇಲಧಿಕಾರಿಗಳಿಗೆ ಮೂಗರ್ಜಿ ಬರೆದು, ಇಲ್ಲಸಲ್ಲದ ಆರೋಪ ಹೊರಿಸಿ, ನೀರು, ನೆಲೆ ಇಲ್ಲದ ಕಡೆ ವರ್ಗ ಮಾಡಿಸಿದ್ದ.

ಒಂದು ವೇಳೆ ಮೇಲಧಿಕಾರಿ ವರ್ಗ ಮಾಡ್ಲಿಲ್ಲಾಂದ್ರೆ, ಅವರ ವಿರುದ್ಧವೇ ಮೂಗರ್ಜಿ ಬರೆದು, ಅಂಥ ಅಧಿಕಾರಿಗೆ ಹಿಂಸೆ ಕೊಡುತ್ತಿದ್ದ. ಇದು ಎಲ್ಲರಿಗೂ ಗೊತ್ತಿತ್ತು.

ರುದ್ರನ ಮಾತಿಗೆ ಯಾರಾದ್ರೂ ಬೆಲೆ ಕೊಡಲಿಲ್ಲ, ಇಲ್ಲವೇ ಅವನು ಕೇಳಿದಾಗ ಕೇಳಿದಷ್ಟು ಹಣ ಕೊಡಲಿಲ್ಲ ಎಂದಾಗ, ಅಂಥವರ ಮೇಲೆ ಸಿಟ್ಟು ಬಂದಾಗ ಅವರ ವಿರುದ್ಧ ಮೂಗರ್ಜಿ ಬರೆದ ಅಂದ್ರೆ ಮುಗೀತು. ಅವ್ನಿಗೆ ಕೆಟ್ಟಾಪತ್ತು ಬಂದಾಗೆ. ಅವನನ್ನು ಕೆಣಕೋದೂ ಒಂದೇ, ನಾಗರಹಾವಿನೊಂದಿಗೆ ಸರಸವಾಡೋದೂ ಒಂದೇ. ಅವನ ಕಣ್ಣು ಬಿತ್ತು ಅಂದ್ರೆ, ಕಣ್ಣು ಬಿದ್ದವನ ಪಾಲಿಗೆ ಶನಿ ವಕ್ರಿಸಿಕೊಂಡ ಹಾಗೆ.

ರುದ್ರ ಅಂದ್ರೆ ಸಾಮಾನ್ಯ ಮನುಷ್ಯನಲ್ಲ. 'ಒಕ್ಕೈ' ಇದ್ರೂ, ತನ್ನ ಚಾಲಾಕಿತನದ ಆಜಾನುಬಾಹುವನ್ನ ವಿಸ್ತರಿಸಿಕೊಂಡಿದ್ದ. ಅದು ಸುತ್ತಮುತ್ತಲ ಸ್ಕೂಲು-ಕಾಲೇಜಿನ ಮಾಸ್ತರ್‌ಗಳು, ಸರ್ಕಾರಿ ನೌಕರರು, ಗ್ರಾಮ ಪಂಚಾಯ್ತಿ, ತಾಲ್ಲೂಕು ಪಂಚಾಯ್ತಿ ನೌಕರರು ಇವನ ಕಣ್ಣಳತೆಗೆ ಸಿಗುವಂಥವರು. ಮೊದಲು ನೌಕರರ ವೀಕ್‌ನೆಸ್ ತಿಳಿದುಕೊಳ್ಳುತ್ತಿದ್ದ. ಅವರಾಗೇ ಅವರು ಬಂದಾಗ, ಅವರಿಗೆ ವರ್ಗಾವಣೆಯನ್ನ ಮಾಡಿಸಿಕೊಟ್ಟು ಅವರಿಂದ ಇಂತಿಷ್ಟು ಹಣ ಪಡೆದುಕೊಂಡು, ಮೇಲಿನಿಂದ ಕೆಳಗಿನವರೆಗೂ ಹಂಚಿ ಉಳಿದದ್ದನ್ನು ಜೇಬಿಗಿಳಿಸಿಕೊಳ್ಳುವನು. ಇದು ದಿನದ ಇಪ್ಪತ್ತುನಾಲ್ಕು ಗಂಟೆ ಸರಾಗವಾಗಿ ನಡೆಸಿಕೊಂಡು ಬಂದ ಕಾಯಕವಾಗಿತ್ತು. ಅವನ ಬಾಳಿಗದು ಬಳುವಳಿಯಾಗಿ ಬಂದಿತ್ತು.

ಅಂದು ರಾತ್ರಿ ಕೆ.ಇ.ಬಿ. ಲೈನ್‌ಮೆನ್ ತಿಮ್ಮಣ್ಣ ಹೊಟ್ಟೆ ತುಂಬ ಪರಮಾತ್ಮನನ್ನು ಹಾಕಿಕೊಂಡು ಬಂದಿದ್ದ. ಹಾದಿ ಬೀದಿ ರಂಪ ರಾಮಾಯಣ ಮಾಡತೊಡಗಿದ್ದ. ಅದು ಅವನ ತಪ್ಪಲ್ಲದಿದ್ದರೂ ಆ ರಾತ್ರಿ ಅವನನ್ನು ತುಂಬ ಆಡಿಸತೊಡಗಿತು. ತೂರಾಡುತ್ತಲೇ, ಕೋಲು ಊರುತ್ತಾ ನಡೆದಾಡತೊಡಗಿದ. ಅವನ ಕಣ್ಣುಗಳೋ ಸರಿಯಾಗಿ ದಾರಿ ಕಾಣದೆ, ಆಕಡೆ-ಈಕಡೆ ಬಿದ್ದುಬಿದ್ದು ಏಳುತ್ತಿದ್ದ. ಎದುರಿಗೆ ಲೈಟು ಕಂಬ ಕಂಡಾಗ ರೋಷ ಬಂತು. ಝಾಡಿಸಿ ಅದಕ್ಕೆ ಒದ್ದ, ಬಿದ್ದ. ಮತ್ತೆ ಎದ್ದ. ಕೋಲಲ್ಲಿ ಕಂಬಕ್ಕೆ ಮನ ಬಂದಂತೆ ಬಡಿದ. ಬಡಿದ ಶಬ್ದ ಕೇಳಿ 'ಹಾ ಹೋ' ಎಂದು ಚೀರುತ್ತಾ, ಕೆ.ಇ.ಬಿ. ಬಾಸನ್ನೋ, ರಾಜಕಾರಣಿಯನ್ನೋ, ರುದ್ರನನ್ನೋ ಮುಂದುಮಾಡಿ, 'ಥೂ.. ಸೂಳೆಮಗ್ನೆ... ನನ್ನ ಮೇಲೆ ಮೂಗರ್ಜಿ ಬರೆಯುತ್ತಿಯೇನ್ಲಾ? ನಾನೇನ್ಲ ಮಾಡ್ದೆ? ಎಲ್ಲಂದ್ರ ಅಲ್ಲಿ ಬೀದೀಲಿ ಬಿದ್ದಿರ್ತೀವಿ' ಎಂದು ಅತ್ತ. ನನ್ನಂತ ಗುಬ್ಬಿ ಮೇಲೆ ಬ್ರಹ್ಮಾಸ್ತ್ರ ಬಿಟ್ರೆ ನಿನ್ಗೇನು ಸಿಗುತ್ತೆ ಹೇಳು ಮತ್ತೆ! ಕಳ್ಳ ಕದೀಮರ ಮೇಲೆ ಬ್ರಹ್ಮಾಸ್ತ್ರ ಪ್ರಯೋಗ ಮಾಡಿದ್ರೆ ಏನಾದ್ರೂ ಸಿಗ್ತಿತ್ತು. ದೇಶಕ್ಕಾದ್ರೂ ಒಳ್ಳೆಯದಾಗ್ತಿತ್ತು. ಅದ್ಕೇ ನಮ್ಮ ದೇಶಕ್ಕೆ ಕಮುನಿಸಮು ಬರ್ಬೇಕು. ಒಂದಲ್ಲಾ ಒಂದು ದಿನ ನೀ ಬೀದಿಗೆ ಬಿದ್ದಾಗ ಗೊತ್ತಾಗುತ್ತೆ. ಹೇ ರುದ್ರ ನನ್ಗೂ, ಗೊತ್ತುಂಟು. ನೋಡ್ತೀರು!' ಎಂದು ಹೇಳುತ್ತಾ ಸುಧಾರಿಸಿಕೊಂಡ. ಮತ್ತೆ ಎದ್ದೇಳುತ್ತಾ ಕೋಲಿನಿಂದ ಲೈಟು ಕಂಬಕ್ಕೆ ಬಡಿದ. ಬಡಿದ ರಭಸಕ್ಕೆ ಆಕಾಶಕ್ಕೆ ಜಾಡಿಸಿದ. ಮತ್ತೆ ಎದ್ದ-ಬಿದ್ದ. ಇವನ ಚೀರಾಟ ಕಂಡು ದಾರಿಯಲ್ಲಿ ಹೋಗುತ್ತಿದ್ದ ರಂಗಪ್ಪ 'ಏನ್ಲಾ ತಿಮ್ಮಣ್ಣ?' ಅಂದಿದ್ದೇ ತಡ ಬಿಕ್ಕಿ ಬಿಕ್ಕಿ ಅಳಲು ಪ್ರಾರಂಭಿಸಿದ. ರುದ್ರನನ್ನು ಹೀನಾಯವಾಗಿ ಬೈದ. ಆಗ ಊರೊಳಗೆ ಗೂಳಿಡುವ ನಾಯಿಗಳ ಶಬ್ದಕ್ಕೆ ತಿಮ್ಮಣ್ಣನ ದನಿ ಅಡಗಿತು.

ರಾತ್ರಿ ತಿಮ್ಮಣ್ಣ ಲೈಟ್ ಕಂಬಕ್ಕೆ ಒದ್ದು ಬಿದ್ದುದರಿಂದಾಗಿ, ಅವನ ಕೈಕಾಲಿಗೆ ಪೆಟ್ಟಾಗಿತ್ತು. ಅವನ ನರಳಾಟವನ್ನು ನೋಡಿ ಶಿರಾದ ಸರ್ಕಾರಿ ಆಸ್ಪತ್ರೆಗೆ ದಾಖಲು ಮಾಡಿದರು. ಅದರಿಂದ ಮನೆ ಮಂದಿಗೆಲ್ಲಾ ಹೇಳತೀರದ ಸಂಕಟ. ಅಲ್ಲಿಗೆ ರುದ್ರ ತಿಮ್ಮಣ್ಣನನ್ನು ವಿಚಾರಿಸಲು ಬಂದಿದ್ದ. ರುದ್ರನನ್ನು ನೋಡಿ ಅವನ ಮೇಲೆ ರೇಗಾಡಿದರು. 'ನಿನ್ನಿಂದ್ಲೆ ನಮ್ಮ ತಿಮ್ಮಣ್ಣ ಆಸ್ಪತ್ರೆಗೆ ಸೇರೋ ಹಂಗಾಯ್ತು. ನೀನು ಮೂಗರ್ಜಿ ಬರೆದದ್ದು ನಮ್ಮ ಹೊಟ್ಟೆ ಮೇಲೆ ತಣ್ಣೀರ ಬಟ್ಟೆ ಕಾಣಂಗಾಯ್ತು?' ಎಂದು ಕೂಗಾಡಿದರು.

'ನೋಡು, ಮೇಲಿನ ಅಧಿಕಾರಿಗಳು ಅವ್ನಿಗೆ ನೋಟೀಸ್ ಕೊಟ್ಟು, 'ಕೆಲ್ಸಕ್ಕೆ ಬರ್ಬೇಡ, ಕೇಸಾಗಿದೆ. ಕೇಸು ಇತ್ಯರ್ಥ ಆದ್ಮೇಲೆ ಬಾ' ಎನ್ನುತ್ತ ನೋಟೀಸನ್ನ ಅವನಿಗೆ ತೋರಿಸಿದರು.

ರುದ್ರನಿಗೆ ಬಗಣೆಗೂಟ ಹೊಡೆದಂಗಾಯ್ತು. ಮುಂದೇನಾಗುತ್ತೋ ಎಂಬ ದಿಗಿಲಾಯಿತು. ಆದರೂ ಮನದಲ್ಲಿ ಒಂದು ವಿಚಿತ್ರ ದೆವ್ವ ಕುಣಿದಂತೆ ಕುಣಿದು, ಹೊಟ್ಟೆಯೊಳಗೆ ಕರುಳು ಕಿವಿಚಿದಂತಾಗಿ ಅಲ್ಲಿಂದ ಸರಸರನೆ ಹೊರಟ.

ರುದ್ರಮುನಿ ಕೂಡು ಕುಟುಂಬದಲ್ಲಿ ಬೆಳೆದವ. ಒಟ್ಟು ಎಂಟು ಮಕ್ಕಳಲ್ಲಿ ರುದ್ರ ಏಳನೆಯವನು. ಚಿಕ್ಕಪ್ಪನ ಮಕ್ಕಳು ಆರು ಜನ ಬೇರೆ. ಮನೆ ದೊಡ್ಡದಿದ್ದರೂ, ಎರಡೇ ಎರಡು ರೂಂಗಳು. ಅದರ ತುಂಬ ದವಸ ಧಾನ್ಯ ತುಂಬಿರುತ್ತಿದ್ದರು. ಉಳಿದಂತೆ ಎಲ್ಲರೂ ವರಾಂಡದಲ್ಲಿ ಹಾಸಿದ ಚಾಪೆಯ ಮೇಲೆ ಒಬ್ಬರ ಪಕ್ಕ ಒಬ್ಬರು ಸಾಲಾಗಿ ಮಲಗುತ್ತಿದ್ದರು.

ರುದ್ರ ಚಿಕ್ಕವನಿದ್ದಾಗ ಮಲಗಿದ ಚಾಪೆಯ ಮೇಲೆಯೇ ನಿಕ್ಕರ್‌ನಲ್ಲಿ ಉಚ್ಚೆ ಉಯ್ದುಕೊಂಡು ಮೈಯೆಲ್ಲಾ ತೊಪ್ಪೆಯಾಗಿರುತ್ತಿತ್ತು. ಅದರ ವಾಸನೆ ಬಡಿದು ಮೂಗು ಮುಚ್ಚುವಂತಾಗಿ, ಎಲ್ಲರಿಂದಲೂ ಬೈಸಿಕೊಳ್ಳುತ್ತಿದ್ದ. ಮಾರ್ನಾಮಿ ಹಬ್ಬಕ್ಕೆ, ಉಗಾದಿ ಹಬ್ಬಕ್ಕೆಂದು ಎರಡು ಜೊತೆ ಬಟ್ಟೆ ಕೊಡಿಸಿದರೆ ಹೆಚ್ಚು. ಆ ಎರಡು ಜೊತೆ ಬಟ್ಟೆಯನ್ನು ವಾರಕ್ಕೋ, ತಿಂಗಳಿಗೋ ಚೌಳುಮಣ್ಣುಹಾಕಿ ಒಗೆಯುತ್ತಿದ್ದ. ಸೋಪ್ ಅನ್ನೋದು ಆಗ ಗಗನ ಕುಸುಮ.

ಆಗಿನ ಕಾಲಕ್ಕೆ ಊರಲ್ಲಿ ಪ್ರೈಮರಿ ಸ್ಕೂಲಿತ್ತು. ಹಂಗು–ಹಿಂಗು ಪ್ರೈಮರಿ ಸ್ಕೂಲ್ ಮುಗಿಸಿದ್ದ. ಮುಂದೆ ಮಿಡ್ಲ್‌ಸ್ಕೂಲ್ ಓದಲು ದೂರದ ಪಟ್ಟನಾಯಕನಹಳ್ಳಿಯ ಮಿಡ್ಲ್‌ಸ್ಕೂಲ್ ಹೋಗಬೇಕಾಗಿತ್ತು. ಓದಿಗೆ ಮನೆಯಲ್ಲಿ ಬೆಂಬಲ ಇಲ್ಲದೆ ಸುಮ್ಮನಿದ್ದ. ಅವ್ನ ತಾತ 'ವೂ.. ಓದಂತೆ, ಯಾಕ್ಲ ನಮ್ಗೆಲ್ಲಾ ಓದು? ಸುಮ್ನೆ ಕಾಪ್ರ–ಗೀಪ್ರ ಮಾಡ್ಕೊಂಡು ಮನೇಲಿ ಬಿದ್ದಿರು. ಹೊಟ್ಗೆ ಬಟ್ಗೆ ಏನ್ಲ ಕಮ್ಮಿ ನಮ್ಗೆ?' ಅಂಗ ಒಂದೇಟಿಗ ಕಚಕ್‌ನೇ ಬಾಳೆ ಕಂದು ಕತ್ತರಿಸಿದಂತೆ ಎರ್ಡು ತುಂಡಾಗಂಗೆ ಮಾತ್ನಾಡಿದ್ದ. ಅಲ್ಲಿಗೆ ಅವ್ನ ಓದು ಗಾಳಿಗೆ ಹಿಡ್ದ ಪಟದಂತಾಯಿತು.

ರುದ್ರ ಅಂದ್ರೆ ಮನೇಲಿ ಅವ್ನ ತಂಟೆಗೆ ಯಾರೂ ಹೋಗೋದಿಲ್ಲ. ಅದ್ಕೇ ಅವ್ನ ಒಕ್ಕೈಯೇ ಕಾರಣ. ಅವ್ನಿಂದ ಕೆಲ್ಸ ಮಾಡೋಕಾಗಲ್ಲ. ಅವ್ನೊಬ್ಬ ನಮ್ಜೊತ್ಗೆ ಇರ್ಲಿ ಅಂತ ಕನಿಕರ ತೋರುಸ್ತಿದ್ರು. ದಿನಾಲೂ ಮನೇಲಿ ಉಣ್ಣೋದು, ಊರೂರು ತಿರ್ಗೋದು. ಎಲ್ಲೆಲ್ಲಿ ಏನ್ ನಡೆತ್ತೈತೆ ಅಂತ ತಿಳ್ಕೊಂಡು, ಅವ್ನ ಮೇಲೆ ಇವ್ನ, ಇವ್ನ ಮೇಲೆ ಅವ್ನ ಎತ್ತಿಕಟ್ಟಿ ಮಸಲತ್ತು ಮಾಡಿ ಇಬ್ರಿಂದಲೂ ಫಾಯದೆ ಮಾಡ್ಕೊಂಡು ಏನೂ ಗೊತ್ತಿಲ್ಲದವನಂತೆ ನಟಿಸಿ, ಇಬ್ರ ಹೆಗಲ ಮೇಲೆ ಕೈಹಾಕಿ ತನ್ನ ಬೇಳೆಕಾಳು ಬೇಯಿಸಿಕೊಳ್ಳುವ ಆಸಾಮಿ ಆಗಿದ್ದ.

ಸುತ್ತಮುತ್ತಲ ಗ್ರಾಮಗಳಾದ ಸಕ್ಕರ, ನೇಜಿಂತೆ, ಕಾರೇಹಳ್ಳಿ, ಬೆಟ್ಟಪ್ಪನಹಳ್ಳಿ, ಚಂಗಾವರ ಹಾಗೂ ಪಟ್ಟನಾಯ್ಕನಹಳ್ಳಿಯಲ್ಲಿನ ಜನರಿಗೂ ರುದ್ರ ಎಂದರೆ ಗೊತ್ತುಂಟು. ಹಾಗಾಗಿ ಅಲ್ಲಿನ ಯಾವಾರ, ತಂಟೆ–ತಕರಾರು, ಕಳ್ಳತನ ಏನಾದ್ರೂ ಇದ್ರೆ ರುದ್ರನನ್ನು ಕರೆಸುತ್ತಿದ್ದರು. ಆಗ ಜಾಣತನದಿಂದ, ಯಾರಿಗೂ ನೋವಾಗದಂತೆ ಎಂಥ ಸಮಸ್ಯೆ ಇದ್ದರೂ ಬಗೆಹರಿಸುತ್ತಿದ್ದ. ಪೊಲೀಸ್ ಸ್ಟೇಷನ್ ಹತ್ತದಂತೆ ನೋಡಿಕೊಳ್ಳುತ್ತಿದ್ದ. ಎಲ್ಲರಿಂದಲೂ 'ಸೈ' ಅಂತ ಕರೆಸಿಕೊಳ್ಳುತ್ತಿದ್ದ. ಆದರೆ ಊರಿನ ಎರಡು ಬಣದಿಂದ ಯಾರಿಗೂ ಗೊತ್ತಾಗದ ಹಾಗೆ ರುದ್ರನಿಗೆ ಕಾಣಿಕೆ ಕೊಟ್ಟು ಕಳುಹಿಸುತ್ತಿದ್ದರು. ಅದು ನಿಗೂಢವಾಗೇ ಉಳಿದಿತ್ತು.

ಯಾವುದಾದರೂ ಹಳ್ಳಿಗೆ ಬಂದಾಗ, ಅಲ್ಲಿನ ದೊಡ್ಡ ಕುಳವಾಗಲೀ, ಪುಢಾರಿಗಳಾಗಲೀ ಕಂಡರೆ, 'ರುದ್ರಣ್ಣ ಈ ಸಾರಿ ಜಿಲ್ಲಾ ಪಂಚಾಯ್ತಿ ಎಲೆಕ್ಷನ್ಗೆ ನಿಂತ್ಕೊ...., ಹೇ... ನೀನ್ ಎಂಎಲ್ಎಗೆ ನಿಂತ್ಕೋ, ಗ್ಯಾರಂಟಿ ಈ ಸಾರಿ ಗೆಲ್ತೀಯಾ' ಎಂದು ಪುಸಲಾಯಿಸಿದಾಗ, ಅವ್ನ ಮೊಖ ರಬ್ಬರಿನಂತೆ ಹಿಗ್ಗುವುದು. ಅದಕ್ಕೆ ತುಂಟ ನಗೆ ಬೀರಿ 'ಆಗ್ಲಿ ಕಣಣ್ಣೋ' ಅಂತಾನೋ 'ನೋಡೋಣ' ಅಂತಾನೋ ಉತ್ತರಿಸುತ್ತಿದ್ದ.

ರುದ್ರ ಉಂಡಾಡಿಗುಂಡನಾಗಿ ಊರೂರು ತಿರ್ಗೋದು ನೋಡಿ ಮನೆಯವರಿಗೆ ವ್ಯಸನವಾಯ್ತು. ಹಿಂಗೇ ಬಿಟ್ರೆ ಮುಂದೆ ಎಂತದೋ ಮಾಡೋಕೋಗಿ, ಇನ್ನೆಂತದೋ ಆದೀತು ಅಂತ ಮನೆಮಂದಿಯೆಲ್ಲರಿಗೂ ಯೋಚ್ನೆ ಸುರ್ವಾಯ್ತು. ಅದು ಪಕ್ಕದೂರಿನ ಸಕ್ಕರದ ಕೀಳುಜಾತಿ ಕಾಟಮ್ಮಳ ಮಗ್ಳುನ ಜೊತೆ ತಿರುಗುತ್ತಿದ್ದಾನೆಂದು ಪುಕಾರು ಬೇರೆ. ಅವ್ನ ಸವ್ವಾಸ ಇನ್ನೆಲ್ಲಿಗೆ ಹೋಗತ್ತೋ ಅನ್ನೋ ಚಿಂತೆ ಕಾಡಿತು. ಇದ್ರಿಂದ ಮನೆತನದ ಮರ್ಯಾದೆ ಹೋಗುತ್ತೆ ಅಂತ ಚಿಂತಿಸಿದರು. ಅವ್ನಿಗೊಂದು ಹೆಣ್ಣು ತಂದು ಗಂಟಾಕಿ ಮೂಗುದಾರ ಹಾಕಿದ್ರೆ ಸರಿಯಾದೀತೆಂದು ಬಗೆದರು. ಆಗ ತಮ್ಮ ಎಲ್ಲಾ ಸಂಬಂಧಿಕರೆಲ್ಲರನ್ನೂ ಬಿಡದೆ ಹೆಣ್ಣಿಗಾಗಿ ಹುಡುಕಾಡಿದರು. 'ಇವನೊಬ್ಬ ಬೇಜವಾಬ್ದಾರಿ ಮನುಷ್ಯ. ಒಕ್ಕೈ ಬೇರೆ ಇವನೆಲ್ಲಿ ದುಡ್ದು ಅನ್ನ ಹಾಕ್ತಾನೆ. ಅವ್ನಿಗೆ ಕಟ್ಟಿಕೊಂಡೋಳ್ ದುಡ್ದು ಹಾಕ್ಬೇಕಾಗುತ್ತೆ' ಅಂತ ಎಷ್ಟೋ ಹೆಣ್ಮಕ್ಳ ತಂದೆ ತಾಯಿಯಂದಿರು ಅವನಿಗೆ ಹೆಣ್ಣು ಕೊಡಲು ಹಿಂದು ಮುಂದು ನೋಡಿದರು. ಆದರೂ ಕೊನೆಗೊಮ್ಮೆ ಸಂಬಂಧಿಕರಲ್ಲೇ ಹೆಣ್ಣು ಕೊಡಲು ಒಪ್ಪಿದರು. ತಡ ಮಾಡದೆ ಒಂದು ಮುಹೂರ್ತ ನೋಡಿ ಲಗ್ನ ಮಾಡಿ ಮುಗಿಸಿದರು.

ಲಗ್ನ ಆದ್ಮೇಲೆ ಜವಾಬ್ದಾರಿ ಬರುತ್ತೆ, ಮನುಷ್ಯನಾಗುತ್ತಾನೆ ಅಂತ ಎಲ್ಲರೂ ಅಂದುಕೊಂಡರು. ಆದ್ರೆ ಆದದ್ದೇ ಬೇರೆ. ಉಂಡಾಡಿತನ ಬಿಡಲಿಲ್ಲ. ಅವ್ನಿಗೆ ಬುದ್ಧಿ ಹೇಳೋರು ಊರಲ್ಲಿ ಜಾಸ್ತಿಯಾದ್ರು. ಅವ್ರ ಕೊಂಕು ಮಾತು, ಅವ್ರ ಕೊಳಕು ಮಾತನ್ನ ಕೇಳಿ ಕೇಳಿ ರೋಸಿಹೋದ. ದುಡಿಯಲು ಆರಂಭಿಸಿದ. ಆರಂಭ ಅವನಿಗೆ ಕೈಹತ್ತಲಿಲ್ಲ. ಮತ್ತೆ ಯಾವ್ ಯಾವದೋ ಕೆಲ್ಸ ಮಾಡಲು ಮುಂದಾದ. ಅದ್ರಿಂದಲೂ ಕೈ ಸುಟ್ಟುಕೊಂಡ. ಕೊನೆಗೊಮ್ಮೆ ನಿರ್ಧಾರಕ್ಕೆ ಬಂದು ಎಲ್ಲವನ್ನೂ ಬಿಟ್ಟ. ಮೊದಮೊದಲು ಪಂಚಾಯ್ತಿ ಪ್ರೆಸಿಡೆಂಟ್ ಹಿಂದೆ, ತಾಲ್ಲೂಕ್ ಪ್ರೆಸಿಡೆಂಟ್ ಅವ್ರು ಎಲ್ಲಿಗೆ ಹೋಗ್ತಾರೆ ಅಲ್ಲಿಗೆ, ಅವ್ರ ಹಿಂದೆ ಅಲೆಮಾರಿ ತಿರುಗಿದಂಗೆ ತಿರುಗುತ್ತಿದ್ದ. ಅಲ್ಲೆಲ್ಲಾ ಅವ್ರು ಮಾತಾಡೋ ವೈಖರಿ, ಅವ್ರು ಹಾಕುವ ಪಟ್ಟುಗಳನ್ನ ನೋಡಿ ನೋಡಿ ಕಲಿತ್ತಿದ್ದ. ಅದರಿಂದ ಉತ್ತೇಜಿತನಾಗಿ ದಿನೇದಿನೇ ಸ್ವತಃ ತಾನೇ ಅದನ್ನ ಕರಗತ ಮಾಡಿಕೊಂಡ. ಅದ್ನ ಅವ್ರ ಇವ್ರ ಮೇಲೆ ಪ್ರಯೋಗಿಸುತ್ತಿದ್ದ. ಅದ್ಯಾವವೂ ವರ್ಕ್‌ಔಟ್ ಆಗಲಿಲ್ಲ. ಇದು ನಮ್ಮಂತೋರ್ಗೆ ಸೂಟ್ ಆಗಲ್ಲ ಅಂತ ಯಾವ ಪ್ರಯತ್ನ ಮಾಡದೆ ಸುಮ್ಮನಾದ.

ಕೆಲ ದಿನಗಳು ಕಳೆದ ಮೇಲೆ, ನಿಂತಲ್ಲಿ ನಿಲ್ಲಲಾರದೆ, ಕೂತಲ್ಲಿ ಕೂರಲಾರದೆ ಮೂರು ಹೊತ್ತೂ ಅಲ್ಲಿ–ಇಲ್ಲಿ ಅಂತ ತಿರುಗಿ–ತಿರುಗಿ, ಸೋತು ಸುಣ್ಣವಾಗಿ ದಿಕ್ಕೇ ತೋಚದಂತೆ ಕಂಗಾಲಾದ. ವಟವಟಗುಟ್ಟುವ ತಂದೆ ತಾಯಿಗಳ ಬೈಗುಳ ಅವನನ್ನು ಹತಾಶನನ್ನಾಗಿಸಿತು.

ಒಂದು ದಿನ ಇದ್ದಕ್ಕಿದ್ದ ಹಾಗೆ ತಹಶೀಲ್ದಾರ್ ಊರಿಗೆ ಬಂದರು. ಅಲ್ಲಿ ಜನರ ಗುಂಪು ಸೇರಿತು. ಬಡವರಿಗೆ ಸರ್ಕಾರಿ ಜಮೀನು ಕೊಡುವ ಬಗ್ಗೆ ವಿಚಾರಣೆ ನಡೆಸಲು ಬಂದಿದ್ದರು. ಅಲ್ಲಿಗೆ ಕಾಲೆಳೆದುಕೊಂಡು ಬಂದ ಮೋಟುಸಿದ್ದಪ್ಪ, ತಳವಾರ ಕೆಂಚ, ಮಾಚ, ಅವ್ರುದು ಒಂದೇ ವರಾತ. ನಮ್ಗೂ ರವಸ್ಟು ಜಮೀನ ಕೊಡ್ಸಿ ಸರ್ ಅಂತ ದುಂಬಾಲು ಬಿದ್ರು. ಆಗ 'ಒಂದು ಅಪ್ಲಿಕೇಷನ್ ಕೊಡ್ರಿ, ನೋಡುವ' ಅಂದ್ರು. 'ನಮ್ಗೆ ಬರೆಯೋಕೆ ಬರೋಲ್ಲ ಬುದ್ಧಿ' ಅಂದಾಗ, 'ನಿಮ್ಮೂರಲ್ಲಿ ಯಾರೂ ವಿದ್ಯಾವಂತ್ರು ಇಲ್ವಾ?' ಅಂದಾಗ ಅಲ್ಲೇ ಪಕ್ಕದಲ್ಲೇ ನಿಂತಿದ್ದ ರುದ್ರಮುನಿಯ ಕಡೆ ಕೈತೋರ್ಸಿದ್ರು. 'ನೋಡಪ್ಪಾ, ಇವ್ರಿಗೆಲ್ಲಾ ಅಪ್ಲಿಕೇಷನ್ ಬರ್ದು ಕೊಡು' ಅಂದಾಗ 'ಆಗ್ಲಿ' ಅಂತ ಒಪ್ಕೊಂಡು ಅವ್ರಿಗೆಲ್ಲಾ ಅಪ್ಲಿಕೇಷನ್ ಬರೆದುಕೊಟ್ಟ.

ಹಾಳೂರಿಗೆ ಇರುವವನೇ ಗೌಡ ಅಂದ್ಹಾಗೆ. ಊರಿಗೆಲ್ಲಾ ಅಷ್ಟಿಷ್ಟು ಓದಿ ಕಲ್ತಿರೋನು ಅಂದ್ರೆ ರುದ್ರಾನೇ, ಇಷ್ಟೂ ದಿನ ಅವ್ನ ಓದಿಗೆ ಬೆಲೆ ಇರ್ಲಿಲ್ಲ. ತಹಶೀಲ್ದಾರರು ಬಂದ ದೆಸೆಯಿಂದ ಅವ್ನ ಓದು ಬರಹಕ್ಕೆ ಒಂದು ಗಮ್ಮತ್ತು ಬಂತು.

ತಹಶೀಲ್ದಾರ್ ಎಲ್ಲಾ ವಿಚಾರಣೆ ಮುಗಿಸಿ ಜೀಪ್ ಹತ್ತಿದರು. ಧೂಳೆಬ್ಬಿಸಿಕೊಂಡು ಜೀಪ್ ಮುಂದೆ ಹೋಯಿತು. ಎದ್ದ ಧೂಳು ಎಲ್ಲರ ಮುಖದ ಮೇಲೆ ಚಿಮ್ಮಿದಾಗ ಮೊಖದ ಮೇಲೆ ಟವೆಲ್ಲನ್ನೋ, ಕೈಯನ್ನೋ ಅಡ್ಡ ಇಟ್ಟುಕೊಂಡರು. ಕ್ರಮೇಣ ಧೂಳು ಗಾಳಿಯೊಂದಿಗೆ ಬೆರೆತು ಲೀನವಾಯಿತು.

ಆಗಾಗ ಊರಿನವರು ರುದ್ರನ ಹತ್ತಿರ ಬಂದು, ಪರ ಊರಿನಲ್ಲಿರೋ ಸಂಬಂಧಿಕರಿಗೆ ಕಾರ್ಡ್ ಬರೆಸೋದು, ಸ್ಕೂಲಿನ ಅರ್ಜಿ ತುಂಬಿ ಕೊಡೋದು, ಪೊಲೀಸ್ ಸ್ಟೇಷನ್‌ಗೆ ಕಂಪ್ಲೇಂಟ್ ಬರೆಸೋದು, ಊರಿನ ಸಾಹುಕಾರರ ಲೇವಾದೇವಿಯ ಪತ್ರ–ಪಗಟೆ ಬರೆಸೋದು ಜಾಸ್ತಿಯಾಯಿತು.

ಇದು ದಿನದಿಂದ ದಿನಕ್ಕೆ, ಒಬ್ಬರಿಂದ ಒಬ್ಬರಿಗೆ ಹಬ್ಬಿತ್ತು. ರುದ್ರನಿಗೆ ಈಗ ಅದು ದಿನನಿತ್ಯದ ಕೆಲಸವಾಗತೊಡಗಿತು. ಕಾಗದ ಪತ್ರ ಬರೆಸಲು, ಅಪ್ಲಿಕೇಷನ್ ಬರೆಸಲು ಬಂದವರು ಅವನಿಗೆ ಕೆಲವರು ಹಣ ಕೊಟ್ಟರೆ, ಇನ್ನು ಕೆಲವರು ಹಾಗೇ ಹೋಗುವರು. ಹಣ ಕೊಡದವರ ಬಗ್ಗೆ ಮನದಲ್ಲೇ ಹಿಡಿಶಾಪ ಹಾಕುತ್ತಿದ್ದ. ಇದು ಹೀಗೆಯೇ ಯಥಾಪ್ರಕಾರ ಮುಂದುವರೆದುಕೊಂಡು ಬಂದಿತು.

ರುದ್ರ ಅಂದ್ರೆ, ಸುತ್ತಮುತ್ತ ಹಳ್ಳಿಗೂ ಹೆಸರುವಾಸಿಯಾದ. ಆ ಹೆಸರನ್ನೇ ಮುಂದು ಮಾಡಿ ಬಂಡವಾಳವನ್ನಾಗಿಸಿಕೊಂಡ. ಬಂಡವಾಳ ಹಾಕದೆ, ಬಂಡವಾಳ ಇಲ್ಲದೆ ದುಡಿಮೆ ಮಾಡಲು ಮುಂದಾದ. ಅಲ್ಲಿಂದ ಎದ್ದ, ಸೀದಾ ಅಂಗಡಿಗೆ ಬಂದ. ಅಂಗಡಿ ಮುಂಭಾಗದಲ್ಲಿ ಪ್ಲಾಸ್ಟಿಕ್, ಅಲ್ಯುಮಿನಿಯಂ ಆಟದ ಸಾಮಾನು, ಬಟ್ಟೆ–ಬರೆಯನ್ನ ಸಾಲಾಗಿ ತಂತಿಯ ಮೇಲೆ ನೇತಾಕಿದ್ದರು. ದೊಗಲೆ ಚೀಲ, ಒಂದು ಪ್ಯಾಡ್‌ಅನ್ನು ಕೊಂಡು ತಂದ. ಜೊತೆಗೆ ಬಿಳಿಹಾಳೆಯ ಒಂದಷ್ಟು ಬ್ಯಾಗಿನಲ್ಲಿ ಇರಿಸಿಕೊಂಡ.

ಆಗೊಮ್ಮೆ–ಈಗೊಮ್ಮೆ ಯಾರಿಗೂ ಗೊತ್ತಾಗದ ಹಾಗೆ ಮೂಗರ್ಜಿ ಬರೆಯುತ್ತಿದ್ದ. ಗುಟ್ಟು ರಟ್ಟಾದದ್ದು ಕ್ವಾಮಟಿಗರ ರತ್ನಯ್ಯನ ಮೇಲೆ ಮೂಗರ್ಜಿ ಬರೆದಾಗ. ಅದು ಅವನ ಜಮೀನಿಗೆ ಸಂಬಂಧಿಸಿದ್ದು. ಈಗ ರುದ್ರ ಎಲ್ಲರ ಬಾಯಲ್ಲೂ ಆಹಾರವಾದ.

ಆದರೆ ರುದ್ರ ಯಾವುದಕ್ಕೂ ಸೊಪ್ಪು ಹಾಕದೆ, ಅಡ್ಡ ಬಂದವರಿಗೆ ಮಣಿಸಿ ತನ್ನ ದಂಧೆಯನ್ನ ಮುಂದುವರೆಸಿದ. ಈಗೀಗ ರಾಜಾರೋಷವಾಗಿ ದಂಧೆಯಲ್ಲಿ ಇಳಿದ. ತನಗಾಗದವರ ವಿರುದ್ಧ ಮೂಗರ್ಜಿ ಬರೆಯುವುದಾಗಿ ಹೆದರಿಸಿದ. ಹಣವನ್ನ ಲೂಟ್ ಮಾಡಲು ಮುಂದಾದ. ಅದೇ ಅವ್ನ ಪ್ರಪಂಚವಾಯ್ತು. ಅವ್ನ ಕಂಡ್ರೆ ಸಾಮಾನ್ಯ ಜನರೂ ಹೆದರುತ್ತಿದ್ದರು. ಒಂದು ರೀತಿಯಲ್ಲಿ ಡಾನ್ ಆದ.

ಇದು ಅವನ ತಪ್ಪೋ–ನೆಪ್ಪೋ ಒಂದೂ ಗೊತ್ತಿಲ್ಲ. ಒಂದಂತೂ ನಿಜವಿರಬಹುದು. ಇದಕ್ಕೆಲ್ಲಾ ಕಾರಣ ಅವನ ಅಂಗವಿಕಲತನ. ಊರು ಮತ್ತು ಮನೆಯವರು ಕೊಟ್ಟ ಸದರ ಈ ಮಟ್ಟಕ್ಕೆ ತಂದು ನಿಲ್ಲಿಸಿದೆ. ಅದೇ ಅವ್ನ ದಂಧೆ, ಕಾಯಕ ಕೂಡ. ಅದ್ನ ಬಿಟ್ರೆ ಬೇರೇನೂ ಗೊತ್ತಿಲ್ಲ. ಗೊತ್ತಿದ್ರೂ ಅವ್ನಿಂದ ಮಾಡೋಕಾಗ್ತಿರಲಿಲ್ಲ. ಒಂದು ರೀತಿಯಲ್ಲಿ ಶುದ್ಧ ಸೋಮಾರಿ, ಉಂಡಾಡಿ ಗುಂಡ ಮುಂತಾದ ನಾಮಾಂಕಿತಗೊಂಡ ರುದ್ರ ಸದಾ ಮೌನಿಯಾಗಿ ಇದ್ದುದೇ ಹೆಚ್ಚು.

ಆಜುಬಾಜುಗೆಲ್ಲ, ವರ್ಷಕ್ಕೊಂದಾವರ್ತಿ ಎಲ್ಲ ಊರಿಗೂ ಬರುವ ಹಾಗೆಯೇ ಅಲ್ಲಿಗೂ ಎತ್ತಪ್ಪನ ಜಾತ್ರೆ ಬರುವುದು. ರುದ್ರನಿಗೆ ಎಲ್ಲಿಲ್ಲದ ಓಡಾಟ ಸುರುವಾಗುತ್ತೆ. ಊರಿನ ರಂಗನಾಥ ಗುಡಿಗೆ ಸುಣ್ಣಬಣ್ಣ ಬಳಿದು ಕಣ್ಣಿಗೆ ಹೊಡೆಯುವಂತೆ ಮಾಡುವರು. ಆಗ ಬೀಳುತ್ತಿದ್ದ ಎಳೆ ಬಿಸಿಲು ಅವುಗಳ ಮೇಲೆ ಬಿದ್ದು ಹೆಚ್ಚು ಕಾಂತಿ ಬೀರುತ್ತಿತ್ತು. ಹಜಾರ ತುಂಬ ಜನ ಅತ್ತಗೊಂದು ಕಡೆ, ಇತ್ತಗೊಂದು ಕಡೆ ಓಡಾಡುತ್ತ ಪಂಜು ರೆಡಿ ಮಾಡುವುದು, ಬಣ್ಣಬಣ್ಣದ ಕಾಗದ ಕತ್ತರಿಸಿ ಅಂಗಳ ಅಂದ ಮಾಡಲು ಸೇರಿ ಅದನ್ನ ಗುಡಿಯ ಎಡ ಬಲ ಭಾಗಕ್ಕೂ ಕಟ್ಟಿ ಅಂದ ಹೆಚ್ಚಿಸುತ್ತಿದ್ದರು.

ಎತ್ತಪ್ಪನ ಗುಡಿಗೂ ಇದೇ ಪ್ರಕಾರ ಮಾಡಿ ಅಲ್ಲಿ ಬಾಳೆಕಂದು ತೆಂಗಿನ ಗರಿಯನ್ನ ಬಗೆಬಗೆಯಾಗಿ ಹೆಣೆದು ಕಂಬಕ್ಕೆ ಕಟ್ಟಿ ತಳಿರುತೋರಣ ಕಟ್ಟಿ ಸಿಂಗರಿಸಿದ್ದರು. ನೋಡ ನೋಡುತ್ತಿದ್ದಂತೆ ಊರಿಗೆ ಊರೇ ಶೃಂಗಾರಗೊಂಡು ಮುದ ನೀಡುವಂತಾಗಿತ್ತು.

ಹಬ್ಬದಂದು ಬೆಳಗ್ಗೆ ಸೂರ್ಯ ಹುಟ್ಟುತ್ತಿದ್ದಂತೆ ಪರಸ್ಥಳದಿಂದ ನೆಂಟರಿಷ್ಟರು ಊರಿಗೆ ಬಸ್‌ನಿಂದ, ಬಂಡಿ ಹೂಡಿಕೊಂಡು ಒಬ್ಬೊಬ್ಬರಾಗಿ ಬರುವುದು ಏರತೊಡಗಿತು. ಊರು ತುಂಬಿ ತುಳುಕಾಡಿತು. ಬಂದವರು ಅವರವರ ಊರಲ್ಲಿ ಆದ ಹಿಂದಲ ಜಗಳನೆಲ್ಲ ಕೆದಕಿ ಹೆಂಗಾಯ್ತು ಏನ್ಕಥೆ ಎಂಬುದೇ ಅವರ ಬಾಯಿಗೆ ಮುಖ್ಯ ವಸ್ತುವಾಗಿತ್ತು. ಅವರ ಸಡಗರ ಹೆಚ್ಚಾಯ್ತು.

ಎತ್ತಪ್ಪ ಜಾತ್ರೆ ಊರಿನ ಗಡಿಭಾಗದಲ್ಲಿ ಸೇರುವುದುಂಟು. ಅಲ್ಲಿಗೆ ವೇಣುಕಲ್‌ಗುಡ್ಡದ ಎತ್ತಪ್ಪ ದೇವರು ಬರುವುದುಂಟು. ಎರಡೂ ದೇವರನ್ನೂ ಬೇರೆ ಬೇರೆಯಾಗಿ ಗದ್ದಿಗೆ ಹಾಕಿ ಕೂಡಿಸುವರು. ಗಂಗಾಸ್ನಾನ, ಪೂಜೆ ಪುನಸ್ಕಾರ ಮುಗಿದ ಮೇಲೆ ಅರೆ ಬಡಿಯುವರು. ಜನ ಕುಣಿದು ಕುಪ್ಪಳಿಸಿ, ಹರಕೆ ಒಪ್ಪಿಸಿ, ತೀರ್ಥ ಪ್ರಸಾದ ತೆಗೆದುಕೊಳ್ಳುವರು.

ಜಾತ್ರೆ ಎಂದ ಮೇಲೆ ಹೋಟೆಲ್‌ಗಳು, ಬೆಂಡು ಬತ್ತಾಸ ಮಾರುವವರು, ಹಣ್ಣು ಹೂ ಮಾರುವವರು ಹಿಂದಿನ ದಿನವೇ ಅಲ್ಲಿಗೆ ಬಂದು ಟೆಂಟ್ ಹಾಕಿಕೊಂಡು ವ್ಯಾಪಾರವನ್ನು ಬಿರುಸಿನಿಂದ ಮಾಡುವರು. ಗಿರಾಕಿಗಳು ಮುಗಿಬಿದ್ದುಕೊಳ್ಳುವರು. ಸಂಜೆಯಾಗುತ್ತಲೇ ದೇವರನ್ನ ಏಳಿಸಿಕೊಂಡು ಮೆರವಣಿಗೆ ತೆಗೆದು ಊರಿನ ಕಡೆ ಮುಖ ಮಾಡುವರು.

ಮಾರನೇ ದಿನ ಊರಲ್ಲಿ ಯಾವಾವ ಜಗಲಿ ನೋಡಿದರೂ ಜನವೇ ತುಂಬಿತ್ತು. ಅಂದು ಅವರವರ ಮನೆಯ ಮಟ್ಟಿಗಂತ ಅವರವರ ಸಕುತಿಗನುಸಾರ ಆಡುಮರಿಗಳನ್ನು ದೇವರ ಹೆಸರಿನಲ್ಲಿ ಬಿಟ್ಟಿದ್ದರು. ರುದ್ರ ದೇವರಿಗೆಂದೇ ಬಿಟ್ಟಿದ್ದ ಆಡನ್ನ ಮನೆಯ ಹೊರಗಡೆ ತಂದು ಕಂಬಕ್ಕೆ ಕಟ್ಟಿ ಅದರ ಮುಂದೆ ಹಸಿ ಹುಲ್ಲಿನ ಎಸೆಳನ್ನ ಹಾಕಿದನು. ಹಾಕಿದ್ದ ಹುಲ್ಲನ ಗಬಗಬನೇ ತಿಂದು, ತಲೆಯೆತ್ತಿ ಅತ್ತಿತ್ತ ಕಣ್ಣನ್ನ ಬಿಟ್ಟು ನೋಡಲಾರಂಭಿಸಿತು. ರುದ್ರ ಬಂದ. ಹಿಂದೆಯೇ ಮನೆ ಮಂದಿಯೆಲ್ಲಾ ಬಂದರು. ಕಂಬಕ್ಕೆ ಕಟ್ಟಿದ್ದ ಆಡನ್ನ ಬಿಚ್ಚಿ ಅದರ ಕೊರಳಿಗೆ ಹೂವನ ಬಿಗಿದು, ಅದಾದ ಮೇಲೆ ಬಿಡಿ ಹೂವ ನೆತ್ತಿನ ಮೇಲೆ ಇಟ್ಟು ತೀರ್ಥ ಮೈಮೇಲೆಲ್ಲ ಎರಚಿ ಕೈಮುಗಿದು 'ನಂದು ಏನಾರ ತಪ್ಪಿದ್ದರೆ ಹೊಟ್ಟೆ ಒಳಕ ಹಾಕಪ್ಪ' ಎಂದು ಜಪಿಸಿ, ಚೂರಿಯಿಂದ ಚಕ್ಕನೆ ಕತ್ತಿಗೆ ಒಂದೇಟು ಹಾಕಿ ಚುರುಚುರು ಅನಿಸಿಬಿಟ್ಟಾಗ ದೇಹ ಎರಡಾದವು. ಕತ್ತರಿಸಿ ಒಕ್ಕಡೆ ಬಿದ್ದ ತಲೆಯ ಬಾಯಿಗೆ ಒಬ್ಬ ನೀರು ಹಾಕಿದನು. ಮುಂದೆ ಊರಿಗೆ ಮಳೆ ಬೆಳೆ ಹೇಗಿದೆ, ಊರಿಗೆ ಸುಭಿಕ್ಷೆಯಾಗುತ್ತಾ, ಇಲ್ಲಾ ಕೇಡುಗಾಲ ಏನಾದ್ರೂ ಬರುತ್ತಾ ಅನ್ನೋದನ್ನ ತಿಳ್ಸು ಅಂತ ಕೇಳಿಕೊಂಡಾಗ ಒಂದೆರಡು ಸಲ ಬಾಯಿ ಪಕಪಕ ಅಂದು ಮುಚ್ಚಿತು. ಆ ಕಡೆ ಅದರ ದೇಹ ಒದ್ದಾಡುತ್ತಿತ್ತು. ತಲೆ ಮಾತ್ರ ಕಣ್ಣುಗಳ ಮೇಲಕ್ಕೆ ಅಗಲಿಸಿ ಆಗಲೇ ಸ್ತಬ್ಧವಾಗಿ ಬಿಟ್ಟಿತು. ಒದ್ದಾಡುವ ದೇಹದಿಂದ ರಕ್ತ ಚಲಚಲನೆ ಚಿಮ್ಮುತ್ತ ನೆಲಕ್ಕೆ ದೊಡದೊಡನೆ ಸುತ್ತಲೂ ಕೆಂಪಗಾವರಿಸಿತು. ನಾಯಿ ಓಡೋಡಿ ಬಂದು ನೆಲಕ್ಕೆ ಬಿದ್ದಿದ್ದ ರಕ್ತವನ್ನ ನೆಕ್ಕಲು ಮುಂದಾದಾಗ ಅಚ...ಅಚ ಬರಲನ್ನ ತೆಗೆದುಕೊಂಡು ಓಡಿಸಿದರು. ನಾಯಿ ಕುಯ್ ಗುಟ್ಟುತ್ತಾ ಸ್ವಲ್ಪ ದೂರ ಹೋಗಿ ನಿಂತು ನಾಲಿಗೆ ಕೆಳಗೆ ಮಾಡಿ ಜೊಲ್ಲು ಸುರಿಸುತ್ತಿತ್ತು.

ಅತ್ತಗೆ ರಂಗನಾಥ ಗುಡೀಲಿ ಹುಲಿ–ವ್ಯಾಸದ ಹುಲಿ ನಿಂಬೆಹಣ್ಣು ಬಾಯಲ್ಲಿ ಕಚ್ಚಿ ಕತ್ತಿ ಹಿಡಿದು ಕುಣಿತ ಆರಂಭ ಮಾಡಿದ್ದರು. ಅವರ ಕುಣಿತಕ್ಕೆ ತಮ್ಮದೇ ದನಿಗೆ ಹೆಜ್ಜೆ ಹಾಕುತ್ತ ಬಂದ ಅಂದರೆ ಜನವೇ ದೂರ ನಿಲ್ಲುತ್ತಿದ್ದರು. ಕುಣಿತ ಬೀದಿಗೆ ಬಂದಾಗ ಹೆಂಗ್ಸು ಮಕ್ಕಳು ಜಗಲಿ ಇಳೀದೇನೆ ಜೀವ ಹಿಡಕಂಡು ನೋಡುತ್ತಿದ್ದರು. ಸಣ್ಣ ಹೈಕಳಂತೂ ದೂರ ದೂರನೇ ಇದ್ದು ಕುಣಿತ ಹೋದತ್ತ ಹೋದವು. ಕುಣಿತವನ್ನ ನೋಡಲು ಊರಿನ ಜನರು ಮೇಲು ಕೀಳನ್ನದೆ ಬಂದು ಅಲ್ಲಿ ಸೇರಿದ್ದರು. ಎಷ್ಟೋ ಹೊತ್ತಿನ ತನಕ ಕುಣಿತ ಮುಂದುವರೆದಿತ್ತು.

ಇತ್ತಗ ಊರ ಮುಂದೆ ಪಂಚಾಯ್ತಿ ಆಫೀಸ್ ಮುಂದುಗಡೆ ಪೊಲೀಸ್ ವ್ಯಾನ್ ಬಂದು ನಿಂತಿತು. ವ್ಯಾನಿನಿಂದ ರೈಫಲ್ ಹಿಡಿದ ಪೊಲೀಸರು ದಬದಬನೆ ಟಪ... ಟಪ ಬೂಟಿನ ಶಬ್ದ ಮಾಡುತ್ತಾ ಕೆಳಗಿಳಿಯುತ್ತಿದ್ದರು. ತಂತಮ್ಮ ಕೆಲಸದಲ್ಲಿ ನಿರತರಾಗಿದ್ದ ಊರಿನ ಜನರಿಗೆ ಅನಿರೀಕ್ಷಿತವಾಗಿ ಪೊಲೀಸ್ ವ್ಯಾನ್ ಊರ ಮಧ್ಯೆ ಬಂದು ನಿಂತಿದ್ದು ಗಾಬರಿಯಿಂಟುಮಾಡಿತ್ತು. ಒಬ್ಬೊಬ್ಬರಾಗಿ ವ್ಯಾನ್ ಹತ್ತಿರ ಬಂದರು. ಹುಡುಗ–ಉಪಟೆಯನ್ನದೆ ಅಲ್ಲಿ ಸೇರಿದ್ದರು. ಅವರಿಗೆ ಕೌತುಕವಾಗಿ ಕಂಡರು ಪೊಲೀಸಿನವರು.

ಖಚಿತ ಮಾಹಿತಿ ಇದ್ದ ಕಾರಣ. ಪೊಲೀಸಿನವರು ನೇರವಾಗಿ ಊರೊಳಗಿನ ಲಕ್ಷ್ಮೀ ದೇವಸ್ಥಾನದ ಹತ್ತಿರ ಬಂದರು. ದೇವಸ್ಥಾನದ ಹಿಂಭಾಗದ ಮನೆಯೊಳಗೆ ಇಸ್ಪೀಟ್ ಆಟ ರಂಗುರಂಗಾಗಿ ಮುಂದುವರೆದಿತ್ತು. ಎಲ್ಲರೂ ರೌಂಡಾಗಿ ಕುಂತು ಇಸ್ಪೀಟ್ ಆಟ ಆಡುತ್ತಿದ್ದರು. ಅದರಲ್ಲೊಬ್ಬ ನೆಲದ ಮೇಲೆ ಜೋಡಿಸಿಟ್ಟ ಎಲೆಯೊಂದನ್ನ ಎಳೆದ. ಅದು ಜೋಕರ್ ಆಗಿತ್ತು. ಕಣ್ಣನ್ನ ಕುಣಿಸುತ್ತಲೇ ನಾಲಿಗೆಯನ್ನ ಹೊರಚಾಚಿ, ಏನೋ ಉಲ್ಲಾಸಭರಿತನಾಗಿ ಎಳೆದಿದ್ದ ಎಲೆಯನ್ನ ಕೈಯಲ್ಲಿದ್ದ ಎಲೆಯೊಂದಿಗೆ ಜೋಡಿಸಿ 'ನಂದು ಶೋ' ಎಂದು ಜೋರಾಗಿ ಕೂಗಿದ. ಅವನು ಕೂಗಿನ ರಭಸಕ್ಕೆ ಎಲ್ಲರೂ ಅವನ ಕಡೆ ನೋಡುತ್ತಾ ತಮ್ಮ ತಮ್ಮ ಕೈಯಲ್ಲಿದ್ದ ಎಲೆಗಳನ್ನ ಕೆಳಗಿಡುವುದಕ್ಕೂ, ಬಾಗಿಲ ಹತ್ತಿರ ಪೊಲೀಸರು ಬರುವುದಕ್ಕೂ ಸರಿಯಾಯ್ತು. ಇಸ್ಪೀಟ್ ಆಟ ಆಡುತ್ತಿದ್ದವರಿಗೆ ಗಲಿಬಿಲಿಯಾಗಿ ಎದ್ದು ಓಡಲು ಮುಂದಾದರು. ಪೊಲೀಸ್‌ರು ಅಡ್ಡ ಬಂದರು. ಅವರನ್ನ ಹಿಡಿದರು. ಕೈಗೆ ಕೊಳ ತೊಡಿಸಿದರು.

ಚಾಪೆಯ ಮೇಲಿದ್ದ ಇಸ್ಪೀಟ್ ಎಲೆಗಳನ್ನೂ, ಹಣವನ್ನೂ ಜಪ್ತಿ ಮಾಡಿದರು. ಪಂಚನಾಮೆ ದಾಖಲಿಸಿದರು. ಅವರುಗಳನ್ನ ದರದರನೇ ಎಳೆದುಕೊಂಡು ಬಂದು ವ್ಯಾನಿನಲ್ಲಿ ತುಂಬಿದರು.

ಹಿಂದೆಯೇ ಬಟ್ಟಿ ಸರಾಯಿ ಇಳಿಸುವುದರಲ್ಲಿ ಸುತ್ತಳ್ಳಿಗೂ ಫೇಮಸ್ ಆಗಿದ್ದ ಕೆಂಚಜ್ಜಿ ಉರುಫ್ ಸರಾಯಿ ಕೆಂಚಜ್ಜಿಯನ್ನ ಮಾಲು ಸಮೇತ ಇನ್ನಿಬ್ಬರು ಪೊಲೀಸರು ಹಿಡಿದುಕೊಂಡು ಬಂದರು. ಕೆಂಚಜ್ಜಿ ಎಷ್ಟು ಬೇಡಿಕೊಂಡರೂ ಅವಳ ಮಾತನ್ನ ಕಿವಿ ಮೇಲೆ ಹಾಕಿಕೊಳ್ಳದೆ ಅವಳ ರಟ್ಟೆಯನ್ನ ಹಿಡಿದು ವ್ಯಾನಿಗೆ ಹತ್ತಿಸಿದರು.

ಇಷ್ಟೆಲ್ಲಾ ಅವಾಂತರ ನಡೆಯುತ್ತಿದ್ದರೂ, ಊರಿನ ಯಾರೊಬ್ಬರೂ ತುಟಿಪಿಟಿಕ್ಕೆನ್ನದೆ ನೋಡುತ್ತಿದ್ದರೇ ವಿನಾ ಪೊಲೀಸರನ್ನ ತಡೆಯಲು ಯಾರಿಗೂ ದಮ್ ಇರಲಿಲ್ಲ. ಕೋತಿ ಕುಣಿತ ನೋಡಿದಂಗೆ ನೋಡುತ್ತಿದ್ದರು.

ಯಾವ ಮಾಯದಿಂದಲೋ ಏನೋ, ಇನ್ನಿಬ್ಬರು ಪೊಲೀಸರು ತುಮಕೂರಿನ ಡ್ರಾಮದಲ್ಲಿ ಪಾರ್ಟ್ ಮಾಡುತ್ತಿದ್ದ ಲಾವಣ್ಯನೊಂದಿಗೆ ಚೇರ್‌ಮೆನ್ ತೋಟದ ಮನೆಯಲ್ಲಿ ಅನೈತಿಕ ಚಟುವಟಿಕೆ ನಡೆಸುತ್ತಿದ್ದಾಗ ಸಿಕ್ಕಿಬಿದ್ದ ಇನ್ನಿಬ್ಬರು ಗಂಡಸರನ್ನ ಹಿಡಿದುಕೊಂಡು ಬರುತ್ತಿದ್ದರು.

ಇದು ದೊಡ್ಡ ಸುದ್ದಿಯಾಗಿ ಇಡೀ ಊರಿಗೆ ಹಬ್ಬಿತು. ಆಗ ಊರಿನ ಚೇರ್‌ಮನ್ ಶಾಂತಮೂರ್ತಿ ಬಲು ಶಾಂತವಾಗೇ ಬಂದರು. ಅವರು ಬಂದದ್ದು ನೋಡಿ ಜನರು ದೂರ ಸರಿದರು. ಶಾಂತಮೂರ್ತಿ ಬೀಡೀನ ಬಾಯಿಗೆ ಸಿಕ್ಕಿಸಿ ಕಡ್ಡಿ ಗೀರಿ ಬೀಡಿಯನ್ನ ಹತ್ತಿಸಿಕೊಂಡನು. ಒಂದೇ ಸಮನೆ ಬೀಡಿ ಎಳೆದು ಬಾಯಿಂದ ಮೂಗಿನಿಂದ ಹೊಗೆಯನ್ನು ಬಿಟ್ಟರು. ಅದು ರಿಂಗ್‌ರಿಂಗಾಗಿ ಗಾಳಿಯಲ್ಲಿ ಲೀನವಾಗಿ ಅದರ ಘಾಟು ಎಲ್ಲರ ಮೂಗಿಗೆ ಬಡಿಯಿತು.

ಪೊಲೀಸರನ್ನ 'ಯಾರ್ ಮೂಗರ್ಜಿ ಬರ್ದೋರು?' ಎಂದು ಕೇಳಿದರು ಚೇರ್‌ಮನ್. 'ಅದ್ನೆಲ್ಲಾ ಹೇಳೋಕಾಗಲ್ಲ' ಪೊಲೀಸರು ಅಂದರು. ಆಗ ಚೇರ್‌ಮನ್ ಕಣ್ಮುಂದೆ 'ರುದ್ರ' ಎಡತಾಕಿ ತಾಂಡವವಾಡಿದ. 'ಇವ್ನ ಇಂಗೇ ಬಿಟ್ರೆ ಊರ್ಗೆ ಉಳಿಗಾಲ ಇಲ್ಲ. ಇವ್ನಿಗೊಂದು ಗತಿ ಕಾಣ್ಸಬೇಕು' ಅಂತ ಮನದೊಳಗೇ ಅಂದುಕೊಂಡ ಚೇರ್‌ಮನ್ ಮನಸ್ಸಿನಲ್ಲಿ ಅಲ್ಲೋಲಕಲ್ಲೋಲವಾಯ್ತು. ಅದರ ಶಮನಕ್ಕೆಂಬಂತೆ ಮತ್ತೊಂದು ಬೀಡೀನ ಜೇಬಿನಿಂದ ತೆಗೆದು ಅದಕ್ಕೆ ಕಡ್ಡಿ ಗೀರಿದರು ಚೇರ್‌ಮನ್.

**ದ್ವಾರನಕುಂಟೆ ಪಾತಣ್ಣ**
೧೧೧೮, ಹೊಂಬೆಳಕು, ಹೆಚ್.ಎಂ.ಟಿ. ಲೇಔಟ್, ನಾಗಸಂದ್ರ ಅಂಚೆ, ಬೆಂಗಳೂರು – ೭೩

ಮೂಲ : ಅನಿಲ್ ಆಚಾರ್ಯ
ಅನುವಾದ : ಡಾ॥ ಬಿ. ಆರ್. ಮಂಜುನಾಥ್



## ಬಹುಮುಖಿ ಸಾಮಾಜಿಕ ಚಿಂತಕ

# ದೇವಿಪ್ರಸಾದ್‌ರ ಬದುಕು ಮತ್ತು ಬರೆಹ

ಲೋಕಾಯತ ತತ್ವಶಾಸ್ತ್ರದ ಪ್ರಖ್ಯಾತ ವ್ಯಾಖ್ಯಾನಕಾರರಾದ ದೇವಿಪ್ರಸಾದ್ ಚಟ್ಟೋಪಾಧ್ಯಾಯರು ಬಹುಮುಖಿ ಸಾಮಾಜಿಕ ಚಿಂತಕರೂ ಸಹ. ಬಹುಮುಖಿ ಎನ್ನಲು ಕಾರಣವೇನೆಂದರೆ ಅವರಿಗೆ ಅನೇಕಾನೇಕ ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವಂಥ ಪ್ರತಿಭೆ ಇತ್ತು. ಮಕ್ಕಳಲ್ಲಿ ವೈಜ್ಞಾನಿಕ ಚಿಂತನೆಯನ್ನು ಬೆಳೆಸುವಂಥ ಕತೆಗಳನ್ನು ಅವರು ಆರಂಭ ಕಾಲದಲ್ಲಿ ಬರೆದಿದ್ದರು. ಅವರು ಮತ್ತು ಅವರ ಸೋದರ ಕಾಮಾಕ್ಷಿ ಪ್ರಸಾದ್ ಚಟ್ಟೋಪಾಧ್ಯಾಯರು 'ರಂಗ ಮಶಲ್' ಎಂಬ ಪತ್ರಿಕೆಯನ್ನು ನಡೆಸುತ್ತಿದ್ದರು. ಅನಂತರ ಅವರು ನಾಗರಿಕತೆ, ಪ್ರಾಚೀನ ಇತಿಹಾಸ, ಪ್ರಜ್ಞೆ, ಆರೋಗ್ಯ, ವಿಜ್ಞಾನ ಮತ್ತು ಮನಃಶಾಸ್ತ್ರ ಹೀಗೆ ಅನೇಕ ವಿಷಯಗಳ ಬಗ್ಗೆ ಪುಸ್ತಕಗಳ ಸರಣಿಯನ್ನೇ ಬರೆದರು. ಅವರ ಎಲ್ಲ ಸೃಜನಶೀಲ ಬರೆವಣಿಗೆಗಳ ತಳದಲ್ಲಿ ಇದ್ದದ್ದು ಭಾರತೀಯ ತತ್ವಶಾಸ್ತ್ರದ ಕುರಿತಾದ ಆಳವಾದ ಜ್ಞಾನ. ಅವರು ಪದ್ಯಗಳನ್ನು ಬರೆದರು. ಅದನ್ನು ಖ್ಯಾತ ಸಾಹಿತಿಗಳಾದ ಬುದ್ಧದೇವ ಬೋಸ್‌ರವರು 'ಕಾಯಕ್ತಿ ನಾಯಕ್' ಎಂಬ ಹೆಸರಿನಲ್ಲಿ ಕವಿತಾ ಭವನದಿಂದ ಪ್ರಕಟಿಸಿದರು. ಅದರ ಬದುಕಿನ ಈ ಎಲ್ಲ ಮುಖಗಳನ್ನೂ, ಅವರ ಕಾಣಿಕೆಗಳನ್ನೂ ಕಂಡು ನಾವು ಬೆರಗಾಗುತ್ತೇವೆ ಮತ್ತು ಅವರನ್ನು ಬಹುಮುಖಿ ಸಾಮಾಜಿಕ ಚಿಂತಕ ಎಂದೇ ಗುರುತಿಸಬೇಕು ಅನಿಸುತ್ತದೆ.

ದೇವಿಪ್ರಸಾದರು ಬಂಗಾಳಿಯಲ್ಲೂ, ಇಂಗ್ಲಿಷಿನಲ್ಲೂ ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ಈ ಎರಡೂ ಭಾಷೆಗಳಲ್ಲಿ ಅವರು ಬರೆದಿರುವ ಪುಸ್ತಕಗಳು ಮತ್ತು ಲೇಖನಗಳ ಪಟ್ಟಿಯನ್ನು ಪ್ರಕಟಿಸಬೇಕು ಎಂಬ ಪ್ರಯತ್ನವೇನೋ ನಡೆಯಿತು. ಆದರೆ ಅವರ ನಿಧನಾನಂತರ ಇಷ್ಟು ವರ್ಷಗಳು ಕಳೆದರೂ ಆ ಕೆಲಸ ಪೂರ್ಣವಾಗಿಲ್ಲ.

ದೇವಿಪ್ರಸಾದರ ಒಂದು ಮಹತ್ಸಾಧನೆ ಎಂದರೆ "ಭಾರತೀಯ ಅಧ್ಯಯನಗಳು – ಭೂತ ಮತ್ತು ವರ್ತಮಾನ ಕಾಲದಲ್ಲಿ" (ಇಂಡಿಯನ್ ಸ್ಟಡೀಸ್ – ಪಾಸ್ಟ್ ಅಂಡ್ ಪ್ರೆಸೆಂಟ್) ಎಂಬ ಪತ್ರಿಕೆಯನ್ನು ಅವರು ಸಂಪಾದಿಸಿಕೊಟ್ಟದ್ದು. ವರ್ಷಕ್ಕೆ ನಾಲ್ಕು ಬಾರಿ ಪ್ರಕಟವಾಗುತ್ತಿದ್ದ ಅದನ್ನು ಅವರು ೧೯೫೯ರಿಂದ ೧೯೭೩ರವರೆಗೆ ನಡೆಸಿ ಕೊಟ್ಟರು. ಇಂಡಾಲಜಿ (ಭಾರತ ಶಾಸ್ತ್ರ )ಯ ಬಗ್ಗೆ ಸ್ವೋಪಜ್ಞ ಚಿಂತನೆಯನ್ನು ಹುಟ್ಟುಹಾಕಿದ ಹಾಗೂ ಅನೇಕ ಹಳೆಯ ಬರೆಹಗಳನ್ನು ಪುನರ್‌ಮುದ್ರಿಸಿದ ಆ ಪತ್ರಿಕೆ ಒಂದು ಗಮನಾರ್ಹ ಪಾಂಡಿತ್ಯಪೂರ್ಣ ನಿಯತಕಾಲಿಕವಾಗಿತ್ತು. ಸ್ವತಃ ಬಹಳ ದೊಡ್ಡ ವಿದ್ವಾಂಸರೂ, ಸಂಶೋಧಕರೂ ಆಗಿದ್ದ ಅವರಿಗೆ, ತಮ್ಮ ಎಳೆಯ ವಯಸ್ಸಿನಲ್ಲೇ ಒಂದು ವಿಷಯ ಸ್ಪಷ್ಟವಾಗಿ ಮನವರಿಕೆಯಾಗಿತ್ತು. ಅದೆಂದರೆ ತಾವು ಪ್ರಚುರಪಡಿಸಬೇಕೆಂದಿದ್ದ ಪರಿಕಲ್ಪನೆಗಳನ್ನು ಮುಂದೊಯ್ಯಲು ಅವರಿಗೆ ತರುಣ ವಿದ್ವಾಂಸರು ಮತ್ತು ಸಮರ್ಥ ಲೇಖಕರು ಅಗತ್ಯವಾಗಿದ್ದರು. ಮನು ಮತ್ತು ಶಂಕರಾಚಾರ್ಯರು ಅನೇಕ ಗ್ರಂಥಗಳಲ್ಲಿ ಭಾರತೀಯ ತತ್ವಶಾಸ್ತ್ರದ ಬಗ್ಗೆ ಅಡಕವಾಗಿದ್ದ ಮೂಢನಂಬಿಕೆಗಳು ಮತ್ತು ತಪ್ಪು ವ್ಯಾಖ್ಯಾನಗಳ ವಿರುದ್ಧ ಒಂದು ಚಿಂತಾನಾಧಾರೆಯನ್ನು ಸೃಷ್ಟಿಸಲು ಅಂಥ ತಂಡ ಅಗತ್ಯವಾಗಿತ್ತು.

ದೇವಿಪ್ರಸಾದ್‌ರು ೧೯೧೮ರ ಮೇ ಹದಿನೆಂಟರಂದು ದಕ್ಷಿಣ ಕಲ್ಕತ್ತಾದಲ್ಲಿ ಬಸಂತ್‌ಕುಮಾರ್ ಚಟ್ಟೋಪಾಧ್ಯಾಯ ಮತ್ತು ಗಾಯಿತ್ರಿದೇವಿಯವರ ಮಗನಾಗಿ ಜನಿಸಿದರು. ಅವರ ಅಣ್ಣ ಕಾಮಾಕ್ಷಿ ಪ್ರಸಾದ್‌ರು ಚಿಕ್ಕವಯಸ್ಸಿನಿಂದಲೂ ಅವರ ಒಡನಾಡಿ ಮತ್ತು ಸಹಪಾಠಿ. ೧೯೯೩ರ ಅಕ್ಟೋಬರ್‌ನಲ್ಲಿ ದೇವಿಪ್ರಸಾದ್‌ರು ಸಂದರ್ಶನವೊಂದರಲ್ಲಿ ತಮ್ಮ ಶಾಲಾದಿನಗಳ ಬಗ್ಗೆ ಹೇಳಿಕೊಂಡಿದ್ದಾರೆ. ಅದು ನಮ್ಮ ಸುದೈವ. ಆದರೆ ನೋವಿನ ಸಂಗತಿ ಎಂದರೆ ಅದೇ ವರ್ಷ ಅವರು ಕಾಲವಾದರು.

ದಕ್ಷಿಣ ಕಲ್ಕತ್ತಾದ ಭವಾನಿಪುರದಲ್ಲಿರುವ ಮಿತ್ರಾ ವಿದ್ಯಾಸಂಸ್ಥೆಯಲ್ಲಿ ಅವರು ತಮ್ಮ ಓದನ್ನು ಪ್ರಾರಂಭಿಸಿದರು. ಶ್ರೀಮಂತ ಬಂಗಾಳಿಗಳ ಮಕ್ಕಳು ಅವರ ಸಹಪಾಠಿಗಳಾಗಿದ್ದರು. ಶಾಲೆಯಲ್ಲಿ ಅಂಥವರಿಗೆ ಮಧ್ಯಮವರ್ಗದಿಂದ ಬಂದ ವಿದ್ಯಾರ್ಥಿಗಳಿಗೆ ಸಿಗುವುದಕ್ಕಿಂತ ಹೆಚ್ಚಿನ ಪ್ರಾಶಸ್ತ್ಯ ಸಿಗುತ್ತಿತ್ತು. ಮೇಲ್‌ಮಧ್ಯಮ ವರ್ಗದಿಂದ ಬಂದ ಕಾರಣದಿಂದಾಗಿ ದೇವಿಪ್ರಸಾದರಿಗೂ ಅವರ ಅಣ್ಣನಿಗೂ ಅಂಥ ಸ್ಥಾನಮಾನವೇ ದೊರಕುತ್ತಿತ್ತು. ಆದರೂ ಇಂಥ ಅಸಮಾನ ಧೋರಣೆಯನ್ನು ತೋರಿಸುತ್ತಿದ್ದ ಶಾಲೆಯನ್ನು ಕುಟ್ಟಿ ಪುಡಿ ಮಾಡಬೇಕು ಎನ್ನುವಂಥ ಸಿಟ್ಟು ಅವರಿಗೂ ಅವರ ಸ್ನೇಹಿತ ರಂಜಿತ್‌ರಿಗೂ ಉಂಟಾಗುತ್ತಿತ್ತಂತೆ. ಬಾಲ್ಯದಿಂದಲೂ ದೇವಿಪ್ರಸಾದರು ಅನ್ಯಾಯ ಮತ್ತು ಅಸಮಾನತೆಯ ವಿರುದ್ಧ ಸಂವೇದನಾಶೀಲರಾಗಿಯೇ ಇದ್ದರು.

ಅವರುಗಳು ತಮ್ಮ ಅಸ್ಮಿತೆಯನ್ನು, ದೃಷ್ಟಿಕೋನವನ್ನು ಕಂಡುಕೊಂಡದ್ದು ಯಾವಾಗ? ದೇವಿಪ್ರಸಾದರಿಗೆ ನೆನಪಿರುವಂತೆ ಅದು ಸುಮಾರು ೧೯೩೮–೩೯ ಇರಬೇಕು. ಆ ಹೊತ್ತಿಗೆ ಅವರು ಮಾರ್ಕ್ಸ್‌ವಾದಿ ವೈಚಾರಿಕತೆಯತ್ತ ಆಕರ್ಷಿಸಲ್ಪಟ್ಟರು. ಆಗ ಹೆಸರುವಾಸಿಯಾಗಿದ್ದ ಸಮರ್ ಸೇನ್ ಎಂಬ ಕವಿಗಳು ತಮ್ಮ ಮೊದಲನೆಯ ಕವನ ಸಂಕಲನವನ್ನು ಮುಝಫ್ಫರ್ ಅಹ್ಮದ್ ಅವರಿಗೆ ಸಮರ್ಪಿಸಿದ್ದರು. ಈ ತರುಣರ ಗುಂಪಿಗೆ ಮಾರ್ಗದರ್ಶಕರಂತಿದ್ದ, ಸ್ವತಃ ಇಂಗ್ಲಿಷ್ ಸಾಹಿತ್ಯದ ಅತ್ಯುತ್ತಮ ವಿದ್ಯಾರ್ಥಿಯಾಗಿದ್ದ ಸಮರ್ ಸೇನ್‌ರವರು ದೇವಿಪ್ರಸಾದ್, ಕಾಮಾಕ್ಷಿ ಪ್ರಸಾದ್, ಸುಭಾಸ್ ಮುಖ್ಯೋಪಾಧ್ಯಾಯ ಇವರೆಲ್ಲರನ್ನೂ ಆ ಮಾರ್ಕ್ಸಿಸ್ಟ್ ನಾಯಕರಿಗೆ ಪರಿಚಯಿಸಿದರು. ಇವರುಗಳಿಗೆ ಮಾರ್ಕ್ಸ್‌ವಾದಿ ಸಾಹಿತ್ಯದ ಬಗ್ಗೆ ಪರಿಚಯಿಸಿದವರು ಮಾರ್ಕ್ಸ್‌ವಾದಿ ವಿದ್ವಾಂಸರಾಗಿದ್ದ ಬಂಕಿಮ್ ಮುಖರ್ಜಿ ಮತ್ತು ರಾಧಾರಮಣ ಮಿತ್ರ. ದೇವಿಪ್ರಸಾದರು ಬಂದರು ಕಾರ್ಮಿಕರಿಂದ ನಿಷೇಧಿತ ರಾಜಕೀಯ ಪುಸ್ತಕಗಳನ್ನು ತರುತ್ತಿದ್ದರು. ಈ ಗತಿಯಲ್ಲೇ ಅವರಿಗೆ "ಮಾರ್ಕ್ಸಿಸಂ ಮತ್ತು ಎಂಪೈರಿಯೊ

ಕ್ರಿಟಿಸಿಸಮ್" ಪುಸ್ತಕ ಸಿಕ್ಕಿತು. ಅದರ ಮುಖಪುಟ ಹರಿದುಹೋಗಿದ್ದರಿಂದ ಅವರಿಗೆ ಲೇಖಕರ ಹೆಸರು ಗೊತ್ತಾಗಲಿಲ್ಲ! (ಲೇಖಕರು ಲೆನಿನ್ – ಅನುವಾದಕ)

ದೇವಿಪ್ರಸಾದರು ಮಾರ್ಕ್ಸ್‌ವಾದಿ ಎಂದೇ ಗುರುತಿಸಲ್ಪಟ್ಟರೂ ಸಹ, ಭಾರತೀಯ ಮತ್ತು ಪಾಶ್ಚಿಮಾತ್ಯ ತತ್ವಶಾಸ್ತ್ರದ ಬಗ್ಗೆ ಅವರಿಗಿದ್ದ ಅಸಾಧಾರಣ ಪಾಂಡಿತ್ಯವನ್ನು ಎಲ್ಲ ರೀತಿಯ ಜನರೂ ಗೌರವಿಸುತ್ತಿದ್ದರು. ಅವರ ಸ್ನೇಹಿತರೂ, ಮಾರ್ಗದರ್ಶಕರೂ ಮತ್ತು ಕಲ್ಕತ್ತಾ ವಿಶ್ವವಿದ್ಯಾಲಯದ ಅತ್ಯಂತ ಉಜ್ವಲ ವಿದ್ಯಾರ್ಥಿಯೂ ಆಗಿದ್ದ ಸಮರ್ ಸೇನ್ ಅಲ್ಲದೆ, ದೇವಿಪ್ರಸಾದರಿಗೆ ತತ್ವಶಾಸ್ತ್ರವನ್ನು ಕಲಿಸಿದ ಶಿಕ್ಷಕರ ಪಟ್ಟಿಯನ್ನು ನೋಡಿದರೆ ನಾವು ದಿಗ್ಭ್ರಮೆಗೊಳಗಾಗುತ್ತೇವೆ. ಡಾ॥ ಸುರೇನ್ ದಾಸ್‌ಗುಪ್ತಾ, ಡಾ॥ ಸರ್ವಪಲ್ಲಿ ರಾಧಾಕೃಷ್ಣನ್, ಹುಮಾಯೂನ್ ಕಬೀರ್, ಸುಕುಮಾರ್ ಸೇನ್ ಇವರೆಲ್ಲರಿಗೂ ದೇವಿಪ್ರಸಾದ್‌ರು ಅಚ್ಚುಮೆಚ್ಚಿನ ವಿದ್ಯಾರ್ಥಿಯಾಗಿದ್ದರು. ಅದೇ ರೀತಿ ಇನ್ನಷ್ಟು ಜನ ಪ್ರಖ್ಯಾತ ಶಿಕ್ಷಕರನ್ನು ಹೆಸರಿಸಬಹುದು; ಉದಾಹರಣೆ: ಪ್ರೊ॥ ಸುಶೋಭನ್ ಸರ್ಕಾರ್, ಸುರೇನ್ ಗೋಸ್ವಾಮಿ, ನಿಖಿಲ್ ಚಕ್ರವರ್ತಿ, ಇಂಥ ಶಿಕ್ಷಕರಿಂದ ಪಾಲನೆ – ಪೋಷಣೆಯನ್ನು ಸ್ವೀಕರಿಸಿದ ದೇವಿಪ್ರಸಾದರು, ಸ್ವತಃ ತಾವೂ ಸಹ ಒಬ್ಬ ಪ್ರಜ್ವಲಿಸುವ ತಾರೆಯಾಗಿ ಬೆಳಗಲಾರಂಭಿಸಿದರು.

**ಕಲೆ, ಸಂಗೀತ ಮತ್ತು ಕಾವ್ಯ**

ಭಾರತೀಯ ಕಲೆಯ ಬಗ್ಗೆ ದೇವಿಪ್ರಸಾದ್‌ರಿಗೆ ತೀವ್ರ ಆಕರ್ಷಣೆ ಇತ್ತು. ಜಾನಪದ ಶೈಲಿಯಲ್ಲಿ ಹೊಸರೀತಿಯ ಕಲಾಕೃತಿಗಳನ್ನು ರಚಿಸುತ್ತಿದ್ದ ಕಲಾವಿದ ಜೈಮಿನಿರಾಯ್‌ರನ್ನು ಭೇಟಿಯಾಗಲು ಅವರು ಹೋಗುತ್ತಿದ್ದರು. ಜೈಮಿನಿರಾಯ್ ಅವರನ್ನು ಕುರಿತು ದೇವಿಪ್ರಸಾದರು ಸಂಪಾದಿಸಿದ ಪುಸ್ತಕವೊಂದನ್ನು ಅವರ ಮರಣಾನಂತರ ಇತ್ತೀಚೆಗೆ ಪ್ರಕಟಿಸಲಾಗಿದೆ. ಅದರಲ್ಲಿ ದೇವಿಪ್ರಸಾದರು ಒಬ್ಬ ಭಾರತೀಯ ಕಲೆಯ ಅಪ್ರತಿಮ ಆರಾಧಕ ಎಂಬುದನ್ನು ಗುರುತಿಸುತ್ತಾ ಅವರಿಗೆ ಜೈಮಿನಿರಾಯ್ ಬರೆದ ಪತ್ರಗಳೂ ಇವೆ. ಆ ದಿನಗಳಲ್ಲೇ ದೇವಿಪ್ರಸಾದ್‌ರು ಮಹಾನ್ ಸಂಗೀತಗಾರ ಉಸ್ತಾದ್ ಅಲ್ಲಾಉದ್ದೀನ್ ಖಾನ್‌ರವರ ನಿಕಟ ಸಂಪರ್ಕಕ್ಕೆ ಬಂದಿದ್ದರು.

**ಕವಿಯಾಗಿ ದೇವಿಪ್ರಸಾದ್**

ನೀವು ಯಾವುದೇ ಮಧ್ಯಮವರ್ಗದ ಬಂಗಾಳಿಯನ್ನು "ನೀನೆಂದಾದರೂ ಕವಿತೆ ಬರೆದಿದ್ದೆಯೇನು" ಎಂದು ಕೇಳಿದರೆ ಖಂಡಿತವಾಗಿ, "ಹೌದು" ಎಂಬ ಉತ್ತರವೇ ಬರುತ್ತದೆ! ಪ್ರಖ್ಯಾತ ಬಂಗಾಳಿ ಕವಿ ಜೀವಾನಂದರು ಒಮ್ಮೆ ನುಡಿದಿದ್ದರು, "ಅವರೆಲ್ಲರೂ ಕವಿಗಳಲ್ಲದಿರಬಹುದು, ಆದರೆ ಕೆಲವರಾದರೂ ಆಗಿರುತ್ತಾರೆ" ಎಂದು! ನಾವು ಹಿಂದೆಯೇ ಹೇಳಿದ್ದಂತೆ ದೇವಿಪ್ರಸಾದ್‌ರು ಸಮರ್ ಸೇನ್‌ರ ಪ್ರಭಾವಕ್ಕೊಳಗಾಗಿದ್ದವರು. ಹೀಗಾಗಿ ಅವರೂ ಪದ್ಯಗಳನ್ನು ಬರೆಯಲಾರಂಭಿಸಿದರು.

'ಕಾಯಕ್ತಿ ನಾಯಕ್' (ಕೆಲವು ಧೀರರು) ಎಂಬ ಅವರ ಕವನ ಸಂಕಲನವನ್ನು ಬುದ್ಧದೇವ್ ಬಸುರವರ ಕವಿತಾ ಭವನ ಪ್ರಕಟಿಸಿತ್ತು. ಅದು ಪ್ರಕಟಿತವಾದ ಪುಸ್ತಕ ಸರಣಿಯ ಹೆಸರು 'ಒಂದು ಪೈಸೆಗೆ ಕೊಳ್ಳಿ', ವಾಡಿಕೆಯಂತೆ ಅದು ಒಂದು ಸಂಸ್ಕೃತದ ಸೂಕ್ತಿಯೊಂದಿಗೆ ಸಮರ್ ಸೇನ್‌ರಿಗೆ ಸಮರ್ಪಿಸಲ್ಪಟ್ಟಿತ್ತು; "ಮನೊನ್ ವಜ್ರಸಮುಕ್ತಿ ಕಿರಣೆ ಸೂತ್ರಸ್ಯೇ ಬಸ್ತಿ ಮೆಗತಿಕ್" ಆ ಸಂಗ್ರಹದಲ್ಲಿನ ಅವರ ಕವಿತೆಗಳ ಮೇಲೆ ಸಮರ್ ಸೇನ್‌ರ ಪ್ರಭಾವ ಇತ್ತು. ಅವರು ಹೇಳುತ್ತಿದ್ದ ಉಪನಿಷತ್ತಿನ, ಟ್ಯಾಗೋರ್ ಮತ್ತು ಎಲಿಯಟ್ ಹಾಗೂ ಜನಪದೀಯ ಪಂಕ್ತಿಗಳು ಅವರಿಗೆ ಸ್ಫೂರ್ತಿಯಾಗಿತ್ತು. ಉದಾಹರಣೆ: "ಕತ ಚತುರಾನನ್/ ಮೊರಿ ಮೊರಿ ಜನ್ ತು / ನ ತುವಾ ಆದಿ ಅಬಾಸನ" ಅಥವಾ "ಹೀಗೆ ನಾನು ಇನ್ನೊಂದು ಜಗತ್ತಿಗೆ ಕಾಲಿರಿಸುತ್ತಿದ್ದೇನೆ", "ಸ ಏಷಃ ಪರಮೇಷ ಪ್ರೇಮ ರೂಪಹ" ಅಥವಾ "ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೆ" ಹೀಗೆ.




**ಕವಿತೆ ಬರೆಯುವುದನ್ನು ನಿಲ್ಲಿಸಿದ್ದು!**

ಆ ಒಂದು ಕವನಸಂಕಲನದ ಪ್ರಕಟಣೆಯ ನಂತರ ತಾವು ಏಕೆ ಕವನ ಬರೆಯುವುದನ್ನು ನಿಲ್ಲಿಸಿದರೆಂದು ಅವರೇ ಒಮ್ಮೆ ನನ್ನಲ್ಲಿ ಹೇಳಿಕೊಂಡಿದ್ದರು. ಸಂಕಲನ ಪ್ರಕಟವಾದ ನಂತರ ದೇವಿಪ್ರಸಾದರು ತಮ್ಮ ಮಾರ್ಗದರ್ಶಿಗಳಾದ ಸಮರ್ ಸೇನ್‌ರವರನ್ನು ಭೇಟಿಯಾಗಿ ತಮ್ಮ ಪುಸ್ತಕವನ್ನು ಅವರಿಗೆ ಅರ್ಪಿಸಿದರು. ಸಮರ್ ಸೇನ್‌ರು ತುಂಬ ಮಿತಭಾಷಿಗಳಂತೆ, ದೇವಿಪ್ರಸಾದರು ಪುಸ್ತಕ ಕೊಟ್ಟು "ಒಂದು ವಾರದ ನಂತರ ಮತ್ತೆ ಬರುತ್ತೇನೆ; ತಾವು ತಮ್ಮ ಅಭಿಪ್ರಾಯವನ್ನು ತಿಳಿಸಬೇಕು" ಎಂದು ಕೇಳಿಕೊಂಡರಂತೆ. ಸರಿ ಕವಿ ದೇವಿಪ್ರಸಾದ್‌ರು ಅದೇ ರೀತಿ ಅವರನ್ನು ಮತ್ತೆ ಭೇಟಿಯಾಗಿ ಅವರ ಅಮೂಲ್ಯ ಅಭಿಪ್ರಾಯ ಏನೆಂದು ಕೇಳಿದರಂತೆ, ಸಮರ್ ಸೇನ್‌ರು ಸ್ವಲ್ಪ ಹೊತ್ತು ಸುಮ್ಮನಿದ್ದು, ನಂತರ "ತತ್ವಶಾಸ್ತ್ರದ ಕುರಿತಾದ ನಿನ್ನ ಪ್ರಬಂಧಗಳು ತುಂಬ ಆಸಕ್ತಿದಾಯಕ" ಎಂದರಂತೆ. ಅಲ್ಲಿಗೆ ಕವಿಯಾಗಬೇಕೆಂಬ ದೇವಿಪ್ರಸಾದ್‌ರ ಹಂಬಲಕ್ಕೆ ಪೂರ್ಣವಿರಾಮ ಬಿತ್ತು.

**ಶಿಶು ಸಾಹಿತ್ಯದ ಲೇಖಕ – ದೇವಿಪ್ರಸಾದ್**

ದೇವಿಪ್ರಸಾದ್‌ರು ಸ್ವತಃ ಶಿಶು ಸಾಹಿತ್ಯದ ಲೇಖಕರಾಗಿದ್ದರು ಮಾತ್ರವಲ್ಲ, ತಮ್ಮ ದೊಡ್ಡ ಅಣ್ಣ ಕಾಮಾಕ್ಷಿ ಪ್ರಸಾದರ ಜೊತೆಗೂಡಿ 'ರಂಗ ಮಶಲ್' (ಬಣ್ಣದ ಪಂಜು) ಎಂಬ ಶಿಶು ಮಾಸಿಕ ಪತ್ರಿಕೆಯನ್ನು ನಡೆಸುತ್ತಿದ್ದರು. ಅದನ್ನು ೧೯೪೪ರಲ್ಲೇ ಖಗೇಂದ್ರನಾಥ ರಾಯ್ ಆರಂಭಿಸಿದ್ದರು. ಅದು ತನ್ನ ಚೆಲುವಿಕೆಯಲ್ಲೂ, ದೃಷ್ಟಿಕೋನದಲ್ಲೂ ಅಂದಿದ್ದ ಅಂಥ ಎಲ್ಲ ಪತ್ರಿಕೆಗಳನ್ನೂ ಹಿಂದಕ್ಕಿಟ್ಟಿತು. ಸರಿ, ಶಿಶು ಸಾಹಿತ್ಯ ಬರೆಯುತ್ತಿದ್ದ ಎಲ್ಲ ಮುಖ್ಯ ಬಂಗಾಳಿ ಬರೆಹಗಾರರೂ ಈ ಪತ್ರಿಕೆಗೇ ಬರೆಯಲಾರಂಭಿಸಿದರು. ದೇವಿಪ್ರಸಾದರು ೧೯೫೧ರಲ್ಲಿ 'ಯಂತ್ರಮಾನವ' ಮುಂತಾದ ಹೊಸ ವೈಜ್ಞಾನಿಕ ಆವಿಷ್ಕಾರಗಳ ಬಗ್ಗೆ ಬರೆಯಲಾರಂಭಿಸಿದರು. ಹಾಗೆಯೇ ಜನಪ್ರಿಯ ವಿಜ್ಞಾನದ ಬಗ್ಗೆ, ಆರೋಗ್ಯದ ಬಗ್ಗೆ – ವಿವಿಧ ರೀತಿಯ ಬ್ಯಾಕ್ಟೀರಿಯಾಗಳ ಬಗ್ಗೆ ಸಹ ಅವರು ಬರೆದರು. ೧೯೫೫ರಿಂದ ಅವರು ಬ್ರಹ್ಮಾಂಡದ ಪರಿಶೋಧನೆಯ ಬಗ್ಗೆ, ಪ್ಲಾನಿಟೋರಿಯಂ, ಆಹಾರ, ವಿಟಮಿನ್ ಮುಂತಾದವುಗಳ ಕುರಿತು ಅನೇಕ ಆಸಕ್ತಿದಾಯಕ ಲೇಖನಗಳನ್ನು ಬರೆದರು.

ನೊಬೆಲ್ ಪ್ರಶಸ್ತಿ ವಿಜೇತ ಜೆ. ಬಿ. ಎಸ್. ಹಾಲ್ಡೇನ್‌ರವರು ಬರೆದ "ಸಾಧ್ಯತೆಯ ಜಗತ್ತು ಮತ್ತು ಇತರ ಪ್ರಬಂಧಗಳು" ಎಂಬ ಪುಸ್ತಕವನ್ನು ಓದಿದನಂತರ ದೇವಿಪ್ರಸಾದ್‌ರಿಗೆ ಮಕ್ಕಳಿಗೆ ವಿಜ್ಞಾನದ ಕುರಿತು, ತಾರ್ಕಿಕ ಚಿಂತನಾ ಕ್ರಮದ ಕುರಿತು ಅರಿವು ಮೂಡಿಸುವಂಥ ಇಂಥ ಪುಸ್ತಕಗಳನ್ನು ತಾವೂ ಬರೆಯಬೇಕೆಂದು ಅನ್ನಿಸಿತು. ಜೆ. ಬಿ. ಎಸ್. ಹಾಲ್ಡೇನ್‌ರು ೧೯೪೯ರಲ್ಲಿ "ಮಾನವರ ಅಸಮಾನತೆ", "ಜೀವ ಎಂದರೇನು" ಎಂಬ ಪುಸ್ತಕಗಳನ್ನು ಬರೆಯುತ್ತಿದ್ದು, ಅದೂ ಸಹ ದೇವಿಪ್ರಸಾದರಲ್ಲಿ ಸ್ಫೂರ್ತಿಯನ್ನು ಹುಟ್ಟಿಸಿತು. ದೇವಿಪ್ರಸಾದರು ಗಗನ್‌ಕುಸುಮ್ ಗಂಗೋಪಾಧ್ಯಾಯ ಎಂಬ ಹೆಸರಿನಲ್ಲಿ ಪತ್ತೇದಾರಿ ಕಾದಂಬರಿಗಳನ್ನು ಬರೆದರು! ಮಹಾನ್ ಬಂಗಾಳಿ ಸಾಹಿತಿಗಳಾಗಿದ್ದ ಸುಕುಮಾರ್ ರಾಯ್ ಹಾಗೂ ಶಿವರಾಮ ಚಕ್ರವರ್ತಿ ಅವರುಗಳ ಪ್ರಭಾವ ದೇವಿಪ್ರಸಾದರ ಮೇಲೆ ಎಷ್ಟು ದಟ್ಟವಾಗಿತ್ತು ಎಂಬುದನ್ನು ಈ ಸರಣಿಯ ಪುಸ್ತಕಗಳು ತೋರಿಸುತ್ತವೆ.

**ಅಣುಕೋಶದಿಂದ ಬೃಹತ್‌ಕೋಶ –ಜ್ಞಾನ ಮತ್ತು ವಿಜ್ಞಾನಗಳ ಕುರಿತಾದ ಪುಸ್ತಕ ಸರಣಿ**

ಶಂಭುನಾಥ ಪಂಡಿತ ರಸ್ತೆಯ ಸಂಕೇತ್ ಭವನದಿಂದ ೧೯೪೭ರ ನಂತರ 'ರಂಗ ಮಶಲ್' ಪತ್ರಿಕೆ ಪ್ರಕಟವಾಗಲಿಲ್ಲ. ದೇವಿಪ್ರಸಾದ್‌ರು




ಐದು ವರ್ಷ ಕಾಲ ಪ್ರಯತ್ನಿಸಿ ಲೇಖಕರನ್ನು ಸಂಘಟಿಸಿಕೊಂಡು ವಿಜ್ಞಾನ ಮತ್ತು ಸಾಮಾಜಿಕ ಮಾನವಶಾಸ್ತ್ರಗಳ ಕುರಿತಾದ ಪುಸ್ತಕಗಳನ್ನು ಬರೆಯಲು ಪ್ರೇರೇಪಿಸಿ ದಕ್ಷಿಣ ಕಲ್ಕತ್ತಾದ ಚಾರಿಂಗಿಯ ಸ್ವಾಕ್‌ಸ್ಪರ್‌ನಿಂದ ಪ್ರಕಟಿಸತೊಡಗಿದರು. ಅವರೇ ಸ್ವತಃ "ಮುಗಿಯದ ಕಥೆ" (ಎರಡು ಸಂಪುಟಗಳಲ್ಲಿ), "ದಶಕದ ನಂತರ ದಶಕ" (ನಾಲ್ಕು ಸಂಪುಟಗಳಲ್ಲಿ), "ಜ್ಞಾನದ ಕತೆ" (ಹತ್ತು ಸಂಪುಟಗಳಲ್ಲಿ) ಮುಂತಾದವು ಗಳನ್ನು ಬರೆದುಕೊಟ್ಟರು. ಮಾನವ ನಾಗರಿಕತೆಯಲ್ಲಿನ ಆವಿಷ್ಕಾರಗಳು ಹಾಗೂ ಜ್ಞಾನೋದಯಕ್ಕೆ ಗಮನಾರ್ಹ ಕೊಡುಗೆ ಕೊಟ್ಟ ಮಹನೀಯರ ಬಗ್ಗೆ ಬಂಗಾಳಿ ಓದುಗರಲ್ಲಿ ಅರಿವು ಮೂಡಿಸಲು ಅವರು ಅನೇಕ ಜೀವನಚರಿತ್ರೆಗಳನ್ನು ಪರಿಚಯಿಸಿದರು. ೧೯೫೫ರ ನಂತರ ಅವರು ತಂತ್ರಜ್ಞಾನದ ಎಲ್ಲ ಶಾಖೆಗಳ ಕುರಿತು ಸಹಲೇಖಕರ ನೆರವಿನೊಂದಿಗೆ ಅನೇಕ ಪುಸ್ತಕಗಳನ್ನು ಸಂಪಾದಿಸಿ, ಪ್ರಕಟಿಸಿದರು. ವಿದ್ಯುಚ್ಛಕ್ತಿ, ಮೋಟಾರ್ ತಂತ್ರಜ್ಞಾನ, ರೇಡಿಯೋ ಮೊದಲಾದ ವಿಷಯಗಳ ಬಗ್ಗೆ ಇದ್ದ ಪುಸ್ತಕಗಳವು. ಬದುಕಿನ ಈ ಕಾಲಘಟ್ಟದಲ್ಲಿ ಮಾಡಿದ ಇಂಥ ಕೆಲಸಗಳಿಂದಲೇ ಅವರಿಗೆ ಪ್ರೌಢವಯಸ್ಸಿನಲ್ಲಿ "ಪುರಾತನ ಭಾರತದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ"ದಂಥ ಮೇರುಕೃತಿಯನ್ನು ಸಂಪಾದಿಸಲು ಹೊಳಹುಗಳೂ ದೊರೆತವು. ಜ್ಞಾನೋದಯಕ್ಕೆ ಸಂಬಂಧಿಸಿದ ಇಂಥ ಕೆಲವು ಪುಸ್ತಕಗಳು ಹಳೆಯದಾದರೂ, ಇಂದೂ ಸಹ ಪುನರ್‌ಮುದ್ರಿಸಲ್ಪಡುತ್ತವೆ ಮತ್ತು ಎಳೆಯ ಶಾಲಾ ವಿದ್ಯಾರ್ಥಿಗಳ ನಡುವೆ ಜನಪ್ರಿಯವಾಗಿವೆ. ಅವರ ಪಾಲಿಗಂತೂ ಈ ಕೆಲಸ ಪ್ರಗತಿಶೀಲ ಸಾಮಾಜಿಕ ಚಿಂತಕನೊಬ್ಬ ಮಾಡಬೇಕಾದ ಸಾಮಾಜಿಕ ಬದ್ಧತೆಯ ಕರ್ತವ್ಯವಾಗಿತ್ತು. ಅಣುಕೋಶದಿಂದ ಬೃಹತ್‌ಕೋಶದತ್ತ ಅವರು ಪಯಣಿಸಿದ ರೀತಿ ಹೀಗಿತ್ತು.

ಈ ರೀತಿಯಲ್ಲಿ ಜ್ಞಾನದ ಪ್ರಸರಣಕ್ಕೆ ಗಮನಾರ್ಹವಾದ ಕಾಣಿಕೆ ನೀಡಿದ ಹಿಂದಿನ ಕಾಲದ ಇನ್ನೊಬ್ಬ ಸಂಪಾದಕರಾದ 'ರಹಸ್ಯ ಸಂದರ್ಭ' ಹಾಗೂ 'ವಿವಿಧಾರ್ಥ ಸಂಗ್ರಹ' ಕೃತಿಗಳನ್ನು ಹೊರತಂದ ರಾಜೇಂದ್ರ ಲಾಲ್ ಮಿತ್ರರನ್ನು ಮಾತ್ರ ದೇವಿಪ್ರಸಾದರೊಂದಿಗೆ ಹೋಲಿಸಬಹುದು. ಶತಮಾನಗಳ ಕಾಲ ಹರಡಲ್ಪಟ್ಟ ಅಜ್ಞಾನ ಮತ್ತು ತಪ್ಪು ತಿಳಿವಳಿಕೆಗಳ ಅಂಧಕಾರದ ನಡುವೆ ದೇವಿಪ್ರಸಾದ್‌ರು ಧರ್ಮಯೋಧನಂತಿದ್ದರು. ಭಾರತದ ಹಿಂದಿನ, ಇಂದಿನ ಚರಿತ್ರೆಯ ಆಳವನ್ನು ಶೋಧಿಸಬೇಕು ಎಂಬ ಆಕಾಂಕ್ಷೆ ಹೊಂದಿದ್ದ ಅವರು ಈ ಕಾರ್ಯಗಳ ಮೂಲಕ ಇನ್ನಷ್ಟು ಸಂಶೋಧನೆಗಳ ಹರಿಕಾರರಾದರು.

**ಭಾರತದ ಅಧ್ಯಯನ – ಭೂತ, ವರ್ತಮಾನ ಕಾಲಗಳಲ್ಲಿ**

ಇದು, ೧೯೫೯ರಿಂದ ೧೯೭೨ರವರೆಗೆ ಸಂಪಾದಕರಾಗಿದ್ದ ಅವರ ಮತ್ತೊಂದು ಮಹತ್ಸಾಧನೆ. 'ಭಾರತದ ಅಧ್ಯಯನ – ಭೂತ, ವರ್ತಮಾನ ಕಾಲಗಳಲ್ಲಿ' ಎಂಬ ಮೂರು ತಿಂಗಳಿಗೊಮ್ಮೆ ಬರುತ್ತಿದ್ದ ಇಂಗ್ಲಿಷ್ ಪತ್ರಿಕೆಯನ್ನು ಅವರು ಹದಿನಾಲ್ಕು ವರ್ಷಗಳ ಕಾಲ ಸಂಪಾದಿಸಿದರು. "ಭಾರತಶಾಸ್ತ್ರದ ತ್ರೈಮಾಸಿಕ" ಎಂದು ಅದನ್ನು ಕರೆಯಲಾಗಿತ್ತು. 'ಭಾರತಶಾಸ್ತ್ರ'ದ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳಿಗೆಲ್ಲಾ ಅದೊಂದು ಜ್ಞಾನದ ಮತ್ತು ಮಾಹಿತಿಯ ಉಪಕರಣವಾಗಿತ್ತು ಎಂಬುದರಿಂದ ಅದರ ಮಹತ್ವವನ್ನು ಅರಿಯಬಹುದು. ಅವರು ಇದರಲ್ಲಿ ಲೇಖಕರಾಗಿ ಕಾಣಿಕೆ ನೀಡಿದ್ದು ನಗಣ್ಯ. ಆದರೆ ಎಂದೆಂದಿಗೂ ಒಂದು ವಿಸ್ಮಯವೇ ಆಗಿರುವ ಭಾರತದ ಕುರಿತಾದ ಜನತೆಯಲ್ಲಿರುವ ಅಜ್ಞಾನವನ್ನು ನಿವಾರಿಸಲು ಒಂದು ಸಾಮೂಹಿಕ ಯೋಜನೆಗೆ ಅವರು ನಾಯಕತ್ವ ನೀಡಿದರಲ್ಲಾ, ಅದು ಮಾತ್ರ ಸವಾಲಿನ ಕೆಲಸವೇ ಆಗಿತ್ತು. ಇದರಲ್ಲಿ ಮೃಣಾಲ್‌ಕಾಂತಿ ಗಂಗೋಪಾಧ್ಯಾಯರು ಅವರ ನಿಕಟ ಸಹವರ್ತಿಗಳಾಗಿದ್ದರು.

**ಪ್ರಾಚೀನ ಭಾರತದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ**

ಭಾರತೀಯ ವಿಶ್ವವಿದ್ಯಾಲಯಗಳಲ್ಲಿನ ಪಠ್ಯಕ್ರಮದಲ್ಲಿ ವಿಜ್ಞಾನದ ಇತಿಹಾಸವನ್ನು ಸೇರಿಸಿಲ್ಲ. ಸಿಂಧೂ ಕಣಿವೆ ನಾಗರಿಕತೆಯಿಂದ ಆರ್ಯರು ಖಗೋಳ ಶಾಸ್ತ್ರದಲ್ಲಿ ಇಪ್ಪತ್ತೇಳು ನಕ್ಷತ್ರಗಳಿರುವ ಪಂಚಾಂಗವನ್ನು ಸೃಷ್ಟಿಸಿದ್ದುದು ನಿಜವಾದ ಸಂಶೋಧನೆ ಮತ್ತು ಕೊಡುಗೆ ಎಂಬುದನ್ನು ದೇವಿಪ್ರಸಾದ್‌ರು ಮುನ್ನೆಲೆಗೆ ತಂದರು. ಅದು ಎನ್‌ಐಎಸ್‌ಟಿಎಡಿ ಸಂಸ್ಥೆಯ ಯೋಜನೆಯಾಗಿತ್ತು ನಿಜ. ಆದರೆ ಸಂಶೋಧನೆ, ಅಧ್ಯಯನ, ಆಕರಗಳ ಗೂಢಾರ್ಥವನ್ನು ಬಿಡಿಸುವುದು, ತಾಳೆಹಾಕುವುದು, ಅಂಕಿ–ಅಂಶ ಮತ್ತು ಮಾಹಿತಿಯನ್ನು ಸಂಗ್ರಹಿಸುವುದು ಇದಕ್ಕೆಲ್ಲಾ ಸಂಬಂಧಿಸಿದ ಅಗಾಧ ಶ್ರಮವನ್ನು ನಿರ್ವಹಿಸಲು ವಿಶಾಲವಾದ ಅನುಭವ, ಜ್ಞಾನ ಮತ್ತು ಪರಿಣತಿ ಅಗತ್ಯವಾಗಿದ್ದು ಅದನ್ನು ದೇವಿಪ್ರಸಾದರು ತಮ್ಮ ಬದುಕಿನ ಅಂತಿಮಘಟ್ಟದಲ್ಲಿ ಸಾಧಿಸಿಕೊಂಡರು.

**ಸಮಾರೋಪ**

ಒಂದು ದಂತಕಥೆಯೇ ಆಗಿಹೋಗಿರುವ ಶಂಭುನಾಥ ಪಂಡಿತ್ ರಸ್ತೆಯಲ್ಲಿರುವ ದೇವಿಪ್ರಸಾದರ ಮನೆಗೆ ಭೇಟಿ ನೀಡುವ ಸದವಕಾಶ ನನಗೆ ದೊರೆತಿತ್ತು. ಆಗ ಅವರು 'ಪ್ರಾಚೀನ ಭಾರತದಲ್ಲಿ ವಿಜ್ಞಾನ–ತಂತ್ರಜ್ಞಾನ' ಗ್ರಂಥದ ಎರಡನೆಯ ಸಂಪುಟದ ಮೇಲೆ ಕೆಲಸ ಮಾಡುತ್ತಿದ್ದರು. ನಾವು ಆಗ ಸಮರ್ ಸೇನ್‌ರ ಬಗ್ಗೆ ಒಂದು ವಿಶೇಷ ಸಂಚಿಕೆ ತರಲು ಯತ್ನಿಸುತ್ತಿದ್ದೆವು. ಅವರು ದೇವಿಪ್ರಸಾದ್‌ರಿಗೆ ಬರೆದಿದ್ದ ಪತ್ರಗಳೆಲ್ಲಾ ಅವರ ಬಳಿಯೇ ಇವೆ ಎಂದು ಒಂದು ಕಾಲದಲ್ಲಿ ಅವರ ಮಾರ್ಗದರ್ಶಕರಾಗಿದ್ದ ಸಮರ್ ಸೇನ್ ನಮಗೆ ಕೊಂಚ ಹಿಂಜರಿಕೆಯಿಂದಲೇ ಹೇಳಿದ್ದರು. ನಮಗೆ ಆ ಪತ್ರಗಳು ಅಗತ್ಯವಾಗಿದ್ದವು. ಸಮರ್ ಸೇನ್‌ರು ಈ ಪ್ರಯತ್ನವನ್ನು ಕೈಬಿಡಿ ಎಂದು ಎಷ್ಟೋ ಉತ್ಸಾಹಭಂಗ ಮಾಡಿದರೂ ನಾವು ಕೇಳಲಿಲ್ಲ. ನಮ್ಮ ಹಠಮಾರಿತನದಿಂದಾಗಿ ಅವರು ಕಡೆಗೆ ಸುಮ್ಮನಾದರು. ನಮಗೆ ದೇವಿಪ್ರಸಾದ್ ಎಂದರೆ ಇಂಗ್ಲಿಷಿನಲ್ಲಿ 'ಲೋಕಾಯತ' ಪುಸ್ತಕದ ಲೇಖಕರು ಎಂಬುದು ತಿಳಿದಿತ್ತು. ಹಾಗೆಯೇ "ಭಾರತೀಯ ತತ್ವಶಾಸ್ತ್ರದಲ್ಲಿ ಜೀವಂತವಾದುದೇನು, ಮೃತವಾಗಿರುವುದೇನು" ಎಂಬ ಭಾರತೀಯ ತತ್ವಶಾಸ್ತ್ರದ ಕುರಿತಾದ ಅದ್ಭುತವಾದ ಪುಸ್ತಕವನ್ನು ಹಾಗೂ ಬಂಗಾಳಿ ಮತ್ತು ಇಂಗ್ಲಿಷಿನಲ್ಲಿ ಅಂಥ ಅನೇಕ ಪುಸ್ತಕಗಳನ್ನು ಬರೆದವರು ಎಂಬುದು ಸಹ ತಿಳಿದಿತ್ತು. ಅಂಥ ಮಾರ್ಕ್ಸ್‌ವಾದಿ ತತ್ವಶಾಸ್ತ್ರಜ್ಞರನ್ನು ಭೇಟಿಯಾಗಲು ನಾವು ನಮ್ಮ ಎಲ್ಲ ಧೈರ್ಯವನ್ನೂ ಒಟ್ಟುಗೂಡಿಸಿಕೊಳ್ಳಬೇಕಾಯಿತು. ಗ್ರಂಥಸಾಮ್ಯದ ಹಕ್ಕುಗಳ ಕಾರಣದಿಂದಾಗಿ ಲೋಕಾಯತ ದರ್ಶನದ ಕುರಿತಾದ ಅವರ ಗ್ರಂಥವನ್ನು ಬಂಗಾಳಿಯಲ್ಲಿ ಮುದ್ರಿಸುವುದು ನಮಗೆ ಸಾಧ್ಯವಾಗಿರಲಿಲ್ಲ. ತಮ್ಮ ಕೊನೆಯ ಉಸಿರಿರುವವರೆಗೂ ಅವರು ನಿಮ್ಮ ಪಾಲಿನ ದಾರ್ಶನಿಕರು, ಮಾರ್ಗದರ್ಶಿಗಳು ಹಾಗೂ ಮಿತ್ರರು ಆಗಿದ್ದರು. 'ಭಾರತದಲ್ಲಿನ ಭೌತವಾದಿ ಚಿಂತನೆಯ ಸಂದರ್ಭ' ಎಂಬ ಹೊಸ ಬಂಗಾಳಿ ಪುಸ್ತಕವೇ ಪ್ರಾಯಶಃ ಬಂಗಾಳಿ ಭಾಷೆಯಲ್ಲಿ ಪ್ರಕಟವಾದ ಅವರ ಕಡೆಯ ಪುಸ್ತಕ, ಅದರಲ್ಲಿ ಅವರು 'ಲೋಕಾಯತ' ಮತ್ತು ಚಾರ್ವಾಕ ತತ್ವಶಾಸ್ತ್ರಗಳ ಕುರಿತು ಚರ್ಚಿಸಿದ್ದಾರೆ. ಇದನ್ನು ೧೯೯೩ರಲ್ಲಿ 'ಅನುಷ್ಟುಪ್' ಪ್ರಕಾಶನದವರು ಪ್ರಕಟಿಸಿದರು.

ವಿಲಿಯಮ್ ಕ್ಯಾರೆ ಎಂಬಾತ ಆರಂಭಿಸಿದ ಸೆರಾಮ್‌ಪೂರ್ ಕಾಲೇಜಿನಲ್ಲಿ ನಾನು ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯವನ್ನು ಬೋಧಿಸುತ್ತಿದ್ದೆ. ನಾವು ಅವರನ್ನು ಭೇಟಿಯಾದಾಗ ದೇವಿಪ್ರಸಾದ್‌ರು ತಾವು ಮುಂಬಯಿಯಲ್ಲಿ ಕಳೆದ ದಿನಗಳ ಬಗ್ಗೆ, ಖ್ಯಾತ ಗಾಯಕ ಸಂಗೀತ ನಿರ್ದೇಶಕ ಸಚಿನ್ ದೇವ್ ಬರ್ಮನ್‌ರೊಂದಿಗೆ ತಮಗಿದ್ದ ಸಂಬಂಧದ ಬಗ್ಗೆ, ಹೀಗೆ ಅನೇಕ ಕತೆಗಳನ್ನು ಹೇಳುತ್ತಿದ್ದರು. ಭಾರತೀಯ ಸಿನಿಮಾಗಳ ನಿರ್ಮಾಪಕ ಶಶಿಧರ ಮುಖರ್ಜಿಯವರೊಂದಿಗೆ ಸಂಬಂಧವಿರಿಸಿ ಕೊಂಡಿದ್ದ ಅವರು ಸಿನಿಮಾಗಳಿಗೆ ಚಿತ್ರಕತೆ ಬರೆದಿದ್ದರು. 'ಮಜದೂರ್' ಎಂಬ ಸಿನಿಮಾಗೆ ಅವರು ಬರೆದ ಚಿತ್ರಕತೆಯನ್ನು ರಜನಿ ಪಾಮೆ ದತ್ತಾ ಮೆಚ್ಚಿಕೊಂಡಿದ್ದರು.

ದೇವಿಪ್ರಸಾದ್‌ರು ಎಂಥ ಬಹುಮುಖಿ ಸಾಮಾಜಿಕ ಚಿಂತಕ ಎಂಬುದನ್ನು ಊಹಿಸಿಕೊಳ್ಳುವುದೂ ನನಗೆ ಕಷ್ಟದ ಸಂಗತಿ.

ಮೂಲ : **ಅನಿಲ್ ಆಚಾರ್ಯ**
ಅನುವಾದ : **ಡಾ|| ಬಿ. ಆರ್. ಮಂಜುನಾಥ್**
ನಂ. ೬೧, ೪ನೇ ಕ್ರಾಸ್, ಅಶೋಕ ನಗರ, ಎನ್. ಆರ್. ಕಾಲೋನಿ ಹತ್ತಿರ
ಬೆಂಗಳೂರು – ೫೬೦ ೦೫೦



ಹೊಸ ಓದು

## ಅವಿಸ್ಮರಣೀಯ ಅರುಣಾಚಲ




*ಯಡೂರು ಮಹಾಬಲ*

**ಪುಟ : ೩೦೪**

**ಬೆಲೆ : ರೂ. ೨೪೦**

**ಸಮೈಕ್ಯ ಪಬ್ಲಿಕೇಶನ್ಸ್,** ಮೈಸೂರು

*ಇಂದು ನಾವು ಈಶಾನ್ಯ ಭಾಗದ ಅರುಣಾಚಲ ಎಂದು ಕರೆಯುವ ಭೂಭಾಗ ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ನೀಫಾ ಎಂಬ ಹೆಸರಿನ ಪ್ರದೇಶ ವಾಗಿತ್ತು. ಭೂತಾನ್, ಟಿಬೆಟ್ ಮತ್ತು ಅಸ್ಸಾಂ ಪ್ರಾಂತ್ಯಗಳ ಪ್ರಾಬಲ್ಯದ ಮಧ್ಯೆ ನಲುಗಿ ಹೋಗಿತ್ತು. ಒಂದು ಕಡೆ ಚೀನಾ, ಇನ್ನೊಂದು ಕಡೆ ಬರ್ಮಾ ಇವರುಗಳು ನೀಫಾ ಪ್ರಾಂತ್ಯದ ಬುಡಕಟ್ಟು ಜನರ ಮೇಲೆ ನಿರಂತರ ಯುದ್ಧ ಮಾಡುತ್ತಾ ಅವರ ಸಾಮಾಜಿಕ ಮತ್ತು ಆರ್ಥಿಕ ಬದುಕನ್ನು ನಾಶ ಮಾಡಿದ್ದಾರೆ. ಇವರೆಲ್ಲರನ್ನು ಬಗ್ಗು ಬಡಿದು ಬ್ರಿಟಿಷರು ತಮ್ಮ ಸಾಮ್ರಾಜ್ಯಶಾಹಿ ಧೋರಣೆ ಮೆರೆದಿದ್ದಾರೆ. ಯಡೂರ ಮಹಾಬಲ ಅವರ ಈ ಪುಸ್ತಕ ಒಂದು ರಕ್ತಸಿಕ್ತ ಇತಿಹಾಸದ ದಾಖಲೆಯಾಗಿದೆ. ಸ್ಥಳೀಯ ಸಾಮ್ರಾಜ್ಯಶಾಹಿ ಹಾಗೂ ವಿದೇಶಿ ಸಾಮ್ರಾಜ್ಯಶಾಹಿಗಳ ದಾಳಿಗಳನ್ನು ಇಲ್ಲಿನ ಬುಡಕಟ್ಟು ಜನಾಂಗಗಳು ಎದೆಗುಂದದೆ ಹೇಗೆ ಹಿಮ್ಮೆಟ್ಟಿಸಿದ್ದಾರೆ ಎಂಬುದನ್ನು ಹಲವಾರು ದಾಖಲೆಗಳ ಮೂಲಕ ವಿವರಿಸಿದೆ. ಅಹೋಮರು, ಮೌಮಾರಿಯಾಗಳು, ನೀಫಾ ಪ್ರಾಂತ್ಯದ ಬುಡಕಟ್ಟು ಪ್ರದೇಶಗಳನ್ನು ಮೊದಲು ಆಕ್ರಮಿಸಿ ಸ್ಥಳೀಯ ವಾಗಿದ್ದ ಅಕಾಸ್, ಸಫ್ಲಾಸ್, ಅಬೋರ್, ಮಿಶ್ಮಿ, ಮಿರಿ, ಕಪಚೋರ್, ಹಜಾರಿಕೋನ, ಬುಡಕಟ್ಟುಗಳ ಮೇಲೆ ಪ್ರಾಬಲ್ಯ ಸ್ಥಾಪಿಸಿದರು. ಅನಂತರ ಅಹೋಮ ಮೌಮಾರಿಯಾಗಳ ಮೇಲೆ ಬರ್ಮೀಯರ ಕಲಹಗಳು, ಅನಂತರ ಬ್ರಿಟಿಷರ ದಾಳಿಗಳನ್ನು ನಡೆಸಿ ನೀಫಾದ ಭೂಭಾಗವನ್ನೆಲ್ಲ ಅಸ್ಸಾಂ ಎಂದು ಕರೆದರು. ಯುದ್ಧಗಳಲ್ಲಿ ಹೋರಾಡಿ ಸೈನಿಕರು ವೀರಮರಣ ಹೊಂದುವುದು 'ಯೋಧ' ಧರ್ಮದ ಭಾಗ. ಆದರೆ ಇಂದಿನ ಅರುಣಾಚಲ ಭಾಗದ ಬುಡಕಟ್ಟು ವೀರರು ಯುದ್ಧ ಮಾಡದೆ ಬಡಿಸಿಕೊಂಡು ಸತ್ತಂತಹ ದುರ್ಗತಿಯನ್ನು ಈ ಪುಸ್ತಕ ಯಾವ ಭಾವಾವೇಶಗಳಿಲ್ಲದೆ ನವಿರಾಗಿ ನಿರೂಪಿಸುತ್ತದೆ.*

## ಪುರಾಣಗಳು ಜಾತಿವ್ಯವಸ್ಥೆ ಸತ್ಯಹರಿಶ್ಚಂದ್ರ

*ತೆಲುಗು ಮೂಲ: ಡಾ॥ ವಿಜಯಭಾರತಿ    ಕನ್ನಡಕ್ಕೆ : ಬಿ. ಸುಜ್ಞಾನಮೂರ್ತಿ*

**ಪುಟ : ೮೨, ಬೆಲೆ : ರೂ. ೭೦, ಲಡಾಯಿ ಪ್ರಕಾಶನ,** ಗದಗ

*ಪುರಾಣಗಳ ಬಗ್ಗೆ ಸಾಕಷ್ಟು ಅಧ್ಯಯನ ಮಾಡಿರುವ ತೆಲುಗು ಭಾಷೆಯ ಡಾ॥ ಬಿ. ವಿಜಯಭಾರತಿ ಅವರು ಪ್ರಖರ ವಿಚಾರವಾದಿ. ಪುರಾಣ ಮತ್ತು ಜಾತಿವ್ಯವಸ್ಥೆ ಒಂದರೊಳಗೊಂದು ಬೆಸೆದುಕೊಂಡಿರುವ ಬಗೆಯನ್ನು ಸತ್ಯಹರಿಶ್ಚಂದ್ರನ ಕತೆಯಲ್ಲಿ, ಷಟ್ಚಕ್ರವರ್ತಿಗಳ ಕತೆಯಲ್ಲಿ, ದಶಾವತಾರಗಳಲ್ಲಿ ಮತ್ತು ರಾಮಾಯಣ ಕಾವ್ಯದಲ್ಲಿ ಶೋಧಿಸಿ ತೆಗೆದಿದ್ದಾರೆ. ಮಾರ್ಕಂಡೇಯ ಪುರಾಣ, ಸ್ಕಂದಪುರಾಣ ಮತ್ತು ಹರಿಶ್ಚಂದ್ರನ ಕಾವ್ಯ ಮುಂತಾದ ಆಕರಗಳನ್ನು ಪರಿಶೀಲಿಸಿ ಪುರಾಣಗಳು ಹೇಗೆ ಜಾತಿವ್ಯವಸ್ಥೆಯನ್ನು ಗಟ್ಟಿಗೊಳಿಸಿವೆ ಎಂಬುದನ್ನು ವಿವರಿಸಿದ್ದಾರೆ. ಇಲ್ಲಿ ಮಂಡಿತವಾಗಿರುವ ಎಲ್ಲಾ ಅಭಿಪ್ರಾಯಗಳ ಬಗ್ಗೆ ಭಿನ್ನಾಭಿಪ್ರಾಯಗಳು ಇರಬಹುದಾದರೂ ಲೇಖಕರ ಅಧ್ಯಯನಶೀಲತೆ ಬಗ್ಗೆ ಗೌರವ ಮೂಡುತ್ತದೆ. ಅನುವಾದ ಕಾರ್ಯಕ್ಕೆ ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಗೌರವ ಪ್ರಶಸ್ತಿ ಪಡೆದಿರುವ ಬಿ. ಸುಜ್ಞಾನಮೂರ್ತಿ ಈ ಪುಸ್ತಕವನ್ನು ಕನ್ನಡಕ್ಕೆ ತಂದಿದ್ದಾರೆ. ಆಸ್ತಿ ಮತ್ತು ಅಧಿಕಾರವನ್ನು ಪಡೆಯುವುದಕ್ಕೆ ಧರ್ಮಗಳನ್ನು ಸೃಷ್ಟಿಸುವುದು ಮತ್ತು ಕಟ್ಟುನಿಟ್ಟಾಗಿ ಜಾರಿಗೊಳಿಸುವುದು ಆರಂಭವಾದ ಮೇಲೆ ಜಾತಿವ್ಯವಸ್ಥೆ ಅಸ್ತಿತ್ವಕ್ಕೆ ಬಂತು. ಈ ಜಾತಿವ್ಯವಸ್ಥೆ ಸಡಿಲಗೊಳ್ಳದಂತೆ ಕಟ್ಟುನಿಟ್ಟಾಗಿ ಜಾರಿಯಲ್ಲಿರಲು ರಾಜ ಮತ್ತು ಪುರೋಹಿತ ವರ್ಗಗಳು ಬಹಳ ಶ್ರದ್ಧೆ ವಹಿಸಿ ದುಡಿದವು. ಎಂತಹ ದೀನ ಮತ್ತು ಹೀನ ಸ್ಥಿತಿಗಾದರೂ ಜನಸಮೂಹವನ್ನು ಮಾನಸಿಕವಾಗಿ ಒಪ್ಪಿಸಬಲ್ಲ ನೈಪುಣ್ಯತೆಗೆ ನಮ್ಮ ಪುರಾಣ ಲೇಖಕರು ಇಳಿದಿರುವುದಕ್ಕೆ ನೊಬೆಲ್ ಬಹುಮಾನವನ್ನೇ ಕೊಡಬೇಕು ಎಂದು ತಮ್ಮ 'ನರಕದಲ್ಲಿ ಹರಿಶ್ಚಂದ್ರ' ನಾಟಕದಲ್ಲಿ ನಾರ್ಲಿ ವೆಂಕಟೇಶ್ವರರಾವ್ ಹೇಳಿದ್ದಾರೆ. ಇಂಥ ಹತ್ತಾರು ವಿಚಾರ ಪ್ರಚೋದಕ ವಿವರಣೆಗಳಿಂದ ಕೂಡಿರುವ ಈ ಪುಸ್ತಕ ವೈಚಾರಿಕ ಕ್ಷೇತ್ರಕ್ಕೆ ಒಂದು ಉತ್ತಮ ಕೊಡುಗೆ.*

## ಸಬರದ ಸಾಹಿತ್ಯ ಸಮೀಕ್ಷೆ

*ಪ್ರೊ॥ ಎಚ್. ಟಿ. ಪೋತೆ*



**ಪುಟ: ೩೧೨**    **ಬೆಲೆ : ರೂ. ೨೪೫**

**ಶ್ರೀ ಸಿದ್ದಲಿಂಗೇಶ್ವರ ಪ್ರಕಾಶನ,** ಕಲಬುರಗಿ–೦೧

*ಕನ್ನಡ ಸಾಹಿತ್ಯ ಸಂದರ್ಭದಲ್ಲಿ ನವೋದಯ, ಪ್ರಗತಿ ಪಂಥ, ನವ್ಯ ಮುಂತಾದ ಕಾಲಘಟ್ಟಗಳ ನಂತರ ಬಂಡಾಯ ಸಾಹಿತ್ಯ ಚಳುವಳಿ ಆರಂಭವಾಯಿತು. ಆ ಕಾಲಘಟ್ಟದಲ್ಲಿ ಡಾ॥ ಬಸವರಾಜ ಸಬರದ ಮತ್ತು ಚೆನ್ನಣ್ಣ ವಾಲೀಕಾರ ಇವರು ಉತ್ತರ ಕರ್ನಾಟಕ ಭಾಗದಲ್ಲಿ ಬಂಡಾಯ – ದಲಿತ, ಸಮುದಾಯ, ರೈತ ಮುಂತಾದ ಚಳುವಳಿಗಳ ಜೊತೆ ಕೆಲಸ ಮಾಡುತ್ತಲೇ ತಮ್ಮ ಬರವಣಿಗೆ ಮತ್ತು ಬದ್ಧತೆಗಳನ್ನು ಪ್ರಕಟಪಡಿಸಿದರು. ಸಬರದ ಅವರದು ಬಹುಮುಖಿ ವ್ಯಕ್ತಿತ್ವ. ಕಾವ್ಯ, ನಾಟಕ, ವಿಚಾರ ಸಾಹಿತ್ಯ, ವಿಮರ್ಶೆ, ಸಂಶೋಧನೆ, ಗ್ರಂಥ ಸಂಪಾದನೆ ಮುಂತಾದ ಕ್ಷೇತ್ರಗಳಲ್ಲಿ ಒಂದು ನೂರ ಐವತ್ತಕ್ಕೂ ಹೆಚ್ಚು ಕೃತಿಗಳನ್ನು ಹೊರ ತಂದಿದ್ದಾರೆ. ತಮ್ಮ ಸಾಹಿತ್ಯ ಮತ್ತು ಸಂಸ್ಕೃತಿಯ ಕೊಡುಗೆಗಳ ಸಲುವಾಗಿಯೇ ಅವರು ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ನಾಟಕ ಅಕಾಡೆಮಿ ಗೌರವ ಪ್ರಶಸ್ತಿ, ಸಾಹಿತ್ಯ ಅಕಾಡೆಮಿ ಪುಸ್ತಕ ಬಹುಮಾನ, ಜಾನಪದ ಅಕಾಡೆಮಿ ಪುಸ್ತಕ ಬಹುಮಾನ ಮುಂತಾದ ಇನ್ನೂ ಅನೇಕ ಪ್ರಶಸ್ತಿ–ಪುರಸ್ಕಾರಗಳಿಂದ ಗೌರವಿಸಲ್ಪಟ್ಟಿದ್ದಾರೆ. ಗುಲ್ಬರ್ಗಾ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕ ಹುದ್ದೆಯಿಂದ ಅವರು ನಿವೃತ್ತರಾದ ಮೇಲೆ ಅವರ ಶಿಷ್ಯರು, ಅಭಿಮಾನಿಗಳು ಮತ್ತು ವಿದ್ಯಾರ್ಥಿಗಳು ಸೇರಿ ರಾಜ್ಯ ಮಟ್ಟದ ವಿಚಾರ ಸಂಕಿರಣ ಏರ್ಪಡಿಸಿ ಅವರ ಸೇವೆಯನ್ನು ಸ್ಮರಿಸುವ ಉತ್ತಮ ಕೆಲಸ ಮಾಡಿದ್ದಾರೆ. ಇದರ ಸಂಪಾದಕರಾಗಿ ಪ್ರೊ॥ ಎಚ್. ಟಿ. ಪೋತೆ ಕೆಲಸ ಮಾಡಿ ಕ್ರಮಬದ್ಧವಾಗಿ ಸಬರದ ಅವರ ಸಾಹಿತ್ಯ ಸಾಧನೆಯನ್ನು ಗುರುತಿಸಲು ಅನುವು ಮಾಡಿಕೊಟ್ಟಿದ್ದಾರೆ. ಇದು ಗೌರವದ ಜೊತೆಗೆ ಸಾಹಿತ್ಯ ಸಾಧನೆಯ ಅಳತೆಗೋಲು ಕೂಡ ಆಗಿದೆ.*

***– ಡಾ॥ ರಂಗಾರೆಡ್ಡಿ ಕೋಡಿರಾಂಪುರ***

## ಚಿರಸ್ಮರಣೆಯ ಕಯ್ಯೂರು (ರೈತರ ವೀರ ಹೋರಾಟದ ಇತಿಹಾಸ)

ನಿರಂಜನ




**ಪುಟ : ೪೮**    **ಬೆಲೆ : ರೂ. ೩೦**

**ಬಹುರೂಪಿ,** ನಂ.೧, 'ನಾಕುತಂತಿ', ಬಸಪ್ಪ ಬಡಾವಣೆ, ಆರ್‌ಎಂವಿ ೨ನೇ ಘಟ್ಟ, ಸಂಜಯನಗರ, ಬೆಂಗಳೂರು–೫೬೦ ೦೯೪

*ಶಬ್ದಗಳ ಮೂಲಕ ದೃಶ್ಯವನ್ನು ಕಟ್ಟಿಕೊಡುವ ತಂತ್ರ, ಭಾಷೆ ಗೊತ್ತಿರುವ ಕನ್ನಡದ ಕೆಲವು ಪ್ರಮುಖ ಬರಹಗಾರರಲ್ಲಿ ಲೇಖಕ ಜಿ. ಎನ್. ಮೋಹನ್ ಅವರೂ ಒಬ್ಬರು. ಅವರ ಲೇಖನಗಳನ್ನು ಓದುತ್ತಾ ಹೋದ ಹಾಗೆ ಓದಿನ ವಿಷಯದ ದೃಶ್ಯಗಳು ರೂಪಗೊಂಡು ಓದುಗ ತನಗರಿಯದೇ ಆ ದೃಶ್ಯಗಳ ಭಾಗವಾಗುತ್ತಾನೆ. 'ನನ್ನೊಳಗಿನ ಹಾಡು ಕ್ಯೂಬಾ' ಪ್ರವಾಸ ಕಥನದ ಕೃತಿಯ ಮೂಲಕ ಓದುಗರನ್ನು ಕ್ಯೂಬಾಕ್ಕೆ ಕರೆದೊಯ್ದಿದ್ದ ಅವರು, ಈಗ ನಿರಂಜನರು ಕಂಡ ಕಯ್ಯೂರಿನ ರೈತ ಹೋರಾಟದ ಕುರಿತು ಚಿಕ್ಕ ಪುಸ್ತಕ ಬರೆದು ಓದುಗರನ್ನು ಅಂದಿನ ಮಂಗಳೂರಿನ ಇಂದಿನ ಕಾಸರಗೋಡಿನ ಭಾಗವಾದ ಕೈಯ್ಯೂರಿಗೆ ಕರೆದೊಯ್ಯುತ್ತಾರೆ. ಭಾರತ ಕಂಡ ಅಪರೂಪದ ಸ್ವಾತಂತ್ರ್ಯ ಹೋರಾಟದಲ್ಲಿ ಕಯ್ಯೂರು ರೈತ ಹೋರಾಟವೂ ಒಂದು. ಬ್ರಿಟಿಷ್ ಚಕ್ರಾಧಿಪತ್ಯದ ವಿರುದ್ಧ, ಸ್ಥಳೀಯ ಊಳಿಗಮಾನ್ಯ ವ್ಯವಸ್ಥೆಯ ವಿರುದ್ಧ ಏಕಕಾಲಕ್ಕೆ ನಡೆದ ಈ ರೈತ ಹೋರಾಟದಲ್ಲಿ ನಾಲ್ಕುಜನ ರೈತ ಯುವಕರನ್ನು ಬ್ರಿಟಿಷ್ ಸರಕಾರ ನೇಣಿಗೇರಿಸುತ್ತದೆ. ಈ ಯುವಕರ ವಿಚಾರಣೆ ನಡೆಯುತ್ತಿರುವಾಗ ಕನ್ನಡದ ಲೇಖಕ ಕುಳಕುಂದ ಶಿವರಾಯ (ನಿರಂಜನ) ಹೈಸ್ಕೂಲ್ ವಿದ್ಯಾರ್ಥಿ. ಮುಂದೆ ಅವರು ಆ ಘಟನೆಗಳನ್ನು ಕುರಿತು ಚಿರಸ್ಮರಣೆ ಎಂಬ ಮೌಲಿಕ ಕಾದಂಬರಿ ಬರೆದರು. ಸ್ವಾತಂತ್ರ್ಯ ಪೂರ್ವ ರೈತರ ಬದುಕು, ಭೂಮಾಲಿಕರ ಶೋಷಣೆ, ಕೆಂಬಾವುಟದ ಪ್ರತಿರೋಧ ಇತಿಹಾಸದ ಒಂದು ಬೆಳಕಿಂಡಿಯಾಗಿ ಈ ಕೃತಿ ಬಂದಿದೆ. ಜಿ. ಎನ್. ಮೋಹನ್ ಅವರು ವಿಜಯ ಕರ್ನಾಟಕಕ್ಕೆ ಬರೆದ ಅಂಕಣಗಳನ್ನು ಸಂಗ್ರಹಿಸಿ ಪ್ರಕಟಿಸಿದ ಕೃತಿ ಇದಾಗಿದೆ. ನಿರಂಜನರಂತೆ ಜಿ. ಎಸ್. ಮೋಹನ್ ಅವರ ಭಾಷೆ, ಶೈಲಿ ಆಪ್ತ, ಇಲ್ಲಿನ ವಸ್ತು ಪರಮಾಪ್ತ.*

***– ಶ್ರೀಸುಮಿತ್ರಾಸುತ ಅಗಸಬಾಳ,*** *ಬೆಂಗಳೂರು*

# ಉನ್ನತ ಶಿಕ್ಷಣದಲ್ಲಿ ಶಿಕ್ಷಕರ ದಕ್ಷತೆ
## ಸಮಕಾಲೀನ ಅನುಭವಗಳು

ಶಿಕ್ಷಣ ವ್ಯವಸ್ಥೆಯಲ್ಲಿ ಪೂರ್ವ ಪ್ರಾಥಮಿಕ, ಪ್ರಾಥಮಿಕ ಮತ್ತು ಮಾಧ್ಯಮಿಕ, ಪ್ರೌಢ, ಪದವಿಪೂರ್ವ, ಪದವಿ ಹಾಗೂ ಸ್ನಾತಕೋತ್ತರ ಪದವಿ ಎಂಬ ವಿವಿಧ ಹಂತಗಳಿರುವುದನ್ನು ನಾವೆಲ್ಲ ಬಲ್ಲೆವು. ಈ ಹಂತಗಳಲ್ಲಿ ಪದವಿ ಹಾಗೂ ಸ್ನಾತಕೋತ್ತರ ಪದವಿ ಹಂತದ ಶಿಕ್ಷಣವನ್ನು ಉನ್ನತ ಶಿಕ್ಷಣ ಹಂತ ಎಂಬುದಾಗಿ, ಉಳಿದ ಎಲ್ಲಾ ಹಂತಗಳನ್ನು ಒಟ್ಟಾಗಿ ಪರಿಗಣಿಸಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಂತ ಎಂದು ಎರಡು ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ. ಈ ಎರಡು ಹಂತಗಳಲ್ಲಿ ಕರ್ತವ್ಯ ನಿರ್ವಹಿಸುವ ಶಿಕ್ಷಕರು ಸಮಾನ ಹಕ್ಕು ಮತ್ತು ಕರ್ತವ್ಯಗಳನ್ನು ಹೊಂದಿರುವವರಾದರೂ ಉನ್ನತ ಶಿಕ್ಷಣ ಹಂತದ ಶಿಕ್ಷಕರ ಕರ್ತವ್ಯದ ಸ್ವರೂಪದಲ್ಲಿ ಮಾತ್ರ ಸಾಕಷ್ಟು ಭಿನ್ನತೆಗಳನ್ನು ಹೊಂದಬೇಕೆಂದು ನಿರೀಕ್ಷಿಸಲಾಗಿದೆ. ಪ್ರಾಥಮಿಕ ಮತ್ತು ಪ್ರೌಢ ಹಂತದ ಶಿಕ್ಷಕರು ಮಕ್ಕಳಲ್ಲಿ ನೈತಿಕ ಮೌಲ್ಯಗಳು ಹಾಗೂ ನಿಗದಿಪಡಿಸಿದ ಪಠ್ಯಕ್ರಮದ ವಿಷಯಗಳನ್ನು ಮಕ್ಕಳ ಮನಸ್ಸಲ್ಲಿ ತುಂಬಿ ಅವರ ಜೀವನ ನಿರ್ವಹಣೆ ಮತ್ತು ಪರೀಕ್ಷೆಗಳಲ್ಲಿ ಯಶಸ್ವಿಯಾಗುವಂತೆ ನೋಡಿಕೊಳ್ಳ ಬೇಕಾಗುತ್ತದೆ. ಆದರೆ ಉನ್ನತ ಶಿಕ್ಷಣ ಹಂತದಲ್ಲಿ ಶಿಕ್ಷಕರ ಕರ್ತವ್ಯ ಇದಿಷ್ಟೇ ಆಗಬಾರದೆಂದು ಶಿಕ್ಷಣ ತಜ್ಞರು ಮತ್ತು ಶಿಕ್ಷಣ ಆಯೋಗಗಳು ತಿಳಿಸಿವೆ. ೧೯೪೮–೪೯ರಲ್ಲಿ ನೇಮಕಗೊಂಡಿದ್ದ ಡಾ॥ ರಾಧಾಕೃಷ್ಣನ್ ಅವರ ಅಧ್ಯಕ್ಷತೆಯ ಉನ್ನತ ಶಿಕ್ಷಣ ಸಮಿತಿ ತನ್ನ ವರದಿಯಲ್ಲಿ "ಉನ್ನತ ಶಿಕ್ಷಣ ಹಂತದಲ್ಲಿ ಬೋಧಿಸುವ ಶಿಕ್ಷಕರು ಶೋಧನೆಯ ಉತ್ಸಾಹ ಮತ್ತು ವಿಮರ್ಶಕ ಬುದ್ಧಿಯನ್ನು ಹೊಂದಿರಬೇಕು. ಶಿಕ್ಷಕರ ಯಶಸ್ಸನ್ನು ಕೇವಲ ವಿದ್ಯಾರ್ಥಿಗಳು ಪರೀಕ್ಷೆಗಳಲ್ಲಿ ಗಳಿಸಿದ ಅಂಕಗಳು, ಉತ್ತೀರ್ಣ, ಅನುತ್ತೀರ್ಣ ಎಂಬ ಪರಿಭಾಷೆಗಳಲ್ಲಿ ಅಥವಾ ಜ್ಞಾನ ಕ್ಷೇತ್ರಕ್ಕೆ ನೀಡುವ ನೈಜ ಕೊಡುಗೆಗಳಿಂದ ಅಳೆಯಲು ಬರುವುದಿಲ್ಲ. ಅದರ ಬದಲಿಗೆ ವಿದ್ಯಾರ್ಥಿಗಳಲ್ಲಿ ಸಮಾಜಮುಖಿಯಾದ ಸ್ವತಂತ್ರ ಚಿಂತನೆಯ ಶಕ್ತಿಯನ್ನು ತುಂಬಬೇಕು" ಎಂದು ಹೇಳಿದೆ. ಹಾಗೆಯೇ ಇಟಲಿಯ ನವ ಮಾರ್ಕ್ಸ್‌ವಾದಿ ಚಿಂತಕ ಆಂಟೋನಿ ಗ್ರಾಮ್ಷಿ ತನ್ನ 'ದ ಇಂಟಲೆಕ್ಚುಯಲ್ಸ್' (೧೯೭೧) ಗ್ರಂಥದಲ್ಲಿ ನಮ್ಮ ಬುದ್ಧಿಜೀವಿಗಳನ್ನು ವಿಶಾಲ ನೆಲೆಯಲ್ಲಿ ಪ್ರಮುಖವಾದ ಎರಡು ಭಾಗಗಳಾಗಿ ಗುರುತಿಸುತ್ತಾರೆ. ಅವುಗಳೆಂದರೆ, ಒಂದು : ಸಾಂಪ್ರದಾಯಿಕ ಬುದ್ಧಿಜೀವಿಗಳು. ಎರಡು : ಕ್ರಿಯಾತ್ಮಕ ಬುದ್ಧಿಜೀವಿಗಳು. ಸಾಂಪ್ರದಾಯಿಕ ಬುದ್ಧಿಜೀವಿಗಳು ಅಸ್ತಿತ್ವದಲ್ಲಿರುವ ಸಾಮಾಜಿಕ ಸಂರಚನೆಗಳನ್ನು ಸಂರಕ್ಷಿಸುವ, ಇರುವ ಜ್ಞಾನವನ್ನು ಪುನರ್ ಉತ್ಪಾದಿಸುವ ಕಾರ್ಯದಲ್ಲಿ ನಿರತರಾಗಿರುತ್ತಾರೆ. ಕ್ರಿಯಾತ್ಮಕ ಬುದ್ಧಿಜೀವಿಗಳು ಇದಕ್ಕೆ ವಿರುದ್ಧವಾಗಿ, ಈಗಾಗಲೇ ಇರುವ ಪ್ರಭುತ್ವಾಧಾರಿತ ಜ್ಞಾನವನ್ನು ಸರಳವಾಗಿ ಪುನರ್ ಉತ್ಪಾದಿಸದೆ ಅಂಥ ಜ್ಞಾನದ ಜೊತೆ ವಿಮರ್ಶಾತ್ಮಕವಾಗಿ ಮುಖಾಮುಖಿ ಯಾಗುವ ಮೂಲಕ ನಾಗರಿಕ ಸಮಾಜಕ್ಕೆ ಅಗತ್ಯವಾದ ಹೊಸ ಜ್ಞಾನವನ್ನು ಸೃಷ್ಟಿಸುವಂತಹವರಾಗಿರುತ್ತಾರೆ.

ಮೇಲಿನ ಮಾತುಗಳನ್ನು ಗಮನಿಸಿದರೆ ಉನ್ನತ ಶಿಕ್ಷಣ ಹಂತದಲ್ಲಿ ಬೋಧಿಸುವ ಶಿಕ್ಷಕರು ಕ್ರಿಯಾತ್ಮಕ ಬುದ್ಧಿಜೀವಿಗಳ ಸಾಲಿನಲ್ಲಿ ನಿಲ್ಲಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ನೋಡುವುದಾದರೆ ಉನ್ನತ ಶಿಕ್ಷಣದ ಶಿಕ್ಷಕರು ಕೆಲವು ನಿರ್ದಿಷ್ಟ ಸಾಮರ್ಥ್ಯಗಳನ್ನು ಪಡೆದಿರಲೇಬೇಕಾಗಿರುತ್ತದೆ. ಅವುಗಳನ್ನು ಈ ಮುಂದಿನಂತೆ ಪಟ್ಟಿ ಮಾಡಬಹುದು :

**ಉನ್ನತ ಶಿಕ್ಷಣ ಹಂತದ ಶಿಕ್ಷಕರಲ್ಲಿ ಇರಬೇಕಾದ ಸಾಮರ್ಥ್ಯಗಳು**

೧. ಸಮಾಜವನ್ನು ಪರಿವರ್ತನೆ ಮಾಡಬಲ್ಲ 'ಬೌದ್ಧಿಕ ನಾಯಕ' ಆಗಿರಬೇಕು
೨. ಅರ್ಪಣೆ ಮತ್ತು ಬದ್ಧತೆಯ ಮನೋಭಾವನೆ ಹೊಂದಿರಬೇಕು
೩. ವಿದ್ಯಾರ್ಥಿಗಳಿಗೆ ನೈಜವಾದ ಪ್ರೇರೇಪಣಾ ಮಾದರಿಯಾಗಿರಬೇಕು
೪. ಕೌಶಲ್ಯಾಭಿವೃದ್ಧಿ ಬೆಳೆಸುವ ಸಾಮರ್ಥ್ಯ ಪಡೆದಿರಬೇಕು
೫. ಸಾಮಾಜಿಕ ಮತ್ತು ನೈತಿಕ ಮೌಲ್ಯಗಳ ಗಣಿಯಾಗಿರಬೇಕು
೬. ವಿದ್ಯಾರ್ಥಿಗಳಲ್ಲಿ ಪರ್ಯಾಯ ಆಲೋಚನೆಯನ್ನು ಮೂಡಿಸುವ ಆಸಕ್ತಿ ಹೊಂದಿರಬೇಕು
೭. ಕಾಲದ ಅಗತ್ಯಕ್ಕನುಗುಣವಾದ ಪಠ್ಯಕ್ರಮ ರೂಪಿಸುವ ಬೌದ್ಧಿಕ ಸಾಮರ್ಥ್ಯ ಪಡೆದಿರಬೇಕು
೮. ವಿಷಯದ ವಿಶೇಷ ಜ್ಞಾನದ ಬಗ್ಗೆ ಸಂಶೋಧನಾಸಕ್ತಿ ಹೊಂದಿರಬೇಕು
೯. ವೃತ್ತಿ ಸುಧಾರಣೆಗೆ ಬೇಕಾದ ಚಟುವಟಿಕೆಗಳಲ್ಲಿ ಸಕ್ರಿಯವಾಗಿರಬೇಕು
೧೦. ಸ್ವಯಂ ಮೌಲ್ಯಮಾಪನದ ಗುಣಗಳನ್ನು ಮೈಗೂಡಿಸಿಕೊಂಡಿರಬೇಕು.



ಉನ್ನತ ಶಿಕ್ಷಣ ಹಂತದಲ್ಲಿ ಕರ್ತವ್ಯ ನಿರ್ವಹಿಸುವ ಎಲ್ಲಾ ಅಧ್ಯಾಪಕರಲ್ಲಿ ಈ ಗುಣಗಳು ಇರಲೇಬೇಕು. ಇಲ್ಲವಾದರೆ ಉನ್ನತ ಶಿಕ್ಷಣದ ನಿಜವಾದ ಉದ್ದೇಶ ಈಡೇರುವುದಿಲ್ಲ. ಅದಕ್ಕಾಗಿಯೇ ನಮ್ಮ ವ್ಯವಸ್ಥೆಯು ಅಧ್ಯಾಪಕರಲ್ಲಿ ಈ ಗುಣಗಳನ್ನು ಮೈಗೂಡಿಸಿಕೊಳ್ಳಲು ಅನುಕೂಲವಾಗುವಂತಹ ನೀತಿ ನಿಯಮಗಳು ಹಾಗೂ ಉತ್ತಮ ವೇತನಾನುದಾನ ಮತ್ತು ರಜೆ ಸೌಲಭ್ಯಗಳನ್ನು ಸರ್ಕಾರ ನಿರಂತರವಾಗಿ ನೀಡುತ್ತಿದೆ. (ಈಚಿನ ದಿನಗಳಲ್ಲಿ ಇದು ನಡೆಯುತ್ತಿಲ್ಲವೆಂಬುದು ಒಂದು ನ್ಯೂನತೆಯಾಗಿದೆ.) ಕಳೆದ ಹತ್ತು ವರ್ಷಗಳಿಂದ ವಿಶ್ವವಿದ್ಯಾಲಯಗಳ ಧನಸಹಾಯ ಆಯೋಗ (ಯುಜಿಸಿ) ಈ ನಿಟ್ಟಿನಲ್ಲಿ ಹಲವಾರು ಯೋಜನೆಗಳನ್ನು ಕಟ್ಟುನಿಟ್ಟಾಗಿ ಜಾರಿಮಾಡುತ್ತಿದೆ. (ಈ ಸೌಲಭ್ಯಗಳು ಸರ್ಕಾರದ ವಿಶ್ವವಿದ್ಯಾಲಯಗಳು, ಪದವಿ ಕಾಲೇಜು ಅಧ್ಯಾಪಕರಿಗೆ ಅಷ್ಟೇ ಅಲ್ಲದೆ ಖಾಸಗಿ ಅನುದಾನಿತ ಪದವಿ ಕಾಲೇಜುಗಳ ಎಲ್ಲಾ ಖಾಯಂ ಅಧ್ಯಾಪಕರಿಗೂ ಅನ್ವಯಿಸುತ್ತವೆ. ಒಮ್ಮೆ ವೇತನಾನುದಾನಕ್ಕೆ ಒಳಪಟ್ಟ ಮೇಲೆ ಈ ಎಲ್ಲಾ ಸಂಸ್ಥೆಗಳ ಅಧ್ಯಾಪಕರು ಒಂದೇ ನಿಯಮದಡಿ ಬರುತ್ತಾರೆ. ನೇಮಕಾತಿ ನಿಯಮಗಳೂ ಕೂಡ ಎಲ್ಲರಿಗೂ ಒಂದೇ ರೀತಿಯಾಗಿರುತ್ತವೆ. ಉದಾಹರಣೆಗೆ, ಈ ಹಂತದಲ್ಲಿ ಬೋಧಿಸುವ ಖಾಸಗಿ ಹಾಗೂ ಸರ್ಕಾರಿ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸುವ ಎಲ್ಲಾ ಅಧ್ಯಾಪಕರು ಕಡ್ಡಾಯವಾಗಿ ಸ್ಲೆಟ್/ನೆಟ್ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು. ಇಲ್ಲವೇ ಪಿಎಚ್.ಡಿ. ಪದವಿಯನ್ನು ಪಡೆದಿರಬೇಕು. ಹಾಗೆಯೇ ಖಾಸಗಿ ಕಾಲೇಜುಗಳು ಯುಜಿಸಿಯ ಶೈಕ್ಷಣಿಕ ಉನ್ನತಿಗೆ ಪೂರಕವಾಗಿರುವ ಎಲ್ಲಾ ಪ್ರೋತ್ಸಾಹದಾಯಕ ಸೌಲಭ್ಯಗಳನ್ನು ಪಡೆಯುವ ಅರ್ಹತೆಯನ್ನು ಹೊಂದಿದ್ದಾರೆ. ಆದರೆ ಆ ಸಂಸ್ಥೆಗಳು ಯುಜಿಸಿಯ ಬಹು ಸರಳ ನಿಬಂಧನೆಯಾಗಿರುವ ೧೨ಬಿ, ೨ಎಫ್ ಮಾನ್ಯತೆಯನ್ನು ಪಡೆಯುವುದು ಅನಿವಾರ್ಯವಾಗಿದೆ. ಹಾಗಾಗಿ ಉನ್ನತ ಶಿಕ್ಷಣ ಹಂತದಲ್ಲಿ ಬೋಧಿಸುವ ಅಧ್ಯಾಪಕರೆಲ್ಲರೂ ಅಗತ್ಯವಾಗಿ ಕಾಲಕ್ಕೆ ಅನುಗುಣವಾದ ಅರ್ಹತೆ, ಜವಾಬ್ದಾರಿ ಮತ್ತು ಬದ್ಧತೆಗಳನ್ನು ಹೊಂದಿರಬೇಕಾದುದು ಕಡ್ಡಾಯವಾಗಿದೆ. ಇದರಿಂದ ಯುಜಿಸಿ ಸಂಬಳ ಪಡೆಯುವ ಪ್ರತಿಯೊಬ್ಬ ಅಧ್ಯಾಪಕನೂ ಈ ಜವಾಬ್ದಾರಿಯನ್ನು ಹೊರಲೇಬೇಕಾಗಿದೆ.)

ಆದರೆ ಇಂದಿನ ನಮ್ಮ ಅಧ್ಯಾಪಕ ವರ್ಗದ ಬಹುತೇಕರಿಂದ ನಿರೀಕ್ಷಿಸಿದಷ್ಟು ಪ್ರತಿಫಲ ಸಿಕ್ಕಿಲ್ಲ ಎಂಬುದು ಎಲ್ಲರಿಗೂ ಮೇಲ್ನೋಟಕ್ಕೆ ಕಾಣುತ್ತಿದೆ. ಉನ್ನತ ಶಿಕ್ಷಣದ ಬಹುಪಾಲು ಅಧ್ಯಾಪಕ ವರ್ಗ ತಮ್ಮ ಕರ್ತವ್ಯ ಮತ್ತು ಜವಾಬ್ದಾರಿಗಳ ಬಗ್ಗೆ ಹೆಚ್ಚಿಗೆ ತಲೆಕೆಡಿಸಿಕೊಳ್ಳದೆ ಕೇವಲ ತಮಗೆ ಬರಬೇಕಾದ ವೇತನ, ಭತ್ಯೆ ಮತ್ತು ರಜಾ ಸೌಲಭ್ಯಗಳ ಬಗ್ಗೆ ಆಸಕ್ತರಾಗಿದ್ದಾರೆ. ಈ ನಡತೆ ಉನ್ನತ ಶಿಕ್ಷಣ ವ್ಯವಸ್ಥೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಎಲ್ಲಾ ಬೋಧಕರಲ್ಲಿ ಇದೆ ಎಂದು ಸರಾಸಗಟಾಗಿ ಹೇಳಿ ಸಾಮಾನ್ಯೀಕರಿಸುವುದು ತಪ್ಪಾಗುತ್ತದೆ. ನಮ್ಮ ಅಧ್ಯಾಪಕರಲ್ಲಿ ಕೆಲವರಾದರೂ ನಿಜವಾದ ಬದ್ಧತೆಯೊಂದಿಗೆ ಸಮರ್ಥವಾಗಿ ಕರ್ತವ್ಯ ನಿರ್ವಹಿಸುತ್ತಾ; ಕಾಲಕಾಲಕ್ಕೆ ಬೇಕಾದ ಉನ್ನತೀಕರಿಸಿದ ಜ್ಞಾನವನ್ನು ಪಡೆದು ಸಮಾಜದ ಅಗತ್ಯಗಳನ್ನು ಈಡೇರಿಸುತ್ತಿದ್ದಾರೆ. ಆದರೆ ಇಂತಹವರ ಪ್ರಮಾಣ ತುಂಬ ಕಡಿಮೆ. ಇದರಿಂದಾಗಿ ಉನ್ನತ ಶಿಕ್ಷಣದ ಧ್ಯೇಯೋದ್ದೇಶಗಳಿಗೆ ಕೊಡಲಿಪೆಟ್ಟು ಬಿದ್ದಂತಾಗಿದೆ. ಹಾಗಾದರೆ ಇಂದು ಉನ್ನತ ಶಿಕ್ಷಣ ಕ್ಷೇತ್ರದ ಬಹುತೇಕ ಅಧ್ಯಾಪಕರಲ್ಲಿ ಎದ್ದು ಕಾಣುತ್ತಿರುವ ಕೊರತೆಗಳ್ಯಾವುವು ಎಂಬುದನ್ನು ಈ ಮುಂದಿನಂತೆ ವಿವರಿಸಬಹುದು.

**೧. ಜ್ಞಾನದ ಕೊರತೆ**

ಇಂದಿನ ಉನ್ನತ ಶಿಕ್ಷಣ ಹಂತದಲ್ಲಿ ಕಾರ್ಯ ನಿರ್ವಹಿಸುವ ಅಧ್ಯಾಪಕರಲ್ಲಿ ಇರುವ ಪ್ರಮುಖ ಕೊರತೆ ಇದು. ಈ ಹಂತದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಹಲವರು ಇರುವ ಜ್ಞಾನವನ್ನು ಕೇವಲ ಪುನರ್ ಉತ್ಪಾದಿಸುವ ಕೆಲಸದಲ್ಲಿ ನಿರತರಾಗಿದ್ದಾರೆ. ತಮಗೆ ನಿಗದಿಪಡಿಸಿದ ಪಠ್ಯವನ್ನು ಸಾರರೂಪದಲ್ಲಿ ಕಾಲಮಿತಿಯೊಳಗೆ ಮುಗಿಸಿಕೊಡುವುದು ಮಾತ್ರ ನಮ್ಮ ಕರ್ತವ್ಯ ಎಂಬ ದೃಢವಾದ ಭಾವನೆಯಲ್ಲಿದ್ದಾರೆ. ಹಾಗಾಗಿ ಇಂಥ ಅಧ್ಯಾಪಕರು ತಮ್ಮ ಓದಿನ ವ್ಯಾಪ್ತಿಯನ್ನು ಪಠ್ಯದಲ್ಲಿ ಸೇರಿಸಿರುವ ವಿಷಯಕ್ಕೆ ಮಾತ್ರ ಸೀಮಿತಗೊಳಿಸಿಕೊಂಡ ಪರಿಣಾಮ ಈ ಬಗ್ಗೆ ಬಂದಿರುವ ಉನ್ನತೀಕರಿಸಿದ ಜ್ಞಾನವನ್ನು ತಿಳಿದು ವಿದ್ಯಾರ್ಥಿಗಳ ಗಮನಕ್ಕೆ ತರುವುದಾಗಲಿ ಅಥವಾ ತಮ್ಮ ಕ್ಷೇತ್ರದ ಇರುವ ಜ್ಞಾನವನ್ನು ಉನ್ನತೀಕರಿಸುವ ಪ್ರಯತ್ನಗಳನ್ನಾಗಲಿ ಮಾಡುತ್ತಿಲ್ಲ. ವಿದ್ಯಾರ್ಥಿಗಳು ನಿಗದಿ ಮಾಡಿದ ಪಠ್ಯಗಳನ್ನು ಉತ್ತಮವಾಗಿ ನೆನಪಿಟ್ಟುಕೊಂಡು ಅದನ್ನು ಪರೀಕ್ಷೆಯಲ್ಲಿ ಬರೆದು ಉತ್ತಮ ಅಂಕಗಳನ್ನು ಪಡೆದು ಯಾವುದಾದರೂ ಒಂದು ಉದ್ಯೋಗ ಪಡೆಯುವಂತಾಗಬೇಕೆಂಬುದು ಇವರ ಅಂತಿಮ ಹಾಗೂ ಏಕಮಾತ್ರ ಉದ್ದೇಶವಾಗಿದೆ. ಇಂಥ ತಿಳುವಳಿಕೆಯಿಂದಾಗಿ ನಮ್ಮ ಅಧ್ಯಾಪಕರಲ್ಲಿ ಎಂಥ ದಾರಿದ್ರ್ಯತನ ಬಂದಿದೆ ಎಂದರೆ, ಎಷ್ಟೋ ವರ್ಷಗಳ ಹಿಂದೆ ಯಾರೋ ಬರೆದಿಟ್ಟ ನೋಟ್ಸ್ ಇವರ ಪ್ರಮುಖ ಆಕರ ಗ್ರಂಥ. ಪಠ್ಯಪುಸ್ತಕ ಬಿಟ್ಟು ಬೇರೇನನ್ನು ಓದುವುದಿಲ್ಲ, ಬೋಧಿಸುವುದಿಲ್ಲ. ಅಷ್ಟೇ ಅಲ್ಲ, ವಿದ್ಯಾರ್ಥಿಯ ಜ್ಞಾನ ಪರೀಕ್ಷೆಯಲ್ಲಿ ಪ್ರಶ್ನೆ ಪತ್ರಿಕೆ ತಯಾರಿಸುವವರೂ ಇವರೇ ಆದ್ದರಿಂದ ಅಲ್ಲಿಯೂ ತಮ್ಮ ಸಾಂಪ್ರದಾಯಿಕತೆ ವಿಜೃಂಭಿಸುತ್ತಿದೆ. ಇದರ ಪರಿಣಾಮ ವಿದ್ಯಾರ್ಥಿಗಳಿಗೆ ಕೇವಲ ಅಂಕಪಟ್ಟಿಯಲ್ಲಿ ಅಂಕಗಳು ಸಮೃದ್ಧವಾಗಿ ಲಭಿಸುವುದನ್ನು ಹೊರತುಪಡಿಸಿ ಅದರಾಚೆಗೆ ನಿಜವಾಗಿ ವಿದ್ಯಾರ್ಥಿಗಿರಬೇಕಾದ ಆನ್ವಯಿಕ ಜ್ಞಾನ ದೊರೆಯುತ್ತಿಲ್ಲ. ಇದರ ಪರಿಣಾಮವಾಗಿ ಇಲ್ಲಿ ಕಲಿತ ವಿದ್ಯಾರ್ಥಿಗಳು ಸ್ಪರ್ಧಾತ್ಮಕ ಜಗತ್ತಿನಲ್ಲಿ ಬದುಕು ಕಟ್ಟಿಕೊಳ್ಳುವಲ್ಲಿ ವಿಫಲರಾಗಿದ್ದಾರೆ. ಅಷ್ಟೇ ಅಲ್ಲ, ಶಿಕ್ಷಣವಂತರಾದ ಇವರು ಸಮಾಜ ವಿರೋಧಿ ಚಟುವಟಿಕೆಗಳಲ್ಲಿ ಆಸಕ್ತರಾಗುವಂತಾಗಿದೆ.

**೨. ವೃತ್ತಿ ಕೌಶಲ್ಯಗಳ ಅಭಿವೃದ್ಧಿಯ ಕೊರತೆ**

ಅಧ್ಯಾಪಕರಾದವರು ಸದಾ ಅಧ್ಯಯನಶೀಲರು, ಸಂಶೋಧಕರು ಆಗಿರಬೇಕಾಗುತ್ತದೆ. ಆದರೆ ನಮ್ಮ ಕಾಲದ ಬಹುಪಾಲು ಅಧ್ಯಾಪಕರು ಈ ಬಗ್ಗೆ ಅತ್ಯಂತ ನಿರ್ಲಕ್ಷ್ಯದ ಧೋರಣೆಯನ್ನು ತಳೆದಿರುವುದು ಕಂಡುಬರುತ್ತದೆ. ಉನ್ನತ ಶಿಕ್ಷಣ ವ್ಯವಸ್ಥೆಯಲ್ಲಿ ಅಧ್ಯಾಪಕರು ತಮ್ಮ ವೃತ್ತಿ ಕೌಶಲ್ಯಗಳನ್ನು ಉನ್ನತೀಕರಿಸಿಕೊಳ್ಳುವ ಸಲುವಾಗಿಯೇ ಯು.ಜಿ.ಸಿ. ಅನೇಕ ಉತ್ತಮ ನಿಯಮಗಳನ್ನು ರೂಪಿಸಿ ವಿಶೇಷ ಅವಕಾಶಗಳನ್ನು ಮಾಡಿಕೊಟ್ಟಿದೆ. ಅಂಥ ಬೆಳವಣಿಗೆಯನ್ನು ಅಧ್ಯಾಪಕರ ವೇತನ ಸೌಲಭ್ಯಗಳ ಜೊತೆ ಬೆಸೆದಿದೆ. ಉದಾಹರಣೆ :

* ಕಾಲೇಜುಗಳಲ್ಲಿ ಬೋಧನೆ ಮಾಡುವ ಬೋಧಕರಿಗೆ ಜ್ಞಾನ ಪಡೆಯುವ ಭಾಗವಾಗಿ ವಿಚಾರಸಂಕಿರಣಗಳಲ್ಲಿ ಭಾಗವಹಿಸಲು, ಪ್ರಬಂಧ ಮಂಡಿಸಲು ರಜೆ ಹಾಗೂ ಆರ್ಥಿಕ ಸಹಕಾರವನ್ನು ನೀಡಲಾಗಿದೆ.
* ತಮ್ಮ ವಿದ್ಯಾರ್ಹತೆಯನ್ನು ಹೆಚ್ಚಿಸಿಕೊಳ್ಳಲು ವೇತನ ಸಹಿತ ರಜೆ ನೀಡುವುದಲ್ಲದೆ ವಾರ್ಷಿಕ ಹೆಚ್ಚುವರಿ ಆನುಷಂಗಿಕ ಮೊತ್ತವನ್ನು ನೀಡುವ ಎಫ್.ಡಿ.ಪಿ. ಯೋಜನೆ.
* ತಮ್ಮ ಬೋಧನಾ ವಿಷಯಗಳಲ್ಲಿ ಉತ್ತಮ ಸಂಶೋಧನೆಗಳನ್ನು ನಡೆಸಲು ಪ್ರಧಾನ ಮತ್ತು ಕಿರು ಸಂಶೋಧನಾ ಯೋಜನೆಗಳನ್ನು ಜಾರಿಮಾಡಿ ಆಕರ್ಷಕ ಧನ ಸಹಾಯ ನೀಡುವ ಯೋಜನೆ.
* ದೇಶ ವಿದೇಶಗಳ ಉನ್ನತ ಸಂಶೋಧನಾ ಸಂಸ್ಥೆಗಳ ಸಹಯೋಗದಲ್ಲಿ ಮೌಲ್ಯಾಧಾರಿತ ಸಂಶೋಧನೆ ನಡೆಸಲು ರಾಧಾಕೃಷ್ಣನ್, ರಾಮನ್ ಹೆಸರಿನ ಪಿಡಿಎಫ್ ಸಂಶೋಧನಾ ಯೋಜನೆಗಳನ್ನು ಜಾರಿಗೆ ತರಲಾಗಿದೆ.
* ಬೋಧನೆಯ ಸಮಯದಲ್ಲಿ ಸಂಶೋಧನೆಗೆ ಸಮಯ ಸಿಗುವುದಿಲ್ಲ ಎಂಬ ಕಾರಣದಿಂದಾಗಿ ಒಂದು ಅಥವಾ ಎರಡು ವರ್ಷಗಳ ವಿಶೇಷ ರಜೆ ನೀಡಿದ್ದಲ್ಲದೆ, ಸಂಶೋಧನೆಗೆ ಅಗತ್ಯವಿರುವ ಧನಸಹಾಯ ನೀಡುವ ರೀಸರ್ಚ್ ಅವಾರ್ಡ್ ಯೋಜನೆ ಜಾರಿಯಲ್ಲಿದೆ.

ಇಂಥ ಹತ್ತಾರು ಯೋಜನೆಗಳು ಜಾರಿಯಲ್ಲಿದ್ದು, ಈ ಸೌಲಭ್ಯಗಳಿಗಾಗಿ

ಮೀಸಲಿರಿಸಿದ ಹಣ ಖರ್ಚಾಗುತ್ತಿದೆ. ಆದರೂ ಫಲಿತಾಂಶ ಮಾತ್ರ ಶೂನ್ಯ. ಈ ಯೋಜನೆಗಳ ಫಲಾನುಭವಿಗಳು ವೃತ್ತಿ ಕೌಶಲ್ಯಗಳನ್ನು ಅಭಿವೃದ್ಧಿಪಡಿಸಿಕೊಳ್ಳುವ ಬದಲಿಗೆ ನಾಮಕಾವಸ್ತೆಗೆ ವಾಮಮಾರ್ಗಗಳಿಂದ ಪಡೆದ ಪ್ರಮಾಣ ಪತ್ರಗಳನ್ನು ನೀಡುವುದರ ಮೂಲಕ ಮತ್ತು ಕೃತಿಚೌರ್ಯದ ಸಂಶೋಧನಾ ವರದಿಗಳನ್ನು ನೀಡಿ ಯೋಜನೆಗಳ ಮೂಲ ಉದ್ದೇಶಗಳನ್ನು ಭಗ್ನಗೊಳಿಸುತ್ತಿರುವುದು ಕಂಡುಬರುತ್ತಿದೆ. ಇಷ್ಟೇ ಅಲ್ಲದೆ ಅಧ್ಯಾಪಕರ ಈ ವೃತ್ತಿ ಬೆಳವಣಿಗೆಯನ್ನು ಅವರ ವೇತನ ಮತ್ತು ಪದೋನ್ನತಿಗೆ ಜೋಡಿಸಿದ ಪ್ರಕ್ರಿಯೆಯಲ್ಲಿ ಅಧ್ಯಾಪಕರು ಕಾಗದ ಪತ್ರಗಳ ಮೂಲಕ ತಮ್ಮ ಪ್ರೊಫೈಲ್‌ಗಳನ್ನು ದೊಡ್ಡದು ಮಾಡಿಕೊಂಡಿದ್ದಾರೆಯೇ ಹೊರತು ಅದನ್ನು ತಮ್ಮ ಜ್ಞಾನವಾಗಿ ಪರಿವರ್ತಿಸಿಕೊಂಡಿಲ್ಲ. ಭವಿಷ್ಯವನ್ನು ರೂಪಿಸಿಕೊಳ್ಳುವ ವಿದ್ಯಾರ್ಥಿಗಳು ಹಾಗೂ ಅಂಥ ಸೇವೆಯ ನಿರೀಕ್ಷೆಯಲ್ಲಿದ್ದ ಸಮಾಜ ಇದರ ದುಷ್ಪರಿಣಾಮಗಳನ್ನು ಎದುರಿಸುವಂತಾಗಿದೆ. ಹಾಗಾಗಿ ನಮ್ಮ ಬೋಧಕವರ್ಗ ಸರ್ಕಾರ ನೀಡಿರುವ ಈ ಯೋಜನೆಗಳನ್ನು ಸಕಾರಾತ್ಮಕವಾಗಿ ಬಳಸಿಕೊಂಡು ಅವುಗಳ ಮೂಲೋದ್ದೇಶಗಳಿಗೆ ಅನುಗುಣವಾಗಿ ಫಲಿತಗಳನ್ನು ನೀಡುವುದರ ಮೂಲಕ ನಿಜವಾದ ಬೋಧಕರೆನಿಸಿಕೊಳ್ಳಬೇಕಾದುದು ಅನಿವಾರ್ಯವಾಗಿದೆ.

ಇನ್ನೂ ನಮ್ಮ ಉನ್ನತ ಶಿಕ್ಷಣ ಕ್ಷೇತ್ರದ ಅಧ್ಯಾಪಕರು ಅನುಭವಿಸುತ್ತಿರುವ ಮತ್ತೊಂದು ಕೊರತೆ ಜ್ಞಾನಾಧಾರಿತ ಸಂಪನ್ಮೂಲಗಳನ್ನು ಪಡೆಯುವ ಹಾಗೂ ಅದನ್ನು ಆಧುನಿಕ ಬೋಧನಾ ವಿಧಾನಗಳಿಂದ ವಿದ್ಯಾರ್ಥಿಗಳಿಗೆ ತಲುಪಿಸುವ ಕ್ರಮಕ್ಕೆ ಸಂಬಂಧಿಸಿದೆ. ಇದು ಡಿಜಿಟಲ್ ಯುಗ; ಈಗ ಎಲ್ಲಾ ತರಹದ ಮಾಹಿತಿಗಳು ಅಂತರ್ಜಾಲದಲ್ಲಿ ದೊರೆಯುತ್ತವೆ. ಹಾಗೆಯೇ ಮಾಹಿತಿ ತಂತ್ರಜ್ಞಾನದ ಫಲವಾಗಿ ಸ್ಮಾರ್ಟ್ ಬೋರ್ಡ್, ಕಂಪ್ಯೂಟರ್ ಮೊದಲಾದ ಸಾಧನಗಳು ಪರಿಣಾಮಕಾರಿ ಸಂವಹನಕ್ಕೆ ಸಹಕಾರಿಯಾಗುತ್ತಿವೆ. ಇದಕ್ಕೆ ಪೂರಕವಾಗಿ ಸರ್ಕಾರಗಳು ಕೂಡ ಅನೇಕ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಡುತ್ತಿದೆ. ಇಂಥ ಎಲ್ಲ ಸೌಲಭ್ಯಗಳ ನಡುವೆಯೂ ನಮ್ಮ ಅಧ್ಯಾಪಕ ವರ್ಗ ಆಧುನಿಕ ಮಾಧ್ಯಮಗಳ ಮೂಲಕ ಮಾಹಿತಿ ಸಂಗ್ರಹಿಸುವುದಾಗಲಿ, ಆಧುನಿಕ ಬೋಧನಾ ಮಾಧ್ಯಮಗಳ ಮೂಲಕ ಬೋಧಿಸುವುದಾಗಲಿ ಸಮರ್ಥವಾಗಿ ಕಲಿತಿಲ್ಲ. ಇದರ ಬದಲಿಗೆ ಸಾಂಪ್ರದಾಯಿಕ ಬೋಧನಾ ವಿಧಾನಗಳಾದ ಕಪ್ಪುಹಲಗೆ ಮತ್ತು ಸೀಮೆಸುಣ್ಣವನ್ನೇ ಅವಲಂಬಿಸಿದ್ದಾರೆ. ಮೊಬೈಲ್‌ಗಳಂಥ ಚಿಕ್ಕ ಮಾಧ್ಯಮಗಳಿಂದ ವಿದ್ಯಾರ್ಥಿಗಳಿಗೆ ಆಸಕ್ತಿದಾಯಕ ಶಿಕ್ಷಣವನ್ನು ನೀಡುವ ಅವಕಾಶವಿದ್ದಾಗಲೂ ನಮ್ಮಲ್ಲಿ ವಿದ್ಯಾರ್ಥಿಗಳು ಮೊಬೈಲ್‌ಗಳನ್ನು ಕಾಲೇಜು ಆವರಣಕ್ಕೆ ತರದಂತೆ ನಿರ್ಬಂಧಿಸುವ ಕಾನೂನುಗಳನ್ನು ಮಾಡಿಕೊಂಡಿದ್ದೇವೆ. ವಿದ್ಯಾರ್ಥಿಗಳು ಮೊಬೈಲ್‌ಗಳನ್ನು ಬೇಡವಾದ ಕಾರ್ಯಗಳಿಗೆ ಉಪಯೋಗಿಸುತ್ತಿರುವುದನ್ನು ತಪ್ಪಿಸುವುದು ಕೂಡ ಇದರಿಂದ ನಿಜವಾಗಿ ಸಾಧ್ಯವಿತ್ತು. ಆದರೆ ಅದು ನಮ್ಮಿಂದ ಸಾಧ್ಯವಾಗಿಲ್ಲ. ಇನ್ನು ಮುಂದಿನ ದಿನಗಳಲ್ಲಾದರೂ ಈ ಬಗ್ಗೆ ನಮ್ಮ ಅಧ್ಯಾಪಕ ವರ್ಗ ಗಂಭೀರವಾಗಿ ಚಿಂತಿಸುವ ಅವಶ್ಯಕತೆಯಿದೆ. ಒಟ್ಟಾರೆ ಸಂವಹನ ಮತ್ತು ಮಾಹಿತಿ ತಂತ್ರಜ್ಞಾನವನ್ನು ಸದ್ಬಳಕೆ ಮಾಡಿಕೊಳ್ಳುವುದರ ಮೂಲಕ ನಮ್ಮ ಅಧ್ಯಯನ ಮತ್ತು ಬೋಧನಾ ವಿಧಾನಗಳನ್ನು ಉನ್ನತೀಕರಿಸಿಕೊಳ್ಳಬೇಕಿದೆ.

**೩. ಕುಶಲತೆ ಮತ್ತು ಮೌಲ್ಯಗಳ ಅಭಿವೃದ್ಧಿಯ ಕೊರತೆ**

ನಮ್ಮ ಉನ್ನತ ಶಿಕ್ಷಣ ಕ್ಷೇತ್ರ ಎದುರಿಸುತ್ತಿರುವ ಮತ್ತೊಂದು ಬಹುದೊಡ್ಡ ಕೊರತೆಯೆಂದರೆ, ಕಲಿಕಾರ್ಥಿಗಳಲ್ಲಿ ತಮ್ಮ ಭವಿಷ್ಯದ ಜೀವನ ಮತ್ತು ವೃತ್ತಿಗಳಿಗೆ ಸಂಬಂಧಿಸಿದ ಕೌಶಲ್ಯಗಳನ್ನು ಕಲಿಸುವುದರಲ್ಲಿ ಸೋತಿರುವುದು. ಗ್ರಾಮ್ಷಿ ಹೇಳಿರುವ ಸಾಂಪ್ರದಾಯಿಕ ಬುದ್ಧಿಜೀವಿ ಅಧ್ಯಾಪಕರೇ ಹೆಚ್ಚಾಗಿರುವ ಈ ಕ್ಷೇತ್ರದಲ್ಲಿ ಇರುವ ಜ್ಞಾನವನ್ನು ಪುನರ್ ಪರಿಶೀಲಿಸದೆ ಯಥಾಸ್ಥಿತಿಯಾಗಿ ಕಲಿಸುವುದು ಸಾಮಾನ್ಯವಾಗಿಬಿಟ್ಟಿದೆ. ಹಾಗಾಗಿ ನಮ್ಮ ಕಾಲೇಜು ಮತ್ತು ವಿಶ್ವವಿದ್ಯಾಲಯಗಳಲ್ಲಿ ಕಲಿತ ಮಕ್ಕಳು ಹೊಸ ಜ್ಞಾನದ ಕಡೆ ಚಲಿಸಲು ಸಾಧ್ಯವಾಗಿಲ್ಲ. ಪಠ್ಯಕ್ರಮಗಳು ಸ್ವಲ್ಪಮಟ್ಟಿಗೆ ಹೊಸತನದ ಕಡೆಗೆ ಕೊಂಡೊಯ್ಯುವ ಆಶಯಗಳನ್ನು ಹೊಂದಿದ್ದರೂ ಅಧ್ಯಾಪಕರಲ್ಲಿ ಅದಕ್ಕೆ ಬೇಕಾಗುವ ಮನಸ್ಸು ಮತ್ತು ಶ್ರಮ ಇಲ್ಲವಾದ ಪರಿಣಾಮ ಅದು ಸಾಧ್ಯವಾಗಿಲ್ಲ. ಪರಿಣಾಮವಾಗಿ ಸಮಕಾಲೀನ ಉದ್ಯೋಗ ಕ್ಷೇತ್ರ ಬಯಸುವ ಪ್ರತಿಭೆಗಳ ಕೊರತೆ ಕಾಣುತ್ತಿದೆ. ಪದವಿಗಳನ್ನು ಉತ್ತಮ ಅಂಕಗಳೊಂದಿಗೆ

# ಅಲ್ಲಿ ಯಾರೋ ಕಿರಚುತ್ತಿದ್ದಾರೆ

**ಕುಮಾರ ಇಂದ್ರಬೆಟ್ಟ**
ಸಂಶೋಧನ ವಿದ್ಯಾರ್ಥಿ, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ
ಜ್ಞಾನಭಾರತಿ ಆವರಣ, ಬೆಂಗಳೂರು – ೫೬೦೦೫೬



**ಅಲ್ಲಿ** ಯಾರೋ ಕಿರಚುತ್ತಿದ್ದಾರೆ
ಹಾಡಹಗಲಿನಲ್ಲಿ, ಹುಳ ಬಿದ್ದ ರಾತ್ರಿಗಳಲ್ಲಿ
ವಟಗುಟ್ಟುತಿರುವ ಜನಜಂಗುಳಿಯಲ್ಲಿ
ಬಟಾಬಯಲಿಗೂ ಬೇನೆಯಾಗುವ ಹಾಗೆ
ಅರಚುವ ಶಬ್ದಕ್ಕೂ ಶನಿ ಹಿಡಿದಂತೆ, ಸನ್ನಿ ಬಡಿದಂತೆ
ಕಿಟಾರನೆ ಕಿರಚುತ್ತಿದ್ದಾರೆ

ಅಲ್ಲಿ ಯಾರೋ ನರಳುತ್ತಿದ್ದಾರೆ
ಪ್ರೇತಾತ್ಮಗಳ ಹಾಗೆ ಪರಂಪರೆಯಿಂದಲೂ
ಹಿತ್ತಲು ಮನೆಯ ಹೊಸ್ತಿಲಿನ ಒಸಡುಗಳಲ್ಲಿ
ಹುಳುಗಳ ಹಾಗೆ ಮಿಸುಕಾಡುತ್ತಲೇ ಇದ್ದಾರೆ
ತೋಟದ ಬದುಗಳಲ್ಲಿ ಕಾಲಿಡುವಂತೆ
ಪಾದಗಳನ್ನು ಮೆಲ್ಲಗೆ ಎಸೆಯುತ್ತಲೇ ಇದ್ದಾರೆ
ಸವೆದ ಪಾದಗಳ ಚರಿತ್ರೆಯನ್ನು
ಹರಪ್ಪಾ ಮೊಹೆಂಜೋದಾರೊಗಳಲ್ಲಿ
ಉತ್ಖನನ ಮಾಡುತ್ತಲೇ ಇದ್ದಾರೆ
ಹೆಬ್ಬೆರಳಿಗಾದ ನೋವನ್ನು ಸ್ಕ್ಯಾನ್ ಮಾಡಿಕೊಂಡು
ವಿಧಿವಿಜ್ಞಾನದ ಪ್ರಯೋಗಾಲಯಕ್ಕೆ ಕಳುಹಿಸುತ್ತಿದ್ದಾರೆ

ಯಾವುದೋ ಅನಾಥ ಕಣ್ಣುಗಳು ಗಳಗಳನೆ ಅಳುತ್ತಿದ್ದಾವೆ
ಸ್ಥಿತಿವಂತರ ಕರಳುಬಳ್ಳಿಗಳು
ವೃದ್ಧಾಶ್ರಮದಲ್ಲಿ ಕಣ್ಣೀರು ಹಾಕುತ್ತಿದ್ದಾರೆ
ಹತ್ತಿ-ಬೀಜ ಬೇರ್ಪಡಿಸಿದ ಹಾಗೆ
ಬಿಡಿಬಿಡಿಯಾಗುತ್ತಿದ್ದಾರೆ
ಹತ್ತಿಗೂ ನೋವಾಗುವಂತೆ ನೆತ್ತರಾಗುತ್ತಿದ್ದಾರೆ

ಅಲ್ಲಿ ಯಾರೋ ನಗುತ್ತಿದ್ದಾರೆ
ಬಂದೂಕಿನ ಬಾಯಲ್ಲಿ
ಗೂಡು ಕಟ್ಟಲು ಬಂದ ಹಕ್ಕಿಗಳನ್ನು
ಹಾರಿಸಿದೆವೆಂದು ನಗುತ್ತಿದ್ದಾರೆ
ಬಂದೂಕಿಗೂ ಕೇಳಿಸದ ಹಾಗೆ
ಒಳಗೊಳಗೆ ನಗುತ್ತಿದ್ದಾರೆ

ಪೂರೈಸಿದವರ ಸಂಖ್ಯೆ ವಿಪುಲವಾಗಿದೆಯಾದರೂ ಉದ್ಯೋಗಗಳನ್ನು ಪಡೆಯುವವರ ಸಂಖ್ಯೆ ತೀರಾ ವಿರಳವಾಗಿದೆ. ಹಾಗಾಗಿ ಈ ದಿಕ್ಕಿನಲ್ಲಿ ತುಂಬ ಗಂಭೀರವಾಗಿ ಚಿಂತಿಸುವ ಕಾಲ ಇದಾಗಿದೆ. ಇದು ಸಾಧ್ಯವಾಗದಿದ್ದರೆ ಉನ್ನತ ಶಿಕ್ಷಣದ ತಳಹದಿ ಇನ್ನೂ ಸಡಿಲವಾಗುವ ಸಂಭವ ಹೆಚ್ಚಿದೆ.

ಶಿಕ್ಷಣದಲ್ಲಿ ವೃತ್ತಿ ಕೌಶಲ್ಯಗಳ ಗಳಿಕೆ ಎಷ್ಟು ಪ್ರಮುಖವೋ ಅದಕ್ಕಿಂತ ಹೆಚ್ಚಿನ ಪ್ರಾಮುಖ್ಯತೆ ಇರುವುದು ಜೀವನ ಕೌಶಲ್ಯಗಳಿಗೆ. ಆದರೆ ಇಂದು ಈ ಜೀವನ ಮೌಲ್ಯಗಳನ್ನು ಕಲಿಸುವ ಪಾರ್ಶ್ವ ಊನವಾಗಿದೆ. ಶಿಕ್ಷಣ ಸಂರಚನೆಯಲ್ಲಿ ಭಾಷಾ ವಿಷಯ ಹಾಗೂ ಐಚ್ಛಿಕ ವಿಷಯಗಳೆರಡರಲ್ಲಿ ಜೀವನ ಮೌಲ್ಯಗಳನ್ನು ಹೇಳಿಕೊಡುವ ಜವಾಬ್ದಾರಿ ಅನಾಯಾಸವಾಗಿ ಭಾಷಾ ವಿಷಯಗಳನ್ನು ಬೋಧಿಸುವ ಅಧ್ಯಾಪಕರಿಗೆ ಮೀಸಲಾಗಿಬಿಟ್ಟಿದೆ. ಉಳಿದ ಐಚ್ಛಿಕ ವಿಷಯದ ಅಧ್ಯಾಪಕರು ಈ ಕೆಲಸ ನಮ್ಮದಲ್ಲ ಎನ್ನುವಂತೆ ವರ್ತಿಸುತ್ತಿದ್ದಾರೆ. ಭಾಷಾ ಅಧ್ಯಾಪಕರು ಭಾಷಾ ಕೌಶಲ್ಯಗಳನ್ನು ಕಲಿಸುವ ಜೊತೆಗೆ ಸಾಹಿತ್ಯ ಪಠ್ಯಗಳ ಮೂಲಕ ಕಾಲಕ್ಕೆ ಅಗತ್ಯವಿರುವ ಜೀವನ ಮೌಲ್ಯಗಳನ್ನು ಕಲಿಸಿ ಕೊಡುವ ಪ್ರಯತ್ನಮಾಡುತ್ತಿದ್ದಾರೆ. ಆದರೆ ಇತ್ತೀಚೆಗೆ ಸಿಬಿಸಿಎಸ್ ಹೆಸರಿನ ನವೀನ ಸಂರಚನೆಯನ್ನು ರೂಪಿಸಲು ಹೊರಟಿರುವ ವ್ಯವಸ್ಥೆ ಭಾಷಾ ವಿಷಯಗಳನ್ನು ಕಡೆಗಣಿಸಿ ಅವುಗಳ ಸ್ಥಾನವನ್ನು ಗೌಣಗೊಳಿಸುವ ಪ್ರಯತ್ನ ಮಾಡಿದೆ. ಇದು ಯಥಾಸ್ಥಿತಿ ಜಾರಿಯಾದದ್ದೇ ಆದರೆ ವಿದ್ಯಾರ್ಥಿಗಳಿಗೆ ಜೀವನ ಮೌಲ್ಯಗಳನ್ನು ಕಲಿಸುವ ಪ್ರಕ್ರಿಯೆಗೆ ಎಳ್ಳು ನೀರು ಬಿಟ್ಟಂತೆಯೇ! ಇತ್ತೀಚಿನ ದಿನಮಾನಗಳಲ್ಲಿ ಸಾಕಷ್ಟು ದೊಡ್ಡ ದೊಡ್ಡ ವಿದ್ಯಾವಂತರು ತಮ್ಮ ಕುಟುಂಬ ಮತ್ತು ಸಮಾಜ ಗಳಲ್ಲಿ ತೋರುತ್ತಿರುವ ವರ್ತನೆಗಳನ್ನು ನೋಡಿದರೆ ಅವರಲ್ಲಿ ಜೀವನ ಮೌಲ್ಯಗಳ ಕೊರತೆ ಎದ್ದು ಕಾಣುತ್ತದೆ. ಶಿಕ್ಷಣದ ಅಂತಿಮವಾದ ಉದ್ದೇಶ ಮಾನವನ ಬದುಕನ್ನು ಸುಖಮಯವಾಗಿಸುವುದೇ ಆಗಿದೆ. ಆದರೆ ಈಗಿನ ವಿದ್ಯಾವಂತರಲ್ಲಿ ಅಂಥ ಮೌಲ್ಯಗಳ ಕೊರತೆ ಇರುವ ಕಾರಣದಿಂದಾಗಿ ಇಡೀ ಬದುಕು ಯಾತನಮಯವಾಗಿದೆ. ದೊಡ್ಡ ಮಟ್ಟದ ಸಂಬಳ ಬರುವ ಹುದ್ದೆಯನ್ನು ಪಡೆದ ವ್ಯಕ್ತಿ ತನ್ನ ಕುಟುಂಬದ ಸ್ವಾಸ್ಥ್ಯವನ್ನು ಕಾಯ್ದುಕೊಳ್ಳುವಲ್ಲಿ ವಿಫಲ ರಾಗುತ್ತಿರುವುದು, ಸವಾಲುಗಳನ್ನು ದಿಟ್ಟತನದಿಂದ ಎದುರಿಸಬೇಕಾದ ಉನ್ನತ ಮಟ್ಟದ ಅಧಿಕಾರಿಗಳು ಆತ್ಮಹತ್ಯೆಯಂಥ ಹೇಡಿತನದ ಕೆಲಸಗಳಿಗೆ ಮುಂದಾಗಿರುವುದನ್ನು ಕಂಡರೆ ಖಂಡಿತವಾಗಿಯೂ ನಮ್ಮ ಶಿಕ್ಷಣ ನಮಗೆ ಬೇಕಾದ ಗುಣಗಳನ್ನು ಕಲಿಸಲಿಲ್ಲ ಎಂಬುದು ಮೇಲ್ನೋಟಕ್ಕೆ ತಿಳಿದು ಬರುತ್ತದೆ. ಇದೆಲ್ಲದರ ಜವಾಬ್ದಾರಿಯನ್ನು ನಮ್ಮ ಶಿಕ್ಷಣ ವ್ಯವಸ್ಥೆ ಮತ್ತು ಅದರ ಪ್ರಮುಖ ಪಾತ್ರ ವಹಿಸು ತ್ತಿರುವ ಬೋಧಕವರ್ಗದವರೇ ಹೊರಬೇಕಾಗುತ್ತದೆ. ಮೇಲಿನ ವಿವರಗಳಿಂದ ನಮಗೆ ಮನದಟ್ಟಾಗುವ ಸಂಗತಿಯೆಂದರೆ ನಮ್ಮ ಶಿಕ್ಷಣವ್ಯವಸ್ಥೆ ವೃತ್ತಿ ಮತ್ತು




ಜೀವನಕ್ಕೆ ಸಂಬಂಧಿಸಿದ ಎರಡೂ ರೀತಿಯ ಕೌಶಲ್ಯಗಳನ್ನು ಕಲಿಸುವಲ್ಲಿ ವಿಫಲವಾಗಿರುವುದನ್ನು ನಿರ್ವಿವಾದವಾಗಿ ಒಪ್ಪಿಕೊಳ್ಳಬೇಕಾಗುತ್ತದೆ. ಹಾಗಾಗಿ ಇನ್ನು ಮುಂದಿನ ದಿನಗಳಲ್ಲಾದರೂ ಈ ದೋಷವನ್ನು ಪರಿಹರಿಸುವ ಪ್ರಾಮಾಣಿಕ ಪ್ರಯತ್ನಗಳನ್ನು ಮಾಡಬೇಕಿದೆ.

**೪. ಪರ್ಯಾಯ ಆಲೋಚನೆಗಳ ಪ್ರತಿಷ್ಠಾಪನೆಯ ಕೊರತೆ**

ಇಂದಿನ ಅಧ್ಯಾಪಕವರ್ಗ ಮತ್ತು ಅವರ ತರಗತಿಗಳು ಕೇವಲ ಗಿಳಿಪಾಠ ಒಪ್ಪಿಸುವ ಶಿಬಿರ ಗಳಂತಾಗಿವೆ. ಅತ್ಯಂತ ಅಪಾಯಕಾರಿಯಾದ ಏಕಮುಖಿ ಬೋಧನೆಯ ತಂತ್ರವಾಗಿರುವ ಉಪನ್ಯಾಸ ಪದ್ಧತಿಯನ್ನು ನೆಚ್ಚಿಕೊಂಡಿರುವ ಅಧ್ಯಾಪಕ ವರ್ಗ ತಮಗೆ ನಿಗದಿಯಾದ ಪಠ್ಯವನ್ನು ಸಿಕ್ಕ ತರಗತಿಗಳಲ್ಲಿ ಯಾಂತ್ರಿಕವಾಗಿ ಹೇಳಿ ಮುಗಿಸುವಲ್ಲಿ ಉತ್ಸುಕ ರಾಗಿದ್ದಾರೆ. ಈ ಪ್ರಕ್ರಿಯೆಯಲ್ಲಿ ವಿದ್ಯಾರ್ಥಿಗಳನ್ನು ಕೇವಲ ಕೇಳಿಸಿಕೊಳ್ಳುವ ಯಂತ್ರಗಳಂತೆ ನಡೆಸಿಕೊಳ್ಳ ಲಾಗಿದೆ. ವಿದ್ಯಾರ್ಥಿಗಳೆಂದರೆ ಏನೂ ತಿಳಿಯದಿರುವ ವ್ಯಕ್ತಿಗಳೆಂದು ಭಾವಿಸಿರುವ ಅಧ್ಯಾಪಕ ವರ್ಗ ತಮ್ಮನ್ನು ಮಾತ್ರ ಸರ್ವಜ್ಞರಂತೆ ಬಿಂಬಿಸಿಕೊಂಡಿದ್ದಾರೆ. ಇದರ ಪರಿಣಾಮವಾಗಿ ತರಗತಿಯಲ್ಲಿ ವಿದ್ಯಾರ್ಥಿಗಳ ಆಲೋಚನೆ ಮತ್ತು ಅಭಿವ್ಯಕ್ತಿಗಳಿಗೆ ಸ್ಥಾನವೇ ನೀಡಿಲ್ಲ. ವಿದ್ಯಾರ್ಥಿಗಳನ್ನು ಕಲಿಕಾ ಸಹಪಾಠಿ ಎಂದು ತಿಳಿಯಬೇಕು ಎಂದು ಹೇಳುತ್ತಿರುವ ಶಿಕ್ಷಣ ಕ್ಷೇತ್ರದ ನೀತಿ ನಿರೂಪಕರ ಮಾತುಗಳನ್ನು ಬಹುತೇಕ ಅಧ್ಯಾಪಕರು ಕೇಳಿಸಿಕೊಳ್ಳದ ಮನಸ್ಥಿತಿಯಲ್ಲಿದ್ದಾರೆ. ಇದರಿಂದ ವಿದ್ಯಾರ್ಥಿಗಳಲ್ಲಿರುವ ಅನನ್ಯ ಪ್ರತಿಭೆ ನಂದಿ ಹೋಗುತ್ತಿದೆ. ಒಂದು ವಿಷಯವನ್ನು ಅಧ್ಯಾಪಕರು ನೋಡಿದಂತೆಯೇ ನೋಡಬೇಕು ಎಂಬ ತೀರ್ಮಾನವನ್ನು ವಿದ್ಯಾರ್ಥಿಗಳೆಲ್ಲರೂ ನಂಬಿದ್ದಾರೆ. ಇದರಿಂದ ವೈವಿಧ್ಯಮಯವಾದ ಚಿಂತನೆಗೆ ಇದ್ದ ಹಾದಿಗಳು ಮುಚ್ಚಿದಂತಾಗಿದೆ. ನವ ಪೀಳಿಗೆ ಹೊಸ ಆಲೋಚನೆಗಳು ಹೀಗೆ ಕರಗಿಹೋಗಿರುವ ಈ ವ್ಯವಸ್ಥೆಯಲ್ಲಿ ಹೊಸದನ್ನು ನಿರೀಕ್ಷಿಸುತ್ತಿರುವುದು ವಿಚಿತ್ರವಾಗಿ ಕಾಣುತ್ತಿದೆ. ಈ ಸ್ಥಿತಿ ತೊಲಗಲೇ ಬೇಕು ತರಗತಿಗಳು ಏಕಮುಖವಾಗದೆ ಪರಸ್ಪರ ಕೊಡುಕೊಳ್ಳುವಿಕೆಯ ಸಂವಹನವಾಗಬೇಕು. ವಿದ್ಯಾರ್ಥಿಗಳು ಅಧ್ಯಾಪಕರಷ್ಟು ತಿಳಿದಿರದಿದ್ದರೂ ಅವರಿಗಿಂತ ಬೇರೆಯದೇ ಆದ ಅನುಭವ ಮತ್ತು ಆಲೋಚನೆಗಳನ್ನು ಪಡೆದಿರುತ್ತಾರೆ ಎಂಬುದನ್ನು ಮರೆಯಬಾರದು. ಬೋಧಕರ ಬೋಧನೆಗಳು ವಿದ್ಯಾರ್ಥಿ ಕೇಂದ್ರವಾಗಬೇಕು. ಇದರಿಂದ ಕಳೆದು ಕೊಳ್ಳುವುದೇನೂ ಇರುವುದಿಲ್ಲ. ಪಡೆದುಕೊಳ್ಳುವ ಸಾಧ್ಯತೆಗಳು ಹೆಚ್ಚಿರುತ್ತವೆ. ವಿದ್ಯಾರ್ಥಿಗಳಿಗೆ ಅವರ ಆಲೋಚನೆಗಳನ್ನು ಅಭಿವ್ಯಕ್ತಿಸಲು ಅವಕಾಶ ಕೊಟ್ಟರೆ ಅವರಲ್ಲಿರುವ ಗುಣದೋಷಗಳನ್ನು ತಿಳಿದಂತಾಗುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ಉನ್ನತ ಶಿಕ್ಷಣ ಹಂತದಲ್ಲಿ ಬೋಧಿಸುವ ಅಧ್ಯಾಪಕರ ಜವಾಬ್ದಾರಿಗಳು ಪ್ರಾಥಮಿಕ–ಪ್ರೌಢ–ಪದವಿ ಪೂರ್ವ ಹಂತದ ಅಧ್ಯಾಪಕರಿಗಿಂತ ಭಿನ್ನವಾಗಿರ ಬೇಕಾಗುತ್ತದೆ. ಅದಕ್ಕಾಗಿಯೇ ಇವರ ವೇತನ ಭತ್ಯೆ ಮತ್ತು ರಜಾ ಸೌಲಭ್ಯಗಳನ್ನು ಹೆಚ್ಚು ನೀಡಲಾಗಿದೆ. ಉನ್ನತ ಶಿಕ್ಷಣ ಹಂತದ ವಿದ್ಯಾಭ್ಯಾಸಕ್ಕೆ ಬರುವ ಮಕ್ಕಳ ಉದ್ದೇಶಗಳು, ಉದ್ಯೋಗ ಕ್ಷೇತ್ರದ ನಿರೀಕ್ಷೆಗಳು ಮತ್ತು ಸಮಾಜದ ಬಯಕೆಗಳನ್ನು ಸರಿಯಾಗಿ ಅರ್ಥೈಸಿಕೊಂಡು ಅವುಗಳನ್ನು ಪೂರೈಸುವ ನಿಟ್ಟಿನಲ್ಲಿ ತಮ್ಮ ಕರ್ತವ್ಯ ಗಳನ್ನು ಪಾಲಿಸಬೇಕಾಗುತ್ತದೆ. ಈ ಹಂತದ ಅಧ್ಯಾಪಕರಿಗೆ ಜವಾಬ್ದಾರಿಗಳಿರುವಂತೆ ನೀತಿ ನಿರೂಪಣೆಗಳನ್ನು ಮಾಡುವ ವೃತ್ತಿ ಸ್ವಾತಂತ್ರ್ಯವನ್ನು ಕೂಡ ನೀಡಲಾಗಿದೆ. ಪಠ್ಯಕ್ರಮ ಗಳನ್ನು ರೂಪಿಸುವ, ಪರೀಕ್ಷಾ ವಿಧಾನಗಳನ್ನು ನಿರ್ಧರಿಸುವ ಅಧ್ಯಯನ ಮಂಡಳಿ ಮತ್ತು ಪರೀಕ್ಷಾ ಮಂಡಳಿಗಳಲ್ಲಿ ಪ್ರಮುಖ ಸ್ಥಾನ ಪಡೆದಿರುವ ಇವರು ಪ್ರಾಮಾಣಿಕವಾಗಿ, ನಿಷ್ಠೆಯಿಂದ ಅರ್ಪಣಾ ಮನೋಭಾವದೊಂದಿಗೆ ಕರ್ತವ್ಯ ನಿರ್ವಹಿಸಬೇಕಿದೆ. ಆದರೆ ಈ ವಿಷಯದಲ್ಲಿ ಬಹುತೇಕ ಅಧ್ಯಾಪಕರು ನಿರೀಕ್ಷಿತ ಪ್ರಮಾಣದಲ್ಲಿ ಕಾರ್ಯ ನಿರ್ವಹಿಸುತ್ತಿಲ್ಲ ಎಂಬುದು ಸಾಮಾನ್ಯರಿಗೂ ತಿಳಿಯುತ್ತಿದೆ. ಈ ಪರಿಸ್ಥಿತಿ ಹೀಗೆ ಮುಂದುವರಿದರೆ ಉನ್ನತ ಶಿಕ್ಷಣ ಕ್ಷೇತ್ರದ ಮೇಲೆ ದೊಡ್ಡ ಪರಿಣಾಮವನ್ನುಂಟುಮಾಡಲಿದೆ. ಆಗ ಅದರ ಸಂಪೂರ್ಣ ಹೊರೆಯನ್ನು ಅಧ್ಯಾಪಕರೇ ಹೊರ ಬೇಕಾಗುತ್ತದೆ. ಹಾಗಾಗದಂತೆ ನೋಡಿಕೊಳ್ಳುವುದು ಅಧ್ಯಾಪಕರ ಆದ್ಯ ಕರ್ತವ್ಯವಾಗಿದೆ.

**ಡಾ॥ ಎಸ್. ಎಂ. ಮುತ್ತಯ್ಯ**
ಸಹಾಯಕ ಪ್ರಾಧ್ಯಾಪಕರು, ಕನ್ನಡ ವಿಭಾಗ
ಸಹ್ಯಾದ್ರಿ ವಿಜ್ಞಾನ ಕಾಲೇಜು, ಶಿವಮೊಗ್ಗ – ೫೭೭ ೨೦೩

# ದೇಬಿದಾ

# ನೂರರ ನೆನಪು



ಈ ವರ್ಷ ಗೂಗಲ್‌ನಲ್ಲಿ ದೇವಿಪ್ರಸಾದರ ಬಗ್ಗೆ ಮಾಹಿತಿಗೆ ಎಂದು ತಡಕಾಡಿದಾಗ ಕಂಡ ವಿಷಯವೊಂದು ಆಶ್ಚರ್ಯ ಹುಟ್ಟಿಸಿತು. ಅವರು ತೀರಿಕೊಂಡದ್ದು ೧೯೯೩. ಅವರಿಗೆ ೧೯೯೮ರಲ್ಲಿ ಭಾರತ ಸರ್ಕಾರ ಮರಣೋತ್ತರವಾಗಿ ಪದ್ಮಭೂಷಣ ಪ್ರಶಸ್ತಿಯನ್ನು ಕೊಟ್ಟಿದೆ. ಈ ವಿಷಯ ಅವರ ಕುಟುಂಬಕ್ಕಾಗಲಿ, ಸಾರಸ್ವತ ಲೋಕಕ್ಕಾಗಲಿ ಇದುವರೆಗೂ ಗೊತ್ತೇ ಆಗಿರಲಿಲ್ಲ. ರಾಷ್ಟ್ರಪತಿ ಭವನವು ಇದನ್ನು ಖಚಿತಪಡಿಸಿದೆ ಯಾದರೂ ಕುಟುಂಬಕ್ಕೆ ಫಲಕ ಮತ್ತು ಅರ್ಹತಾ ಪತ್ರವನ್ನು ಕಳಿಸಿಕೊಟ್ಟಿಲ್ಲ! ಇಪ್ಪತ್ತು ವರ್ಷದ ಹಿಂದೆ ಪದ್ಮಭೂಷಣ ಪ್ರಶಸ್ತಿ ಪಡೆದಿದ್ದರಿಂದ ಈ ತತ್ವಜ್ಞಾನಿಯ ಹಿರಿಮೆಗೆ ಯಾವ ಬದಲಾವಣೆ ಏನೂ ಆಗುವುದಿಲ್ಲವಾದರೂ, ಈ ನಾಡು ಕಂಡ ಅಪ್ರತಿಮ ತತ್ವಜ್ಞಾನಿಗೆ ಸರ್ಕಾರವು ತೋರಿಸಿದ ನಿರ್ಲಕ್ಷ್ಯ ಮತ್ತು ನಿರ್ಲಿಪ್ತತೆಯನ್ನು ನೆನೆಸಿಕೊಂಡಾಗ ಮನಸ್ಸಿಗೆ ಖೇದವಾಗುತ್ತದೆ.

**ಡಾ॥ ಎನ್. ಗಾಯತ್ರಿ**

**೧೯೭೪,** ನಾನು ಆಗಷ್ಟೇ ಪಿ.ಯು.ಸಿ. ಮುಗಿಸಿ ಬಿ.ಎ. ಓದಲು ನ್ಯಾಷನಲ್ ಕಾಲೇಜಿಗೆ ಸೇರಿದ್ದೆ. ಅಂತರ ಕಾಲೇಜು ಪ್ರಬಂಧ ಸ್ಪರ್ಧೆಗೆ ವಿಷಯ ಸಂಗ್ರಹಿಸಲು ಗುರುಗಳಾದ ಜಿ.ಆರ್. ಅವರನ್ನು ಸಂಪರ್ಕಿಸಿದೆ. 'ಸಮಾಜದಲ್ಲಿ ಮೂಢನಂಬಿಕೆಗಳ ಪಾತ್ರ' ಎಂಬುದು ಪ್ರಬಂಧದ ವಿಷಯವಾಗಿತ್ತು. ಪೀಠಿಕೆಯಾಗಿ ಸ್ವಲ್ಪ ವಿಷಯಗಳನ್ನು ಹೇಳಿದ ನಂತರ, ಅವರು ನನಗೊಂದು ಪುಸ್ತಕವನ್ನು ಕೈಗಿತ್ತು ಅದರ ಒಂದು ಅಧ್ಯಾಯವನ್ನು ಓದಿಕೊಳ್ಳಲು ಹೇಳಿದರು. ಅದು ಡಾ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅವರು ಬರೆದ 'ವಾಟ್ ಈಸ್ ಲಿವಿಂಗ್ ಅಂಡ್ ವಾಟ್ ಈಸ್ ಡೆಡ್ ಇನ್ ಇಂಡಿಯನ್ ಫಿಲಾಸಫಿ' ಎಂಬ ಪುಸ್ತಕ. ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅವರ ಬರಹದ ಪರಿಚಯವಾದದ್ದು ಹೀಗೆ. ಕಾರ್ಲ್ ಮಾರ್ಕ್ಸ್‌ನ ಪುಸ್ತಕಗಳ ಪರಿಚಯಕ್ಕೂ ಮುಂಚೆ ಈ ಪುಸ್ತಕದ ಮೂಲಕ ನನಗೆ ಅಂದು ಮಾರ್ಕ್ಸ್‌ವಾದಿ ತತ್ವಶಾಸ್ತ್ರಜ್ಞರಾಗಿದ್ದ ಡಾ॥ ದೇವಿಪ್ರಸಾದ ಚಟ್ಟೋಪಾಧ್ಯಾಯರ ಪರಿಚಯವಾಗಿತ್ತು.

ಹೀಗೆ ಪುಸ್ತಕದ ಮೂಲಕ ಪರಿಚಯವಾಗಿದ್ದ ದೇವಿಪ್ರಸಾದರನ್ನು ಎಂದಾದರೊಮ್ಮೆ ಮುಖತಃ ಕಾಣಬಹುದು ಎಂದುಕೊಂಡಿರಲಿಲ್ಲ. ಗುರುಗಳಾದ ಜಿ.ಆರ್. ಅವರಿಂದ ನನಗೆ ಈ ಸದವಕಾಶವೂ ದೊರೆಯಿತು. ೧೯೮೦, ಬೆಂಗಳೂರಿನಲ್ಲಿ ವಿಜ್ಞಾನ ಶಿಬಿರವೊಂದನ್ನು ಉದ್ಘಾಟಿಸಲು ದೇವಿಪ್ರಸಾದ್ ಬಂದಿದ್ದರು. ಈ ಶಿಬಿರ ನಡೆಯುತ್ತಿದ್ದ ಇನ್‌ಸ್ಟಿಟ್ಯೂಟ್ ಆಫ್ ಇಂಜಿನಿಯರ್ಸ್‌ಗೆ ಹೋದ ನಾನು ಅಲ್ಲಿ ದೇವಿಪ್ರಸಾದರನ್ನು ಮೊದಲಿಗೆ ಭೇಟಿಯಾದೆ. ಅತ್ಯಂತ ಆಪ್ತತೆಯಿಂದ ನನ್ನನ್ನು ಮಾತನಾಡಿಸಿದ ಅವರು ಮೊದಲ ಭೇಟಿಗೇ ಹತ್ತಿರವಾದರು. ಸುಮಾರು ಅರ್ಧ ಗಂಟೆ ನನ್ನೊಡನೆ ಮಾತನಾಡಿದ ನಂತರ ಅವರು ಮಾತು ಮುಗಿಸುವ ವೇಳೆಗೆ ಜಿ.ಆರ್.ರವರಿಗೂ ಮತ್ತು ನನಗೂ ಒಂದು ಗುರುತರವಾದ ಜವಾಬ್ದಾರಿಯನ್ನು ಕೊಟ್ಟರು. ಇದರ ಪರಿಣಾಮವಾಗಿ ಅವರಿಬ್ಬರೊಂದಿಗೆ ನಾನೂ ಸೇರಿ 'ಅನ್ ಎನ್‌ಸೈಕ್ಲೋಪೀಡಿಯಾ ಆಫ್ ಸೌತ್ ಇಂಡಿಯನ್ ಕಲ್ಚರ್' ಪುಸ್ತಕದ ರಚನೆಯ ಕಾರ್ಯದಲ್ಲಿ ಸೇರಿಕೊಂಡೆ. ಇದಾದ ನಂತರ ಮುಂದೆ ದೇವಿಪ್ರಸಾದ್ ಮತ್ತು ಅವರ ಕುಟುಂಬ ನಮಗೂ ಕುಟುಂಬದ ಸ್ನೇಹಿತರಾದರು. ದೇವಿಪ್ರಸಾದರು ಬೆಂಗಳೂರಿಗೆ ಬಂದಾಗಲೆಲ್ಲ ಅವರೊಡನೆ ಒಡನಾಟ ಇದ್ದೇ ಇರುತ್ತಿತ್ತು. ನನಗಂತೂ ಅವರು ಪ್ರೀತಿಯ 'ದೇಬಿದಾ' ಆಗಿದ್ದರು.

೧೯೮೪ರ ಜನವರಿ ತಿಂಗಳಲ್ಲಿ ಮೈಸೂರು ವಿಶ್ವವಿದ್ಯಾಲಯದ ಮಾನಸಗಂಗೋತ್ರಿಯಲ್ಲಿ ಡಾ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅವರ ಉಪನ್ಯಾಸವನ್ನು ಏರ್ಪಡಿಸಲಾಗಿತ್ತು: "ಟ್ಯಾಗೋರ್ ಅಂಡ್ ಇಂಡಿಯನ್ ಫಿಲಸಾಫಿಕಲ್ ಹೆರಿಟೇಜ್" ಎಂಬ ವಿಷಯವನ್ನು ಕುರಿತು. ಎಂದಿನಂತೆ ತಮ್ಮ ಉದ್ದಾಮ ಪಾಂಡಿತ್ಯದಿಂದ ಮಾತನಾಡುತ್ತಿದ್ದ ದೇವಿಪ್ರಸಾದರು ರವೀಂದ್ರರ ಬರವಣಿಗೆಗಳಲ್ಲಿ ಅತ್ಯಂತ ಶಕ್ತಿಯುತವಾಗಿ ಕಂಡುಬರುವ "ಸತ್ಯ ಮತ್ತು ಸೌಂದರ್ಯ" ಹಾಗೂ "ಸತ್ಯ ಮತ್ತು ಸ್ವಾತಂತ್ರ್ಯ"ವನ್ನು ಸಮಕಾಲೀನ ರಾಜಕೀಯ ಮತ್ತು ಸಾಮಾಜಿಕ ಹಿನ್ನೆಲೆಯಲ್ಲಿಟ್ಟು ವಿಶ್ಲೇಷಿಸುತ್ತಿದ್ದರು. ಉಪನ್ಯಾಸದ ನಂತರ ಚರ್ಚೆಯ ಸಂದರ್ಭದಲ್ಲಿ ಶ್ರೋತೃಗಳೊಬ್ಬರು ಟ್ಯಾಗೋರರು ಎಂದೂ ಆಧ್ಯಾತ್ಮಿಕತೆಯ ನಿರಾಕರಣೆ ಮಾಡಿಲ್ಲವೆಂದು ಹೇಳಿದರು. ದೇವಿಪ್ರಸಾದ್‌ರು ಅದಕ್ಕೆ ಉತ್ತರಿಸುತ್ತಾ, ಆಧ್ಯಾತ್ಮಿಕತೆಯನ್ನು ನಿರಾಕರಿಸದೆಯೂ ಹೇಗೆ ಸಮಕಾಲೀನ ಸಂದರ್ಭದಲ್ಲಿ ಟ್ಯಾಗೋರರು ಕೆಲವು ಸತ್ಯದರ್ಶನಗಳನ್ನು ಪ್ರತಿಪಾದಿಸಿದರು ಎಂಬುದನ್ನು ಎತ್ತಿ ತೋರಿಸಿದರು. ಇದರಿಂದ ಸುಮ್ಮನಾಗದ ಆ ವ್ಯಕ್ತಿ ಮತ್ತೆ ಮತ್ತೆ ತನ್ನ ವಾದವನ್ನೇ ಮುಂದುವರಿಸುತ್ತಿದ್ದಾಗ, ದೇವಿಪ್ರಸಾದರು ಒಂದೇ ಮಾತಿನಲ್ಲಿ "ನನ್ನ ಮಾತು ಅರ್ಥವಾಗದವರಿಗೆ ನಾನೇನೂ ಹೇಳಲಾರೆ" ಎಂದು ಹೇಳಿ ಸುಮ್ಮನಾದರು. ಈ ಸಭೆಯಲ್ಲಿ ಕುಳಿತಿದ್ದ ನಾನು ಅವರ ಕಡಕ್ಕಾದ ಉತ್ತರದಿಂದ ಪೆಚ್ಚಾದೆ. ಹಾಗೆ ಅಲ್ಲಿದ್ದ ಬೇರೆ ಕೆಲವರು ಕೂಡ. ನಂತರದ ದಿನಗಳಲ್ಲಿ ಅವರು ಮತ್ತು ಅವರ ಬರವಣಿಗೆಯ ಪರಿಚಯ ನನಗೆ ಕೊಂಚ ಆಗುತ್ತಿದ್ದಂತೆ ಅಂದಿನ ಅವರ ಧೋರಣೆಯು ಅರ್ಥವಾಯಿತು. ತತ್ವಶಾಸ್ತ್ರ, ಇತಿಹಾಸ, ವಿಜ್ಞಾನ, ಉತ್ಖನನ ಶಾಸ್ತ್ರ, ಮಾರ್ಕ್ಸ್‌ವಾದ – ಹೀಗೆ ಹತ್ತು ಹಲವು ಕ್ಷೇತ್ರಗಳಲ್ಲಿ ಅವಿಸ್ಮರಣೀಯ ಕೊಡುಗೆಗಳನ್ನು ನೀಡಿ ರಾಷ್ಟ್ರೀಯ, ಅಂತರರಾಷ್ಟ್ರೀಯ ಖ್ಯಾತಿ ಪಡೆದಿರುವ ಇವರ ಬರವಣಿಗೆಯನ್ನು ಓದಿ ಅರ್ಥ ಮಾಡಿಕೊಳ್ಳಲು ಸ್ವಲ್ಪ ಕೃಷಿ ಬೇಕು ಎಂಬುದನ್ನು ಮೇಲಿನ ಸಂಗತಿ ನೆನಪಿಸುತ್ತದೆ.

ನಾನು ಕಲ್ಕತ್ತೆಯ ಅವರ ಮನೆಯಲ್ಲಿ ಅವರನ್ನು ಮೊದಲಿಗೆ ಭೇಟಿಯಾದ ಸಂದರ್ಭ ಮರೆಯಲಾಗದ್ದು. ೧೯೮೪ರ ಡಿಸೆಂಬರಿನಲ್ಲಿ ಕಲ್ಕತ್ತೆಗೆ ಹೋಗಬೇಕೆಂದು ನಿರ್ಧರಿಸಿ ಸಕಲ ಸಿದ್ಧತೆಗಳನ್ನು ಮಾಡಿಕೊಂಡು ದೇವಿಪ್ರಸಾದರಿಗೆ ನಾನು ಕಲ್ಕತ್ತೆಗೆ ಬರುತ್ತಿರುವುದಾಗಿ

ಸಂಬಂಧ



ಮಗುವಿನ ನಗುವಲ್ಲಿ
ನೋವ –
ಮರೆಯುತ್ತಾಳೆ : ತಾಯಿ;
ತಾಯಿ ನಗುವಿಗೆ
ಮಗು –
ಬದುತ್ತೆ ಬಾಯಿ!

• ಗೋಪಿ •
ಹಿರೇಬೆಟ್ಟು

ತಿಳಿಸಿದೆ. ಅದೇಕೋ ಅವರು ಅಷ್ಟೊಂದು ಹರ್ಷದಿಂದ ಸ್ವಾಗತಿಸಿದಂತಿರಲಿಲ್ಲ. ಕಾರಣವೇನನ್ನೂ ಹೇಳದೆ, ಅವರು ನನ್ನ ಪ್ರಯಾಣವನ್ನು ಸ್ವಲ್ಪ ಮುಂದಕ್ಕೆ ಹಾಕಿಕೊಳ್ಳಬಾರದೆ, ಎಂದಷ್ಟೇ ಕೇಳಿದರು. ನಾನಾದರೋ ಎಲ್ಲ ಸಿದ್ಧತೆ ಮಾಡಿಕೊಂಡಿದ್ದೆ. ಬೆಂಗಳೂರಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್‌ನಲ್ಲಿ ವಿಜ್ಞಾನಿಯಾಗಿದ್ದ ಡಾ॥ ಸಂಜಯ್ ಬಿಸ್ವಾಸ್ ಅವರ ಕಲ್ಕತ್ತೆಯ ಮನೆಯಲ್ಲಿ ಉಳಿದುಕೊಳ್ಳುವ ವ್ಯವಸ್ಥೆಯನ್ನು ಮಾಡಿಕೊಂಡು ಕಲ್ಕತ್ತೆಗೆ ಹೊರಟೇಬಿಟ್ಟೆ. ಅಲ್ಲಿ ಹೋದ ಮೇಲೆ ಅವರ ವರ್ತನೆಗೆ ಕಾರಣ ತಿಳಿದು ಸ್ವಲ್ಪ ಬೇಸರವಾಯಿತು. ೧೯೮೪ರ ನವೆಂಬರ್ ೩೧ರಂದು ಇಂದಿರಾ ಗಾಂಧಿ ಹತ್ಯೆಯಾದ ನಂತರ ಅದರ ಪರಿಣಾಮವನ್ನು ಇಡೀ ದೇಶವೇ ಅನುಭವಿಸುವಂತಾಗಿತ್ತು. ಈ ಹತ್ಯೆಗೆ ಕಾರಣರಾದವರೆಂದು ಇಡೀ ಸಿಖ್ ಸಮುದಾಯದ ಮೇಲೆ ಕೆಲ ಹಿಂದೂಗಳಿಂದ ಪ್ರತೀಕಾರದ ಸೇಡಿನ ಕ್ರಮ ಜರುಗಿತ್ತು. ದೇವಿಪ್ರಸಾದರು ವಾಸ ಮಾಡುತ್ತಿದ್ದ ಸಂಕೀರ್ಣದ ಕೆಳ ಮಹಡಿಯಲ್ಲಿ ಟೈರ್ ಮಾರುತ್ತಿದ್ದ ಸಿಕ್ಖರ ಅಂಗಡಿಯಿತ್ತು. ದುರುಳರು ಆ ಅಂಗಡಿಗೆ ಬೆಂಕಿ ಹಚ್ಚಿ ಧ್ವಂಸ ಮಾಡಲು ಬಂದಿದ್ದರು. ದೇವಿಪ್ರಸಾದರ ಮನೆಯವರು, ಅದರಲ್ಲೂ ವಿಶೇಷವಾಗಿ ಅವರ ಪತ್ನಿ ಅಲಕಾ ಚಟ್ಟೋಪಾಧ್ಯಾಯ ಸ್ವತಃ ತಾವೇ ಅಂಗಡಿಯ ಮುಂದೆ ನಿಂತು ದಾಳಿಕೋರರನ್ನು ಎದುರಿಸಿದ್ದಲ್ಲದೆ, ಆ ಕುಟುಂಬಕ್ಕೆ ಸಂಪೂರ್ಣ ರಕ್ಷಣೆಯನ್ನು ಕೊಟ್ಟರು. ಇಂತಹ ಹೊತ್ತಿ ಉರಿಯುವ ವಾತಾವರಣದಲ್ಲಿ ನನ್ನ ಮೊದಲ ಕಲ್ಕತ್ತೆಯ ಭೇಟಿ ನಡೆದದ್ದು. ಈ ಘಟನೆಗಳ ಹಿನ್ನೆಲೆಯಲ್ಲಿ ದೇವಿಪ್ರಸಾದ್ ಆತಂಕಗೊಂಡಿದ್ದು ಸಹಜವೇ ಆಗಿತ್ತು. ಆದರೂ ನಾನು ಹೋಗುವ ವೇಳೆಗೆ ಪರಿಸ್ಥಿತಿ ತಿಳಿಯಾಗಿದ್ದು ಅವರು ನನ್ನನ್ನು ಎಂದಿನ ಪ್ರೀತಿ ಮತ್ತು ವಿಶ್ವಾಸದಿಂದ ನೋಡಿಕೊಂಡರು. ಈ ಅವಧಿಯಲ್ಲಿ ನಾನು ಅವರೊಡನೆ ಕಳೆದ ಸಮಯ ನನ್ನ ಜೀವನದ ಅಮೂಲ್ಯ ಗಳಿಗೆಗಳಾಗಿವೆ. ನಾವು ಕೆಲವು ಗೆಳತಿಯರು ಆಗಷ್ಟೇ ಮಹಿಳಾ ಪತ್ರಿಕೆಯನ್ನು ತರಲು ಸಿದ್ಧತೆ ನಡೆಸಿದ್ದೆವು. ಈ ವಿಷಯವನ್ನು ಕೇಳಿ ಸಂಭ್ರಮಿಸಿದ ದೇಬಿದಾ, ಆ ಪತ್ರಿಕೆಗೆಂದು ತಮ್ಮ ಒಂದು ಲೇಖನವನ್ನು ಸರಳವಾಗಿ ಸಂಪಾದಿಸಿಕೊಟ್ಟಿದ್ದೇ ಅಲ್ಲದೆ, ತಮ್ಮ ವಕೀಲ ಮಿತ್ರರಿಂದ ಸಿವಿಲ್ ಸಂಹಿತೆಗೆ ಸಂಬಂಧಪಟ್ಟ ಲೇಖನವೊಂದನ್ನು ಬರೆಸಿಕೊಟ್ಟು ನಮ್ಮ 'ಅಚಲ' ಮಹಿಳಾ ಪತ್ರಿಕೆಯನ್ನು ಬೆಂಬಲಿಸಿದ್ದನ್ನು ನಾನು ಹೇಗೆ ಮರೆಯಲಿ?

ದೇಬಿದಾ ಅವರು ತಮಾಷೆಗಾಗಿ 'ನನ್ನನ್ನು ನೀನೇಕೆ ದತ್ತು ತೆಗೆದುಕೊಳ್ಳಬಾರದು?' ಎಂದು ಕೇಳಿದ್ದರು ಮತ್ತು ನನ್ನನ್ನು ಅವರ ಅಮ್ಮನಂತೆ ಕಾಣುತ್ತಿದ್ದರು. ಅವರ ತಾಯಿಯ ಹೆಸರೂ ಕೂಡ ಗಾಯತ್ರಿದೇವಿಯಾಗಿದ್ದುದು ಒಂದು ಕಾಕತಾಳೀಯವಾಗಿತ್ತು. ದೇಬಿದಾ ಅವರ ಮಡದಿ ಅಲಕಾ ಚಟ್ಟೋಪಾಧ್ಯಾಯ ಕಲ್ಕತ್ತೆಯ ವಿದ್ಯಾಸಾಗರ ಮಹಿಳಾ ಕಾಲೇಜಿನಲ್ಲಿ ಬಂಗಾಳಿ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದರು, ನಂತರ ಪ್ರಾಚಾರ್ಯರಾಗಿ ನಿವೃತ್ತರಾದರು. ಇವರು ಟಿಬೆಟ್‌ನ ವಿದ್ವಾಂಸರೂ ಹೌದು. ಟಿಬೆಟ್ ಭಾಷೆಯಲ್ಲಿ ಸಾಕಷ್ಟು ಸಂಶೋಧನೆಯನ್ನೂ ಮಾಡಿದ್ದರು. ಈ ದಂಪತಿಗಳು ದತ್ತು ತೆಗೆದುಕೊಂಡ ಇಬ್ಬರು ಟಿಬೆಟನ್ ಹೆಣ್ಣು ಮಕ್ಕಳು ಅದಿತಿ ಮತ್ತು ಅತಸಿ. ಕಾಲೇಜಿನ ದಿನಗಳಲ್ಲಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದ್ದ ಅಲಕಾ ಅಂದಿನ ವಿದ್ಯಾರ್ಥಿ ಚಳುವಳಿಯಲ್ಲಿ ಸಕ್ರಿಯರಾಗಿದ್ದು ಸೆರೆಮನೆವಾಸದ ರುಚಿಯನ್ನೂ ಕಂಡವರು. ವಿದ್ಯಾರ್ಥಿದೆಸೆಯಲ್ಲಿನ ಅವರ ಕ್ರಿಯಾಶೀಲ ಬದುಕಿನ ಅನುಭವಗಳನ್ನು ರೇಣು ಚಕ್ರವರ್ತಿ ಮತ್ತು ಸರೋಜ ಮುಖರ್ಜಿ ಅವರು ತಮ್ಮ ಆತ್ಮಕಥೆಗಳಲ್ಲಿ ನೆನಪಿಸಿಕೊಂಡಿದ್ದಾರೆ. ಜ್ಞಾನಪೀಠ ಪ್ರಶಸ್ತಿ ಪಡೆದ ಮಹಾಶ್ವೇತಾ ದೇವಿ ಇವರ ಕಾಲೇಜಿನ ಸಹಪಾಠಿ ಕೂಡ. ಕಲ್ಕತ್ತೆಯ ಸಾಂಸ್ಕೃತಿಕ ಜಗತ್ತಿನಲ್ಲಿ ಅತ್ಯಂತ ಕ್ರಿಯಾಶೀಲವಾಗಿ ತೊಡಗಿಕೊಂಡಿದ್ದ ಇವರು ನನ್ನನ್ನು ಏಷ್ಯಾಟಿಕ್ ಸೊಸೈಟಿ, ನ್ಯಾಷನಲ್ ಲೈಬ್ರರಿ ಮತ್ತು ಜಾಧವಪುರ ವಿಶ್ವವಿದ್ಯಾಲಯಕ್ಕೆಲ್ಲ ಕರೆದುಕೊಂಡು ಹೋಗಿದ್ದರು.

ಕಲ್ಕತ್ತೆಯನ್ನು ಬಿಟ್ಟರೆ ದೇವಿಪ್ರಸಾದರಿಗೆ ಪ್ರಿಯವಾದ ಮತ್ತೊಂದು ಸ್ಥಳವೆಂದರೆ ಕರ್ನಾಟಕವೇ ಆಗಿತ್ತು. ಬೆಂಗಳೂರು, ಮೈಸೂರುಗಳಲ್ಲಿ ಅವರಿಗೆ ಹಲವಾರು ಆತ್ಮೀಯ ಸ್ನೇಹಿತರಿದ್ದರು. ೧೯೭೦ರಲ್ಲಿ ಕರ್ನಾಟಕದಲ್ಲಿ ಲೆನಿನ್ ಶತಮಾನೋತ್ಸವವನ್ನು ಆಚರಿಸುತ್ತಿದ್ದ ಸಂದರ್ಭ. ಮೈಸೂರು ವಿಶ್ವವಿದ್ಯಾಲಯದಲ್ಲಿ ಭಾರತದ ಮೇಲೆ ಮಾರ್ಕ್ಸ್‌ವಾದದ ಪ್ರಭಾವವನ್ನು ಕುರಿತಂತೆ ರಾಷ್ಟ್ರೀಯ ವಿಚಾರ ಸಂಕಿರಣವೊಂದನ್ನು ಏರ್ಪಡಿಸಲಾಗಿತ್ತು. ಆ ಕಾರ್ಯಕ್ರಮದಲ್ಲಿ ಭಾಗವಹಿಸಲು ಇಸ್ಕಸ್‌ನ ರಾಷ್ಟ್ರೀಯ ಮಂಡಳಿಯ ಅಧ್ಯಕ್ಷರಾದ ಕೆ. ಪಿ. ಎಸ್. ಮೆನನ್, ನ್ಯಾಯಮೂರ್ತಿ ವಿ. ಆರ್. ಕೃಷ್ಣ ಅಯ್ಯರ್, ಪ್ರೊಫೆಸರ್ ಎಲ್. ಶ್ರೀಕಂಠಯ್ಯ, ಡಾ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯ ಮತ್ತಿತರರು ಭಾಗವಹಿಸಿದ್ದರು. ಆಗ ಇಸ್ಕಸ್‌ನ ಪದಾಧಿಕಾರಿಯಾಗಿದ್ದ ಜಿ.ಆರ್.ರವರಿಗೆ ಈ ಅತಿಥಿಗಳೊಡನೆ ನಿಕಟವಾಗಿ ಒಡನಾಡಲು ಅವಕಾಶ ಸಿಕ್ಕಿತು. ಆ ವೇಳೆಗಾಗಲೇ ದೇವಿಪ್ರಸಾದ್ ಚಟ್ಟೋಪಾಧ್ಯಾಯರ ಬರವಣಿಗೆಗಳಿಂದ ಆಕರ್ಷಿತರಾಗಿದ್ದ ಜಿ.ಆರ್. ಆ ನಂತರ ಅವರೊಡನೆ ನಿಕಟ ಸಂಬಂಧ ಬೆಳೆಸಿದರು. ಇಬ್ಬರಿಗೂ ವಿಚಾರಗಳಲ್ಲಿದ್ದ ಸಾಮ್ಯತೆ ಸಂಬಂಧವನ್ನು ಸ್ನೇಹವನ್ನಾಗಿಸಿತು. ದೇವಿಪ್ರಸಾದ್ ಜಿ.ಆರ್.ರವರನ್ನು ತಮ್ಮನಂತೆ ಕಂಡರೆ, ಜಿ.ಆರ್. ದೇವಿಪ್ರಸಾದ್‌ರನ್ನು ಗುರುವಂತೆ ಭಾವಿಸಿದರು.

ಮೊದಲಿಗೆ ೧೯೭೦ರಲ್ಲಿ ಲೆನಿನ್ ಶತಮಾನೋತ್ಸವದ ಅಂಗವಾಗಿ ನಡೆದ ವಿಚಾರಗೋಷ್ಠಿಗೆ ಆಹ್ವಾನಿತರಾಗಿ ಬಂದ ದೇವಿಪ್ರಸಾದರು ನಂತರ ೧೯೯೨ರವರೆಗೂ ಸುಮಾರು ಹದಿನೈದಕ್ಕೂ ಹೆಚ್ಚು ಬಾರಿ ಕರ್ನಾಟಕದ ವಿವಿಧ ಸಂಘ ಸಂಸ್ಥೆಗಳ, ವಿಶ್ವವಿದ್ಯಾನಿಲಯಗಳ ಅತಿಥಿಯಾಗಿ ಆಹ್ವಾನಿತರಾಗಿ ಬಂದಿದ್ದಾರೆ. ಶ್ರೀಯುತ ಹಾ. ಮಾ. ನಾಯಕ್, ಜಿ. ರಾಮಕೃಷ್ಣ, ಸಿ. ಎನ್. ಆರ್. ರಾವ್, ರೊದ್ದಂ ನರಸಿಂಹ, ಸಿ. ವಿ. ವಿಶ್ವೇಶ್ವರ, ಸಂಜಯ್ ಬಿಸ್ವಾಸ್, ಜೆ. ಆರ್. ಲಕ್ಷ್ಮಣರಾವ್ ಮುಂತಾದ ಒಂದು ದೊಡ್ಡ ಆಪ್ತ ಸ್ನೇಹಿತರ ಬಳಗವೇ ದೇವಿಪ್ರಸಾದರಿಗೆ ಕರ್ನಾಟಕದಲ್ಲಿತ್ತು.

ಕರ್ನಾಟಕದಲ್ಲಿ ದೇವಿಪ್ರಸಾದರ ಪ್ರಕಟಣೆಗಳು ಬೆಳಕು ಕಂಡುದೆಷ್ಟೋ. ಮೈಸೂರು ವಿಶ್ವವಿದ್ಯಾಲಯದಿಂದ ಪ್ರಕಟವಾದ 'ಟೂ ಟ್ರೆಂಡ್ಸ್ ಇನ್ ಇಂಡಿಯನ್ ಫಿಲಾಸಫಿ' ಮತ್ತು 'ಟ್ಯಾಗೋರ್ ಅಂಡ್ ಇಂಡಿಯನ್ ಫಿಲಸಾಫಿಕಲ್ ಹೆರಿಟೇಜ್' ಕೃತಿಗಳು ಅವರು ಮೈಸೂರು ವಿಶ್ವವಿದ್ಯಾಲಯದಲ್ಲಿ ನೀಡಿದ ಉಪನ್ಯಾಸಗಳೇ ಆಗಿವೆ. ಬೆಂಗಳೂರಿನ ಮಾ–ಲೆ ಪ್ರಕಾಶನದಿಂದ ಅವರ 'ರಿಲಿಜನ್ ಅಂಡ್ ಸೊಸೈಟಿ' ಪ್ರಕಟವಾಯಿತು. ನವಕರ್ನಾಟಕ ಪ್ರಕಾಶನದವರ ಮಹತ್ವಾಕಾಂಕ್ಷೆಯ ಪ್ರಕಟಣೆಯಾದ 'ಗ್ಲೋಬಲ್



ಪತ್ನಿ ಅಲಕಾ ಚಟ್ಟೋಪಾಧ್ಯಾಯ ಅವರೊಂದಿಗೆ ದೇವಿಪ್ರಸಾದ್

ಫಿಲಾಸಫಿ ಫಾರ್ ಎವೆರಿಮ್ಯಾನ್' ಮಾಲಿಕೆಯ (೮ ಸಂಪುಟಗಳು) ಪ್ರಧಾನ ಸಂಪಾದಕರಾಗಿದ್ದುದಲ್ಲದೆ, ಅದರ ಮೂರು ಸಂಪುಟಗಳ ಕರ್ತೃವೂ ಅವರಾಗಿದ್ದರು. ದೇವಿಪ್ರಸಾದರ ಸುಮಾರು ಹದಿನೈದಕ್ಕೂ ಹೆಚ್ಚು ಕೃತಿಗಳು ಕನ್ನಡದಲ್ಲಿ ಅನುವಾದ ಗೊಂಡಿದ್ದು, ಅವುಗಳನ್ನು ಪ್ರಕಟಿಸಿದ ಕೀರ್ತಿ ಬೆಂಗಳೂರಿನ ನವಕರ್ನಾಟಕ ಪ್ರಕಾಶನಕ್ಕೆ ಸಲ್ಲುತ್ತದೆ.

ಸಂಸ್ಕೃತಿ ಎಂದರೆ 'ಶಿಷ್ಟ'ರ ಆಚಾರ–ವ್ಯವಹಾರಗಳು ಮತ್ತು ಚಿಂತನೆ ಮಾತ್ರ ಎನ್ನುವ ಮಿಥ್ಯೆ ಜನಸಾಮಾನ್ಯರಲ್ಲಷ್ಟೇ ಅಲ್ಲದೆ ವಿದ್ವಾಂಸರಲ್ಲೂ ಇಂದಿಗೂ ಇದೆ. ಆದರೆ ಐವತ್ತರ ದಶಕದಲ್ಲೇ ಈ ಕುರಿತು ಅಧ್ಯಯನ ಮತ್ತು ಸಂಶೋಧನೆ ನಡೆಸಿ ೧೯೫೨ರಲ್ಲಿ ಅವರು ಬಂಗಾಳಿಯಲ್ಲಿ ರಚಿಸಿರುವ 'ಲೋಕಾಯತ' ಎನ್ನುವ ಉದ್ಗ್ರಂಥದಲ್ಲಿ ಶಿಷ್ಟ ಸಂಪ್ರದಾಯವಲ್ಲದೆ, ನಮ್ಮ ಇತಿಹಾಸದಲ್ಲಿ ಕಂಡುಬರುವ ಜಾನಪದ ಸಂಪ್ರದಾಯ, ಬುಡಕಟ್ಟು ವ್ಯವಸ್ಥೆ, ಕೃಷಿ ಮಾಂತ್ರಿಕತೆ, ತಂತ್ರಶಾಸ್ತ್ರ, ಮೂಲ ಸಾಂಖ್ಯ ಮುಂತಾದವುಗಳನ್ನು ಆಧರಿಸಿ ನಮ್ಮ ದೇಶದ ಬಹುತ್ವದ ನೆಲೆಗಳನ್ನು ಕಟ್ಟಿಕೊಟ್ಟಿದ್ದಾರೆ. ಮಾತೃ ಆರಾಧನೆ, ತಾಯಿ–ಹಕ್ಕು ಮುಂತಾದ ಇತಿಹಾಸದ ಪ್ರಮುಖ ಅಂಶಗಳನ್ನು ಹೆಕ್ಕಿ ಕೊಟ್ಟು ಮಹಿಳಾ ಅಧ್ಯಯನಕ್ಕೆ ದಿಕ್ಸೂಚಿಸಿದ್ದಾರೆ. ಆಳುವ ವರ್ಗದ ತತ್ವಶಾಸ್ತ್ರ ಪ್ರಣಾಳಿಕೆಗೆ ಪರ್ಯಾಯವಾಗಿ ದುಡಿಯುವ ಜನತೆ ತನ್ನದೇ ಆದ ತಾತ್ವಿಕ ಮೂಲ ಪ್ರಮೇಯಗಳನ್ನು ರೂಪಿಸಿಕೊಳ್ಳಬಹುದೆಂಬ ಚಾರಿತ್ರಿಕ ಸತ್ಯವನ್ನು ಈ ಕೃತಿಯಲ್ಲಿ ತೆರೆದಿಟ್ಟಿದ್ದಾರೆ. ವೈಚಾರಿಕತೆ ಮತ್ತು ಐತಿಹಾಸಿಕ ಪ್ರಜ್ಞೆಯ ನೆಲೆಯಲ್ಲಿ ಭಾರತೀಯ ಸಂಸ್ಕೃತಿಯನ್ನು ಕಟ್ಟಿಕೊಟ್ಟದ್ದು ಅವರ ಪ್ರಮುಖ ಸಾಧನೆ. ಆಂಗ್ಲ ಭಾಷೆಯಲ್ಲಿ ಅದು ೧೯೫೯ರಲ್ಲಿ ಪ್ರಕಟವಾಗಿದ್ದು, ಹಲವು ಮುದ್ರಣಗಳನ್ನು ಕಂಡಿದೆ. ಹತ್ತಾರು ಭಾಷೆಗಳಿಗೆ ಅನುವಾದಗೊಂಡಿದೆ (ಕನ್ನಡ : ೨೦೧೪ರಲ್ಲಿ).

ಭಾರತೀಯ ತತ್ವಶಾಸ್ತ್ರದ ಜ್ಞಾನ ಸಂಪತ್ತನ್ನು ಭಾವನಾವಾದದ ಮೂಲಕವಷ್ಟೇ ವೈಭವಿಸಿ ಅಮೂರ್ತವಾಗಿಸಿ ತಮ್ಮ ಸಾಂಪ್ರದಾಯಿಕ ವಿಶ್ಲೇಷಣೆಯೊಂದೇ ಘನವಾದುದೆಂದು ಬೀಗುತ್ತಿದ್ದ ವೇದಾಂತಿಗಳನ್ನು ಖಂಡಿಸಿದ ದೇವಿಪ್ರಸಾದರು ಭಾರತೀಯ ತತ್ವಶಾಸ್ತ್ರದ ಪರಂಪರೆಯ ತಿಳುವಳಿಕೆಗೆ ಹೊಸದೊಂದು ಬೆಳಕು ತೋರಿದ ದಿಗ್ದಂತಿಯಾದರು. ಭಾರತದಲ್ಲಿ ಭೌತವಾದದ ಪರಂಪರೆ ಎಷ್ಟು ಪ್ರಾಚೀನವೆಂಬುದಕ್ಕೆ ಹರಪ್ಪ ಸಂಸ್ಕೃತಿಯ ಕಾಲದಿಂದ ಆಗಿಬಂದಿರುವ ಬೆಳವಣಿಗೆ ಗಳನ್ನು ವೈಜ್ಞಾನಿಕವಾಗಿ ವಿವರಿಸಿ ನಮ್ಮ ಇಡೀ ಇತಿಹಾಸದ ಬಗ್ಗೆ ಹೊಸದೊಂದು ತಿಳುವಳಿಕೆ ನೀಡಿರುವುದು ದೇವಿಪ್ರಸಾದರ ಮಹತ್ಸಾಧನೆ. ಅವರ 'ಭಾರತೀಯ ತತ್ವಶಾಸ್ತ್ರದಲ್ಲಿ ಜೀವಂತವಾಗಿರುವುದೇನು, ಮೃತವಾಗಿರುವುದೇನು' (೧೯೭೬) ಈ ದಿಕ್ಕಿನಲ್ಲಿ ಅತ್ಯಂತ ಮಹತ್ವದ ಕೃತಿಯಾಗಿದೆ.

ಗಣೇಶನನ್ನು ತೋರಿಸಿ ನಮ್ಮಲ್ಲಿ ಪ್ಲಾಸ್ಟಿಕ್ ಸರ್ಜರಿ ಇತ್ತೆನ್ನುವ, ಪುಷ್ಪಕ ವಿಮಾನದ ಕತೆ ಹೇಳಿ ನಮ್ಮಲ್ಲಿ ವಿಮಾನವಿತ್ತೆಂದು ಭಾರತದ ಪ್ರಾಚೀನತೆಯ ಬಗ್ಗೆ ದುರಭಿಮಾನಪಡುವವರಿಗೆ ದೇವಿಪ್ರಸಾದರ ವಿಜ್ಞಾನದ ಚರಿತ್ರೆ ಮತ್ತು ಪರಂಪರೆಯನ್ನು ಕುರಿತು ನಡೆಸಿರುವ ಸಂಶೋಧನೆಗಳು ಉತ್ತರವಾಗುತ್ತವೆ. ಅವರು ರಚಿಸಿರುವ 'ಪ್ರಾಚೀನ ಭಾರತದ ವಿಜ್ಞಾನ ಮತ್ತು ತಂತ್ರಜ್ಞಾನದ ಚರಿತ್ರೆ' ಎಂಬ ಪುಸ್ತಕದ ಎರಡನೆಯ ಸಂಪುಟವನ್ನು ಕುರಿತು ವಿಶ್ವವಿಖ್ಯಾತವಾದ ವಿಜ್ಞಾನ ಪತ್ರಿಕೆ 'ನೇಚರ್'ನಲ್ಲಿ ರಾಬರ್ಟ್ ಟೆಂಪಲ್‌ರವರು ಭಾರತೀಯ ವಿಜ್ಞಾನಕ್ಕೆ ದೇವಿಪ್ರಸಾದರ ಕೊಡುಗೆಯನ್ನು ಕುರಿತು ಆಡಿರುವ ಮಾತುಗಳು ಗಮನಾರ್ಹ : "ಇದು ವಿಜ್ಞಾನದ ಚರಿತ್ರೆಯ ಪುಸ್ತಕ ಎನ್ನುವುದಕ್ಕಿಂತ ಹೆಚ್ಚಿನದು. ಭಾರತಕ್ಕೆ ಭವಿಷ್ಯ ಇದೆಯೋ ಇಲ್ಲವೋ ಎನ್ನುವುದನ್ನು ನೇರವಾಗಿ ಮತ್ತು ಸ್ಪಷ್ಟವಾಗಿ ಪಾತಾಳಗರಡಿ ಹಾಕಿ ನೋಡುವ ಉದ್ದೇಶ ಇಲ್ಲಿದೆ. ಚಟ್ಟೋಪಾಧ್ಯಾಯರು ಅತ್ಯಂತ ಧೈರ್ಯಶಾಲಿಗಳು. ಮೂಲಭೂತ ಸಮಸ್ಯೆಯ ಬೇರುಗಳನ್ನು ಇದರಲ್ಲಿ ಎತ್ತಿ ತೋರಿಸಿದ್ದಾರೆ. ಹಿಂದೂ ಮತಾಂಧತೆಯು ಚರಿತ್ರೆಯುದ್ದಕ್ಕೂ ವಿಜ್ಞಾನದ ಬೆಳವಣಿಗೆಯನ್ನು ಹೇಗೆ ದಮನ ಮಾಡಿತು ಎಂಬುದನ್ನು ಮತ್ತು ಇಂದಿಗೂ ಅದರಿಂದ ಉಂಟಾಗಿರುವ ಹಾನಿಯನ್ನು ಕುರಿತು ಸ್ಪಷ್ಟ ತಿಳುವಳಿಕೆಯನ್ನು ಬಿಚ್ಚಿಟ್ಟಿದ್ದಾರೆ."

ಪ್ರೊಫೆಸರ್ ಸುಶೋಭನ್ ಸರ್ಕಾರ್, ವಿಷ್ಣು ಡೇ, ಸತ್ಯಜಿತ್ ರಾಯ್, ಹಿರೇನ್ ಮುಖರ್ಜಿ, ಜಾಮಿನಿ ರಾಯ್, ನಿಹಾರ್ ರಂಜನ್ ರಾಯ್, ಎಸ್. ಎನ್. ದಾಸ್‌ಗುಪ್ತ ಮುಂತಾದ ವಿದ್ವಾಂಸರೊಂದಿಗೆ ಇವರು ಕೆಲಸ ಮಾಡದ ಕ್ಷೇತ್ರವೇ ಇಲ್ಲ. ಅವರು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿಯೂ ಮಾರ್ಕ್ಸ್‌ವಾದದ ಚಿಂತನೆಗೆ ಮಹತ್ವದ ಕೊಡುಗೆ ನೀಡಿರುವ ಶ್ರೇಷ್ಠ ದಾರ್ಶನಿಕರು. ಡಿ. ಡಿ. ಕೋಸಾಂಬಿ, ರಾಹುಲ್ ಸಾಂಕೃತ್ಯಾಯನ, ಜಾರ್ಜ್ ಥಾಮ್ಸನ್, ಜೋಸೆಫ್ ನೀಢಾಮ್, ಜೆ. ಡಿ. ಬರ್ನಾಲ್, ಗೋರ್ಡನ್ ಚೈಲ್ಡ್ ಮುಂತಾದ ಜಗತ್ತಿನ ಮಹಾ ದಾರ್ಶನಿಕರಿಗೆ ಸಮನಾಗಿ ನಿಲ್ಲಬಲ್ಲ ಪ್ರತಿಭೆ, ಸಾಮರ್ಥ್ಯ ಹಾಗೂ ವಿದ್ವತ್ತನ್ನು ಹೊಂದಿದ್ದ ಅಪೂರ್ವ ವ್ಯಕ್ತಿ ದೇವಿಪ್ರಸಾದ್. ವಾಲ್ಟರ್ ರೂಬೆನ್‌ರಂತಹ ಅಪ್ರತಿಮ ಮಾರ್ಕ್ಸ್‌ವಾದಿ ತತ್ವಜ್ಞಾನಿಯಿಂದಲೂ ಅಪಾರ ಪ್ರಶಂಸೆಗೆ ಇವರು ಪಾತ್ರರಾಗಿದ್ದರು. ಇವರ ಹಲವಾರು ಕೃತಿಗಳು ಹಲವಾರು ಭಾರತೀಯ ಭಾಷೆಗಳಿಗೆ ಅನುವಾದಿತವಾಗಿರು ವುದಲ್ಲದೆ ರಷ್ಯನ್, ಚೈನೀಸ್, ಜರ್ಮನ್ ಮತ್ತು ಜಪಾನಿ ಭಾಷೆಗಳಿಗೂ ಅನುವಾದಗೊಂಡಿವೆ.

ಆರಂಭದಲ್ಲಿ ಕಲ್ಕತ್ತೆಯ ಅಕೆಡಮಿಕ್ ಜಗತ್ತಿಗೆ ಮಾತ್ರ ಪರಿಚಿತರಾಗಿದ್ದ ದೇವಿಪ್ರಸಾದ್ ಅವರು ಅಗಾಧ ಪುಸ್ತಕಗಳ ರಚನೆಯಿಂದ ಇಡೀ ರಾಷ್ಟ್ರದ ಹಲವಾರು ವಿಶ್ವವಿದ್ಯಾಲಯಗಳ ಗಮನ ಸೆಳೆದರು. ಮೈಸೂರು, ಬೆಂಗಳೂರು ವಿಶ್ವವಿದ್ಯಾಲಯಗಳೇ ಅಲ್ಲದೆ, ಆಂಧ್ರ, ಪುಣೆ, ದೆಹಲಿ ಮುಂತಾದ ವಿಶ್ವವಿದ್ಯಾಲಯ ಗಳಲ್ಲಿ ತಮ್ಮ ಉಪನ್ಯಾಸ ನೀಡಿದ್ದಾರೆ. ಪ್ರಶಸ್ತಿಗಳು, ಸನ್ಮಾನಗಳು ಅವರನ್ನು ಹುಡುಕಿಕೊಂಡು ಬಂದವು. ಕಲ್ಕತ್ತ ವಿಶ್ವವಿದ್ಯಾಲಯ ಅವರಿಗೆ ಡಾಕ್ಟರೇಟ್ ಪ್ರಶಸ್ತಿ ಕೊಟ್ಟು ಸನ್ಮಾನಿಸಿತು. ವಿಶ್ವವಿದ್ಯಾಲಯ ಗ್ರಾಂಟ್ಸ್ ಕಮಿಷನ್‌ನ ಹರಿ ಓಂ ಪ್ರಶಸ್ತಿ, ಪಶ್ಚಿಮ ಬಂಗಾಳ ಸರ್ಕಾರದ ವಿದ್ಯಾಸಾಗರ ಪ್ರಶಸ್ತಿ ದೇವಿಪ್ರಸಾದರಿಗೆ ಸಿಕ್ಕಿದೆ. ಜರ್ಮನ್ ಡೆಮೋಕ್ರಟಿಕ್ ರಿಪಬ್ಲಿಕ್ ಮತ್ತು ಸೋವಿಯೆತ್ ರಷ್ಯಾದ ವಿಜ್ಞಾನ ಅಕಾಡೆಮಿಗಳ ಸದಸ್ಯತ್ವ ಪಡೆದ ಮೊದಲಿಗರು ಅವರು. ಸೋವಿಯೆತ್ ದೇಶದ ನೆಹರೂ ಪ್ರಶಸ್ತಿಯನ್ನು ಗಳಿಸಿದ್ದರು. ಕಲ್ಕತ್ತೆಯ ಏಷ್ಯಾಟಿಕ್ ಸೊಸೈಟಿಯಲ್ಲಿನ ಪ್ರಕಟಣ ಕಾರ್ಯದರ್ಶಿಯಾಗಿದ್ದರು.

ದೇವಿಪ್ರಸಾದರ ಜೀವಿತದ ಕಡೆಯ ದಿನಗಳನ್ನು ಅನಾರೋಗ್ಯ ಬಾಧಿಸಿತು. ಆದರೆ ಇದರಿಂದ ಅವರ ಅಧ್ಯಯನಕ್ಕೇನೂ ಕುಂದುಂಟಾಗಲಿಲ್ಲ. ಪ್ರಾಚೀನ ಭಾರತದ ವಿಜ್ಞಾನ ಮತ್ತು ತಂತ್ರಜ್ಞಾನದ ಚರಿತ್ರೆಯನ್ನು ಕುರಿತ ಮೂರನೆಯ ಸಂಪುಟದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅಂತೂ ಕಠಿಣ ಪರಿಶ್ರಮ ಹಾಗೂ ಅವಿರತ ಅಧ್ಯಯನದಿಂದಾಗಿ ಅವರ ಜೀವಿತದ ಕಾಲದಲ್ಲೇ ಮೂರನೆಯ ಸಂಪುಟದ ಕಾರ್ಯ ಮುಗಿಸಿದರು. ಅದು ಅವರ ಮರಣಾನಂತರ ಪ್ರಕಟವಾಯಿತು.

ಅವರ ಕೊನೆಯ ದಿನಗಳಂದು ಅವರನ್ನು ಆಸ್ಪತ್ರೆಯಲ್ಲಿ ಭೇಟಿ ಮಾಡಿದ್ದೆ. ೧೯೯೩ರ ಏಪ್ರಿಲ್ ತಿಂಗಳಿನಲ್ಲಿ ನಾನು ನೇಪಾಳದ ಅನ್ನಪೂರ್ಣ ಬೇಸ್ ಕ್ಯಾಂಪ್‌ನತ್ತ ಬ್ಯಾಂಕಿನ ಸ್ನೇಹಿತರೊಂದಿಗೆ ಚಾರಣಕ್ಕೆ ಹೊರಟಿದ್ದೆ. ಹೊರಡುವ ಮುನ್ನ ದೇವಿಪ್ರಸಾದರಿಗೆ ನಾನು ಮೇ ತಿಂಗಳ ಕೊನೆಯ ವಾರದಲ್ಲಿ ಕಲ್ಕತ್ತೆಗೆ



**ಎನ್. ಗಾಯತ್ರಿ, ಮೈತ್ರಿ, ದೇವಿಪ್ರಸಾದ್ ಚಟ್ಟೋಪಾಧ್ಯಾಯ, ಜಿ. ರಾಮಕೃಷ್ಣ**

ಬರುತ್ತಿದ್ದೇನೆ, ಅವರನ್ನು ಭೇಟಿಯಾಗುತ್ತೇನೆ, ಎಂದು ಒಂದು ಪೋಸ್ಟ್ ಕಾರ್ಡ್ ಹಾಕಿದ್ದೆ. ಆ ಕಾರ್ಡನ್ನು ಕೈಯಲ್ಲಿಟ್ಟುಕೊಂಡು ಅದೆಷ್ಟು ಸಂಭ್ರಮಿಸಿದರು, ಎಂದು ಅವರ ಪತ್ನಿ ಆ ನಂತರ ನನಗೆ ತಿಳಿಸಿದರು. ನಾನು ಅವರ ಮನೆಯ ಬಳಿಯೇ ಇದ್ದ ಆಸ್ಪತ್ರೆಯ ಐ.ಸಿ.ಯು.ನಲ್ಲಿ ಹಲವಾರು ಟ್ಯೂಬುಗಳಿಂದ ಸುತ್ತುವರಿದ ದೇಬಿದಾ ಅವರನ್ನು ಮೇ ೭ರಂದು ಕೊನೆಯ ಬಾರಿ ನೋಡಿದೆ. ಕೊನೆಗೆ, ಆಸ್ಪತ್ರೆಯಲ್ಲಿ ಅವರಿಗೆ ನನ್ನನ್ನು ಗುರುತಿಸಲೇ ಆಗಲಿಲ್ಲ. ಸದಾ ನಗುನಗುತ್ತಾ ತಿಳಿಹಾಸ್ಯದಿಂದ ನಮ್ಮನ್ನೆಲ್ಲ ರಂಜಿಸುತ್ತಾ ಲವಲವಿಕೆಯಿಂದಿರುತ್ತಿದ್ದ ನನ್ನ ಪ್ರೀತಿಯ ದೇಬಿದಾರವರನ್ನು ಆ ದಯನೀಯ ಸ್ಥಿತಿಯಲ್ಲಿ ನೋಡಿ ಸಂಕಟವಾಗಿ ದುಃಖ ಉಮ್ಮಳಿಸಿ ಬಂತು. ಮೇ ೮ರಂದು ಅವರು ಕೊನೆಯುಸಿರೆಳೆದರು.

ದೇಬಿದಾ ಇಲ್ಲದ ಕಲ್ಕತ್ತೆಗೆ ಭೇಟಿ ನೀಡುವುದು ಬಹಳ ಕಷ್ಟವೆನಿಸಿದರೂ ಈಗಲೂ ಶಂಭುನಾಥ್ ಪಂಡಿತ್ ರಸ್ತೆಯಲ್ಲಿರುವ ಅವರ ಮನೆಗೆ ಭೇಟಿ ನೀಡಿದಾಗಲೆಲ್ಲಾ ಅವರೊಂದಿಗೆ ಕಳೆದ ಸಾರ್ಥಕ ಸಮಯದ ಅಮೂಲ್ಯ ನೆನಪು ಮತ್ತೆ ಮತ್ತೆ ಮರುಕಳಿಸುತ್ತದೆ. ದೇಬಿದಾ ಅವರ ಮರಣಾನಂತರ ಬೆಂಗಳೂರಿನ ಮಾ–ಲೆ ಪ್ರಕಾಶನವು ಕಳೆದ ಇಪ್ಪತ್ತೈದು ವರ್ಷಗಳಿಂದಲೂ ವಾರ್ಷಿಕವಾಗಿ ದೇವಿಪ್ರಸಾದರ ಸ್ಮರಣಾರ್ಥ ಉಪನ್ಯಾಸವನ್ನು ಏರ್ಪಡಿಸುತ್ತಾ ಬರುತ್ತಿದೆ.

ಈ ವರ್ಷ ಗೂಗಲ್‌ನಲ್ಲಿ ದೇವಿಪ್ರಸಾದರ ಬಗ್ಗೆ ಮಾಹಿತಿಗೆಂದು ತಡಕಾಡಿದಾಗ ಕಂಡ ವಿಷಯವೊಂದು ಆಶ್ಚರ್ಯ ಹುಟ್ಟಿಸಿತು. ಅವರು ತೀರಿಕೊಂಡದ್ದು ೧೯೯೩. ಅವರಿಗೆ ೧೯೯೮ರಲ್ಲಿ ಭಾರತ ಸರ್ಕಾರ ಮರಣೋತ್ತರವಾಗಿ ಪದ್ಮಭೂಷಣ ಪ್ರಶಸ್ತಿಯನ್ನು ಕೊಟ್ಟಿದೆ. ಈ ವಿಷಯ ಅವರ ಕುಟುಂಬಕ್ಕಾಗಲಿ, ಸಾರಸ್ವತ ಲೋಕಕ್ಕಾಗಲಿ ಇದುವರೆಗೂ ಗೊತ್ತೇ ಆಗಿರಲಿಲ್ಲ. ರಾಷ್ಟ್ರಪತಿ ಭವನವು ಪ್ರಶಸ್ತಿ ನೀಡಿದ್ದನ್ನು ಖಚಿತಪಡಿಸಿದೆಯಾದರೂ ಕುಟುಂಬಕ್ಕೆ ಫಲಕ ಮತ್ತು ಅರ್ಹತಾ ಪತ್ರವನ್ನು ನೀಡಿಲ್ಲ ! ಇಪ್ಪತ್ತು ವರ್ಷದ ಹಿಂದೆ ಪದ್ಮಭೂಷಣ ಪ್ರಶಸ್ತಿ ಪಡೆದಿದ್ದರಿಂದ ಈ ತತ್ವಜ್ಞಾನಿಯ ಹಿರಿಮೆಗೆ ಯಾವ ಬದಲಾವಣೆಯೇನೂ ಆಗುವುದಿಲ್ಲವಾದರೂ, ಈ ನಾಡು ಕಂಡ ಅಪ್ರತಿಮ ತತ್ವಜ್ಞಾನಿಗೆ ಸರ್ಕಾರವು ತೋರಿಸಿದ ನಿರ್ಲಕ್ಷ್ಯ ಮತ್ತು ನಿರ್ಲಿಪ್ತತೆಯನ್ನು ನೆನಪಿಸಿಕೊಂಡಾಗ ಮನಸ್ಸಿಗೆ ಖೇದವಾಗುತ್ತದೆ.

ಮತಾಂಧತೆಯ ಭೀಕರ ಪರಿಣಾಮವನ್ನು ಇಡೀ ದೇಶವೇ ಅನುಭವಿಸುತ್ತಿರುವಾಗ ಮತ್ತು ಈ ಮತಾಂಧ ಶಕ್ತಿಗಳು ಇಡೀ ಭಾರತದ ಚರಿತ್ರೆಯನ್ನೇ ವಿರೂಪಗೊಳಿಸಲು ಹೊರಟಿರುವಾಗ ದೇವಿಪ್ರಸಾದರಂತಹವರ ಸೈದ್ಧಾಂತಿಕ ದರ್ಶನ ಭಾರತೀಯ ಮನಸ್ಸಿಗೆ ಮಾರ್ಗದರ್ಶಿಯಾಗುವುದರಲ್ಲಿ ಅನುಮಾನವೇ ಇಲ್ಲ. ಶ್ರಮಿಕರ ಬೌದ್ಧಿಕ ಶಿಲ್ಪಿಯಾದ, ಮಹಾನ್ ದಾರ್ಶನಿಕ ಮತ್ತು ಸೈದ್ಧಾಂತಿಕ ಮಾರ್ಗದರ್ಶಿಯಾದ ದೇವಿಪ್ರಸಾದ್ ಚಟ್ಟೋಪಾಧ್ಯಾಯರ ಕೃತಿಗಳು ಜನತೆ ದಿಕ್ಕು ತಪ್ಪಿದಾಗ ದಾರಿ ತೋರಬಲ್ಲ ಧ್ರುವತಾರೆಯಾಗಿ ಶಾಶ್ವತವಾಗಿ ಉಳಿಯುವುದರಲ್ಲಿ ಸಂಶಯವಿಲ್ಲ. ಪ್ರಸಿದ್ಧ ಮಾರ್ಕ್ಸ್‌ವಾದಿ ನಾಯಕ ಇ. ಎಂ. ಎಸ್. ನಂಬೂದಿರಿಪಾದ್ ಅವರಿಂದ 'ಸೆಕ್ಯುಲರಿಸಂ ತತ್ವಜ್ಞಾನಿ' ಎಂದು ಕರೆಸಿಕೊಂಡ ದುಡಿಯುವ ವರ್ಗದ ಶಿಲ್ಪಿಯಾದ ಪದ್ಮಭೂಷಣ ದೇವಿಪ್ರಸಾದ್ ಚಟ್ಟೋಪಾಧ್ಯಾಯ ದುಡಿಯುವ ವರ್ಗವಿರುವವರೆಗೂ ಚಿರಂತನವಾಗಿ ಉಳಿಯುತ್ತಾರೆ.

**ಡಾ॥ ಎನ್. ಗಾಯತ್ರಿ**
ನಂ. ೨೦೧, 'ಸ್ಕೈಲೈನ್ ಗೋಲ್ಡನ್ ರೇಸ್', ಛತ್ರಂ ಬ್ಲಾಕ್
ಕೆಂಪೇಗೌಡ ನಗರ, ಗವೀಪುರಂ, ಬೆಂಗಳೂರು – ೫೬೦ ೦೧೯

## ಯು. ಎಸ್. ಪಾರ್ವತಿ ಅವರಿಗೆ ನಮನ

ಸಹೃದಯಿ, ಸ್ಫುರದ್ರೂಪಿ, ಪ್ರಗತಿಪರ ಚಿಂತಕಿ ಯು. ಎಸ್. ಪಾರ್ವತಿ ಅವರು ೩ ನವೆಂಬರ್ ೨೦೧೮ರಂದು ನಮ್ಮನ್ನೆಲ್ಲ ಅಗಲಿದ್ದಾರೆ.

ಇವರು ಪುಸ್ತಕ ವ್ಯಾಪಾರಿಯೆಂದೇ ಹೆಸರುವಾಸಿಯಾಗಿರುವ ಯು. ಎಸ್. ಶ್ರೀನಿವಾಸ (ಪುವ್ಯಾಶ್ರೀ) ಅವರ ತಂಗಿ. ಅಣ್ಣ ಪುಸ್ತಕಗಳನ್ನು ಓದುಗರ ಬಳಿಗೆ ಕೊಂಡೊಯ್ದುಕೊಡುತ್ತಿದ್ದರೆ, ಪಾರ್ವತಿಯವರು ನೂರಾರು ಪುಸ್ತಕಗಳನ್ನು ಕಾಲೇಜು ವಿದ್ಯಾರ್ಥಿಗಳಿಗೆ ಉಡುಗೊರೆಯಾಗಿ ಕೊಡುತ್ತಿದ್ದರು. 'ಹೊಸತು' ಪತ್ರಿಕೆ ಪ್ರಾರಂಭದಿಂದಲೂ ನೂರಾರು ಚಂದಾದಾರರನ್ನು ಪರಿಚಯಿಸಿದ್ದಾರೆ, ಅಷ್ಟೇ ಅಲ್ಲದೆ ೨೦೧೦ರಿಂದಲೂ ಉತ್ತಮ ಮಹಿಳಾ ಲೇಖನಗಳಿಗೆ ಬಹುಮಾನವನ್ನು ನೀಡುತ್ತ ಬಂದಿದ್ದರು. ೧೯೪೭, ೨೦ನೇ ಡಿಸೆಂಬರ್‌ನಲ್ಲಿ ಯು. ಎಸ್. ಸಾಕಮ್ಮ ಮತ್ತು ಯು. ವಿ. ಸೀತಾರಾಮಯ್ಯ ಅವರ ಮಗಳಾಗಿ ಬೆಂಗಳೂರಿನಲ್ಲಿ ಜನಿಸಿದರು. ತಮ್ಮ ೭೧ ವರುಷದ ಜೀವಿತ ಅವಧಿಯಲ್ಲಿ ೩೩ ವರುಷ ಬೆಂಗಳೂರಿನ ಮಹಾರಾಣಿ ಸೈನ್ಸ್ ಫಾರ್ ವಿಮೆನ್ಸ್ ಕಾಲೇಜಿನಲ್ಲಿ ಪ್ರಾಣಿಶಾಸ್ತ್ರದ ಪ್ರಾಧ್ಯಾಪಕಿ ಆಗಿದ್ದರು. ಪಾರ್ವತಿಯವರು ಆ ಕಾಲದಲ್ಲಿ ಹಿಂದುಳಿದ ವಿದ್ಯಾರ್ಥಿನಿಯರಿಗೆ ಕಾಲೇಜು ಆರಂಭವಾಗುವ ಮೊದಲೇ ವಿಶೇಷವಾಗಿ ಪಾಠವನ್ನು ಹೇಳಿಕೊಡುತ್ತಿದ್ದರು. ಅವರಿಗೆ ಕೊಡಿಸಬೇಕಾದ ವಿದ್ಯಾರ್ಥಿವೇತನದ ಬಗ್ಗೆ ಕಾಳಜಿ ವಹಿಸುತ್ತಿದ್ದರು. ಆದ್ದರಿಂದಲೇ ವಿದ್ಯಾರ್ಥಿಗಳ ಅಚ್ಚುಮೆಚ್ಚಿನ ಮೇಡಂ ಆಗಿದ್ದರು. ಯಾವಾಗಲೂ ಚೈತನ್ಯದ ಚಿಲುಮೆಯಾಗಿದ್ದವರು ಜುಲೈ ೨೭, ೧೯೯೮ರಲ್ಲಿ ಮಲ್ಟಿಪಲ್ ಸ್ಕ್ಲೀರೋಸಿಸ್ ಎಂಬ ಅಪರೂಪದ ಕಾಯಿಲೆಗೆ ಬಲಿಯಾದರು. ಈ ಕಾಯಿಲೆಯಿಂದ ಅವರ ದೇಹ ಜರ್ಝರಿತವಾಗಿತ್ತು. ಸುಮಾರು ೨೦ ವರುಷ ಮಲಗಿದ್ದ ಕಡೆಯೇ ಇರಬೇಕಾದಂತಹ ಸ್ಥಿತಿಯಲ್ಲಿದ್ದರೂ ಆ ನೋವನ್ನು ಯಾರೊಂದಿಗೂ ಹೇಳಿಕೊಳ್ಳುತ್ತಿರಲಿಲ್ಲ. ಉತ್ತಮ ವಾಗ್ಮಿಯಾಗಿದ್ದ ಅವರು, ನೋಡಲು ಬಂದವರನ್ನು ಅವರ ಯೋಗಕ್ಷೇಮ ವಿಚಾರಿಸಿ, ಆತಿಥ್ಯವನ್ನು ಕೊಡಿಸಿ, ನಗಿಸಿ ಕಳಿಸುತ್ತಿದ್ದರು. ಔಷಧ ಸೇವಿಸುವಾಗ ನನಗಿಷ್ಟಾದರೂ ಲಭ್ಯ ಇದೆ, ಇಲ್ಲದವರ ಪಾಡೇನು ಎಂದು ಯೋಚಿಸುತ್ತಿದ್ದರು. ತಮ್ಮ ಹಣದಿಂದ ಪ್ರತಿ ತಿಂಗಳು ೭ ಜನರಿಗೆ ಔಷಧಿ ಪಥ್ಯ ನೀಡಲು ನೆರವಾಗುತ್ತಿದ್ದರು. ಇವರು ಸಾವಿನಲ್ಲಿಯೂ ತಮ್ಮ ಸೇವೆಯನ್ನು ಮರೆಯಲಿಲ್ಲ. ಪಾರ್ವತಿಯವರ ಸಹೋದರರು ಕಮ್ಯುನಿಸ್ಟ್ ಚಳುವಳಿಯಲ್ಲಿದ್ದವರು. ಅವರ ತಾಯಿ ಸಾಕಮ್ಮನವರು ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಭೂಗತರಾಗಿದ್ದ ಕಮ್ಯುನಿಸ್ಟ್ ನಾಯಕರಿಗೆ ಅನ್ನ, ಆಶ್ರಯ ಕೊಟ್ಟವರು. ಅಂಥ ಕುಟುಂಬದ ಶ್ರೀಮತಿ ಪಾರ್ವತಿಯವರು ಸ್ವಯಂ ಎದ್ದುಕೂರಲಾಗದ ಸ್ಥಿತಿಯಲ್ಲಿದ್ದರೂ ಸಾಮಾಜಿಕ ಕಳಕಳಿಯನ್ನು ಹೊಂದಿದ್ದರು. ನವಕರ್ನಾಟಕ ಪ್ರಕಾಶನದ ಮೂಲಕ ನೂರಾರು ವಿದ್ಯಾರ್ಥಿಗಳಿಗೆ ಉಚಿತವಾಗಿ ಪುಸ್ತಕಗಳನ್ನು ಈ ವರ್ಷ ಸಹಿತ ಕೊಡಿಸಿದ್ದರು. ಅವರಿಷ್ಟದಂತೆ, ಅವರ ಮೃತದೇಹವನ್ನು ರಾಮಯ್ಯ ಆಸ್ಪತ್ರೆಗೆ ಮತ್ತು ಮೆದುಳನ್ನು ನಿಮ್ಹಾನ್ಸ್‌ಗೆ ಸಂಶೋಧನೆ ಮತ್ತು ಬೋಧನೆಗಾಗಿ ನೀಡಲಾಯಿತು. ಇಂತಹ ಚಿರಸ್ಮರಣೀಯರನ್ನು ಕಳೆದುಕೊಂಡಿರುವುದು 'ನವಕರ್ನಾಟಕ' ಹಾಗೂ 'ಹೊಸತು'ವಿಗೆ ತುಂಬಲಾರದ ನಷ್ಟ.





# ಅಂಬೇಡ್ಕರ್ ಮತ್ತು ಕನ್ನಡ ಮಹಾಭಾರತಗಳು

ಕನ್ನಡ ಮಹಾಭಾರತಗಳು ಅಸುರ ಹಾಗೂ ರಾಕ್ಷಸರನ್ನು ಮಾನವೇತರ ಪ್ರಪಂಚದ ಜೀವಿಗಳನ್ನಾಗಿ ವರ್ಣಿಸಿವೆ. ಬಕನಂತಹವನು ಬಂಡಿ ಹೊರೆಯಷ್ಟು ಆಹಾರ ತಿನ್ನುತ್ತಿದ್ದನೆಂದು ಚಿತ್ರಿಸಿವೆ. ಹಾಗೆಯೇ ಅವರ ಜೀವನ ರೂಢಿಗಳಿಂದ ಅನಾಗರಿಕರಾಗಿ, ಬಣ್ಣ, ದೇಹದ ಗಾತ್ರಗಳಿಂದ ಕುರೂಪಿಗಳಾಗಿ, ಸಹಜವಲ್ಲದ ಜನನ ಕ್ರಿಯೆಗಳಿಂದಾಗಿ, ಮಾನವರಿಗಿಂತಲೂ ಭಿನ್ನರಾಗಿದ್ದರೆಂದು ಕಂಡುಬರುತ್ತಾರೆ. ವನವಾಸಿಗಳಾದ ನಾಗರು ಸರ್ಪ ಅಥವಾ ಹಾವುಗಳಾಗಿದ್ದಾರೆ. ಅಂಬೇಡ್ಕರರು ಇವರನ್ನೇ ಮೂಲ ನಿವಾಸಿಗಳೆಂದು ಗುರುತಿಸುತ್ತಾರೆ.




### ಮಹಾಭಾರತ ರಚನೆ ಮತ್ತು ಬೆಳವಣಿಗೆ

ಅಂಬೇಡ್ಕರರು ಹಿಂದೂಗಳು ಮಹಾಭಾರತವನ್ನು ಶ್ರೇಣೀಕೃತ ಸಮಾಜವನ್ನು ಕಾಯ್ದುಕೊಳ್ಳುವ ಹಾಗೂ ಮುಂದುವರೆಸುವ ಉದ್ದೇಶದಿಂದ ಬಳಸಿಕೊಂಡಿದ್ದನ್ನು ಮನಗಂಡಿದ್ದಾರೆ. ಅದರಿಂದಲೇ ಸಾಮಾಜಿಕ ಸ್ಥಾನಮಾನವನ್ನು, ಧಾರ್ಮಿಕ ಅಧಿಕಾರವನ್ನು ಪಡೆದುಕೊಂಡಿದ್ದನ್ನು ಕಂಡುಕೊಂಡಿದ್ದಾರೆ. ಈ ಕಾರಣದಿಂದಲೇ ಭಾರತದ ರಚನೆ ಹಾಗೂ ಬೆಳವಣಿಗೆ ಮತ್ತು ವಸ್ತುವಿನ ಹಿನ್ನೆಲೆಯಲ್ಲಿ ಸಾಕಷ್ಟು ಬರವಣಿಗೆಯನ್ನು ಮಾಡಿದ್ದಾರೆ. ಭಾರತದ ಕಾಲವನ್ನು ಚಾರಿತ್ರಿಕ ಹಾಗೂ ಧಾರ್ಮಿಕ ಆಧಾರಗಳ ಸಹಾಯದಿಂದ ನಿಷ್ಕರ್ಷಿಸಲು ಪ್ರಯತ್ನಿಸಿದ್ದಾರೆ.

ಕಾಲ ಬದಲಾದಂತೆ ಆಯಾ ಕಾಲದ ಕವಿಗಳು ಭಾರತ ಕತೆಯನ್ನು ವಿಸ್ತರಿಸುತ್ತಾ ಹೋದರು. ಹಾಗಾಗಿ ಭಾರತದ ಶೀರ್ಷಿಕೆ ಬದಲಾಗುತ್ತಾ ಮತ್ತು ವಸ್ತು ವಿಷಯಗಳು ಸೇರ್ಪಡೆಯಾಗುತ್ತಾ ಒಟ್ಟು ಮೂರು ಆವೃತ್ತಿಗಳಲ್ಲಿ ಬೆಳೆಯಿತು. ಮಹಾಭಾರತದ ಮೂಲ ಸ್ವರೂಪದ ಶೀರ್ಷಿಕೆ 'ಜಯ'. ಈ ಆವೃತ್ತಿಯ ಕರ್ತೃ ವ್ಯಾಸ. ಜಯದ ಎರಡನೇ ಆವೃತ್ತಿಯ ಹೆಸರು ಭಾರತ. ಈ ಎರಡನೇ ಆವೃತ್ತಿಯ ಕರ್ತೃ ವೈಶಂಪಾಯನ. ಮೂರನೇ ಆವೃತ್ತಿಯ ಕರ್ತೃ ಸೌತಿ. ಈತನ ಆವೃತ್ತಿಯೇ ಮಹಾಭಾರತವೆಂದು ಕರೆಯಲ್ಪಟ್ಟಿತು. ವ್ಯಾಸನ 'ಜಯ'ವು ೮,೮೦೦ ಶ್ಲೋಕಗಳನ್ನು ಒಳಗೊಂಡಿತ್ತು. ಅದು ವೈಶಂಪಾಯನನಿಂದ ೨೪,೦೦೦ ಶ್ಲೋಕಗಳಿಗೆ ಏರಿತು. ನಂತರ ಸೌತಿ ಅದನ್ನು ೯೬,೮೩೬ ಶ್ಲೋಕಗಳಿಗೆ ವಿಸ್ತರಿಸಿ, ಮಹಾಭಾರತವನ್ನಾಗಿಸಿದನು. ಈ ಸೃಷ್ಟಿ ಹಾಗೂ ಮರುಸೃಷ್ಟಿಗಳ ನಡುವೆ ಮಹಾಭಾರತದ ವಸ್ತು ಕೌರವ–ಪಾಂಡವರ ಚಾರಿತ್ರಿಕ ಯುದ್ಧ ಕತೆಯೊಂದಿಗೆ; ನೀತಿಬೋಧೆಯೂ ಸೇರ್ಪಡೆಯಾಗಿ ಸಾಮಾಜಿಕ, ನೈತಿಕ ಹಾಗೂ ಧಾರ್ಮಿಕ ಕರ್ತವ್ಯಗಳನ್ನು ಬೋಧಿಸುವ ಉಪದೇಶಾತ್ಮಕ ಕೃತಿಯಾಯಿತು. ಕಡೆಯದಾಗಿ ಸರ್ವಗ್ರಾಹಿ ಐತಿಹ್ಯಗಾಥೆಗಳನ್ನು, ಸಣ್ಣಪುಟ್ಟ ಸ್ವತಂತ್ರ ಕತೆಗಳು, ಕಲಿಕೆ ಹಾಗೂ ಜ್ಞಾನ ಶಾಖೆಗಳು ಜಯ ಮತ್ತು ಭಾರತದ ಒಡಲೊಳಗೆ ಆಗಿಹೋದ ಘಟನೆಗಳಂತೆಯೇ ಸೇರಿದವು.

ಹೀಗೆ ಮೂಲ ಕತೆಗೆ ಕುಂದು ಉಂಟಾಗದಂತೆ ಬೆಳೆದ ಮಹಾಭಾರತವನ್ನು ಬ್ರಾಹ್ಮಣರು ಹಿಂದೂ ಧರ್ಮದ ರಕ್ಷಣೆಯ ಕೋಟೆಯನ್ನಾಗಿ ಮಾಡಿಕೊಂಡರು. ಅನ್ಯಧರ್ಮಗಳಿಂದ ಪ್ರೇರಿತರಾದ ಶೂದ್ರರು ದೇವರುಗಳನ್ನು ಬಹಿಷ್ಕರಿಸುವರು. ದ್ವಿಜರ ಸೇವೆ ಮಾಡಲಾರರು. ಅಲ್ಲದೆ, ದ್ವಿಜರು ಪ್ರಭುತ್ವದ ರಕ್ಷಣೆಯಿಲ್ಲದೆ ಜಗತ್ತನ್ನು ಸುತ್ತುವಂತಾಗುತ್ತದೆ. ಇದರಿಂದಾಗಿ ಹಿಂದೂ ಸಮಾಜ ಅವನತಿಯಾಗುತ್ತದೆ ಎಂದು ಹಿಂದೂಗಳು ಭಯಗೊಂಡರು. ಇಂತಹ ಮಹಾಭಾರತ ಪುರಾಣಗಳ ಮೂಲಕ ಸಮಾಜವನ್ನು ರಕ್ಷಿಸಲು ಮುಂದಾದರು. ಅದರ ಪರಮ ಉದ್ದೇಶವೇ ಹಿಂದೂಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದಾಗಿತ್ತು. ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಹಿಡಿತವನ್ನು ಸಾಧಿಸುವ ಮೂಲಕ ರಾಜಕಾರಣವನ್ನು ನಿಯಂತ್ರಿಸುವ ಹುನ್ನಾರವೂ ಅಡಗಿತ್ತು ಎಂಬುದನ್ನು ಅಂಬೇಡ್ಕರರು ವಿಶ್ಲೇಷಿಸಿದ್ದಾರೆ. ಇಂತಹ ಪುರಾಣಗಳು ಮೂಲ ನಿವಾಸಿಗಳನ್ನು ತುಳಿದಿದ್ದನ್ನು ಆಧಾರ ಸಹಿತವಾಗಿ ವಿಶದೀಕರಿಸಿದ್ದಾರೆ. ಹಾಗೆಯೇ ಪುರಾಣಗಳನ್ನು ಧಿಕ್ಕರಿಸುವ ಮೂಲಕ ಹೊರಬರುವ ಸಾಧ್ಯತೆಗಳನ್ನು ತೋರಿಸಿದ್ದಾರೆ. ಒಟ್ಟಂದದಲ್ಲಿ ಒಂದು ಧರ್ಮವು ತನ್ನಲ್ಲಿರುವ ಬಹುಜನ ಪ್ರಚಲಿತ ಪ್ರಾಚೀನ ಪಠ್ಯವನ್ನು ಆಗಿಂದಾಗ್ಗೆ ಪರಿಷ್ಕರಿಸುತ್ತಿರುತ್ತದೆ. ಆ ಪರಿಷ್ಕರಣೆಯೂ ಸುಧಾರಣೆಯನ್ನು ಬಯಸುವಂಥದ್ದಾಗಿರದೆ, ತನ್ನ ರಕ್ಷಣೆಯನ್ನೇ ಮಾಡಿಕೊಳ್ಳುವಂತಿರುತ್ತದೆ ಎಂಬುದನ್ನು ಸ್ಪಷ್ಟಪಡಿಸಿಕೊಳ್ಳಬಹುದು.

**ರವಿ ಸಿದ್ಲಿಪುರ**

ಮಹಾಭಾರತವನ್ನು ಕುರಿತು ಚರ್ಚಿಸಿರುವ ಅಂಬೇಡ್ಕರರ ಬರವಣಿಗೆಯಲ್ಲಿ ಬಹುಮುಖ್ಯವಾಗಿ ಕೆಲವು ಅಂಶಗಳನ್ನು ಗುರುತಿಸಬಹುದು. ಅವುಗಳು ಹೀಗಿವೆ:

೧. ಮಹಾಭಾರತವು ಹಿಂದೂ ಸಮಾಜ ಸ್ಥಾಪಿಸಿರುವ ಚಾತುರ್ವರ್ಣ್ಯ ವ್ಯವಸ್ಥೆಯನ್ನು ಕಾಪಾಡುವಂತೆ ರಚಿಸಲ್ಪಟ್ಟಿದೆ.

೨. ಚಾತುರ್ವರ್ಣ್ಯ ವ್ಯವಸ್ಥೆಯಲ್ಲಿ ಉನ್ನತ ವರ್ಣದವರ ಹಿತಾಸಕ್ತಿಯನ್ನು ಪೋಷಿಸುತ್ತದೆ.

೩. ಉನ್ನತ ವರ್ಣವನ್ನು ಹಾಗೂ ಅವರು ನಿರ್ದೇಶಿಸುವ ಸಾಮಾಜಿಕ ವ್ಯವಸ್ಥೆಯನ್ನು ಕಾಪಾಡುವ ಪ್ರಭುತ್ವದ ಕ್ರಿಯೆಯೊಂದಿಗೆ ಕಾರ್ಯಕಾರಣ ಸಂಬಂಧ ಹೊಂದಿದೆ.

೪. ಮಹಾಭಾರತವು ಮನು ಪ್ರತಿಪಾದಿಸಿದ ರಾಜಕೀಯ, ಸಾಮಾಜಿಕ, ಧಾರ್ಮಿಕ ನೀತಿಗಳನ್ನು ಪರೋಕ್ಷವಾಗಿ ಪ್ರತಿಪಾದಿಸುತ್ತದೆ.

೫. ಒಂದೆರಡು ವರ್ಗಗಳಿಗೆ ಪೂರಕವಾಗಿ ಭಾರತವಸ್ತು ನಿರೂಪಣೆಗೊಂಡಿದೆ.

೬. ಮಹಾಭಾರತ ಹೆಣ್ಣನ್ನು ಗಂಡಿನ ಭೋಗದ ಸರಕನ್ನಾಗಿ ಚಿತ್ರಿಸಿದೆ.

೭. ಭಾರತ ಕಥೆಯಲ್ಲಿನ ಸಾಮಾನ್ಯರ ಸ್ಥಿತಿಗತಿ ಸಮಕಾಲೀನ ಭಾರತದ ಶೋಷಿತ ವರ್ಗವನ್ನೇ ಹೋಲುತ್ತದೆ.

೮. ಅಂಬೇಡ್ಕರರು ಮಹಾಭಾರತ ಕಥೆಯಲ್ಲಿ ಶೋಷಣೆಗೆ ಒಳಗಾದವರನ್ನು ಚಾರಿತ್ರಿಕವಾದ ದಾಖಲೆಗಳ ಸಹಿತ ಭಾರತದ ಮೂಲ ನಿವಾಸಿಗಳೆಂದೇ ಗುರುತಿಸುತ್ತಾರೆ.

೯. ಸಹ ಮನುಷ್ಯರನ್ನೇ ನಾಶಗೊಳಿಸುವ ಕಾರ್ಯಕ್ಕೆ ಧರ್ಮದ ಲೇಪನವನ್ನು ಹಚ್ಚಿ ಸಮರ್ಥಿಸಿಕೊಳ್ಳುತ್ತದೆ.

೧೦. ಭಾರತ ಪಠ್ಯಗಳ ರಚನೆಯಲ್ಲಿಯೇ ಸಾಂಸ್ಕೃತಿಕ ರಾಜಕಾರಣವಿದೆ. ಹಾಗಾಗಿ ಪ್ರಧಾನ ಕಥೆಯಲ್ಲಿ ಅಸುರ, ರಾಕ್ಷಸ, ನಾಗಗಳು ದಬ್ಬಾಳಿಕೆಗೆ ಒಳಗಾಗಿದ್ದಾರೆ. ಅದರ ಉದ್ದೇಶ ಅವರನ್ನು ಶಸ್ತ್ರ-ಶಾಸ್ತ್ರಗಳಿಂದ ದೂರವಿರಿಸುವುದಾಗಿದೆ.

**ಕನ್ನಡ ಭಾರತಗಳ ಕಥಾ ಚಲನೆ**

ಪಾಂಡವರು ಅರಗಿನಮನೆ ದಹನ ನಂತರ 'ತೆಂಕಮೊಗದೆ' ಪಯಣ ನಡೆಸುತ್ತಾರೆ. ಇವರೊಂದಿಗೆ ಭಾರತದ ಚಲನೆ ದಕ್ಷಿಣಾಭಿಮುಖವಾಗಿ ಸಾಗುತ್ತದೆ. ಈ ಚಲನೆಯಲ್ಲಿ ಅನೇಕ ಸಂಘರ್ಷಗಳಾಗುತ್ತವೆ. ಅವುಗಳು ಯೋಜಿತವಲ್ಲದ, ಸಂದರ್ಭೋಚಿತ ಸಂಘರ್ಷಗಳಾಗಿವೆ. ಮೇಲ್ನೋಟಕ್ಕೆ ಉಳಿಯುವುದಕ್ಕಾಗಿ ನಡೆಸುವ ಹೋರಾಟದಂತೆ ಕಾಣುತ್ತವೆ. ಪ್ರಭುತ್ವವನ್ನು ಸಂಘಟಿಸುವುದೇ ಅವುಗಳ ಉದ್ದೇಶವಾಗಿದೆ. ಜೊತೆಗೆ ಸಾಮಾಜಿಕ ಮತ್ತು ರಾಜಕೀಯ ಪಲ್ಲಟಗಳು ಉಂಟಾಗಿವೆ.

ಕನ್ನಡ ಮಹಾಭಾರತಗಳು ಅಸುರ ಹಾಗೂ ರಾಕ್ಷಸರನ್ನು ಮಾನವೇತರ ಪ್ರಪಂಚದ ಜೀವಿಗಳನ್ನಾಗಿ ವರ್ಣಿಸಿವೆ. ಬಕನಂತಹವನು ಬಂಡಿ ಹೊರೆಯಷ್ಟು ಆಹಾರ ತಿನ್ನುತ್ತಿದ್ದನೆಂದು ಚಿತ್ರಿಸಿವೆ. ಹಾಗೆಯೇ ಅವರ ಜೀವನ ರೂಢಿಗಳಿಂದ ಅನಾಗರಿಕರಾಗಿ, ಬಣ್ಣ, ದೇಹದ ಗಾತ್ರಗಳಿಂದ ಕುರೂಪಿಗಳಾಗಿ, ಸಹಜವಲ್ಲದ ಜನನ ಕ್ರಿಯೆಗಳಿಂದಾಗಿ, ಮಾನವರಿಗಿಂತಲೂ ಭಿನ್ನರಾಗಿದ್ದರೆಂದು ಕಂಡುಬರುತ್ತಾರೆ. ವನವಾಸಿಗಳಾದ ನಾಗರು ಸರ್ಪ ಅಥವಾ ಹಾವುಗಳಾಗಿದ್ದಾರೆ. ಅಂಬೇಡ್ಕರರು ಇವರನ್ನೇ ಮೂಲ ನಿವಾಸಿಗಳೆಂದು ಗುರುತಿಸುತ್ತಾರೆ.

**ಅರಣ್ಯವಾಸಿಗಳು : ಹಿಡಿಂಬ-ಬಕ**

ಕಾಡಿನ ಮೂಲವಾಸಿಗಳನ್ನು ರಾಕ್ಷಸರೆಂದು ಕರೆಯಲಾಗಿದೆ. ಹಿಡಿಂಬ ತಾನು ಆಳುತ್ತಿದ್ದ ಘೋರಾರಣ್ಯವನ್ನು ಪಾಂಡವರು ಪ್ರವೇಶಿಸಿದ್ದನ್ನು ಅವನು ಬಹುಬೇಗ ಪತ್ತೆಹಚ್ಚುತ್ತಾನೆ. ಯಾರೇ ತನ್ನ ಭೂಪ್ರದೇಶವನ್ನು ಅತಿಕ್ರಮಣವಾಗಿ ಪ್ರವೇಶಿಸಿದ್ದನ್ನು ಅರಿಯುವ ಜಾಣ್ಮೆ ಹಿಡಿಂಬನಲ್ಲಿದೆ. ಅರಣ್ಯವಾಸಿಗಳು ತಮ್ಮ ಪ್ರದೇಶಕ್ಕೆ ಹೊಸಬರನ್ನು ಸೇರಿಸುವುದಿಲ್ಲ ಎಂಬುದು ತಿಳಿಯುತ್ತದೆ. ಇದು ಅವರಿಗೆ ಪರಿಸರ ಕಲಿಸಿದ ಜ್ಞಾನವಾಗಿದೆ. ಹಿಡಿಂಬನ ವನವು ಭೌಗೋಳಿಕ ಸಮೃದ್ಧತೆಯನ್ನು ಹೊಂದಿರುವುದನ್ನು ಕಾವ್ಯಗಳು ಚಿತ್ರಿಸಿವೆ. ನಂತರ ಭೀಮನಿಂದ ಹತನಾಗುವ ಹಿಡಿಂಬನ ವನವು ಪಾಂಡವರ ಸಾಮ್ರಾಜ್ಯ ವಿಸ್ತರಣೆಯ ಭಾಗಕ್ಕೆ ಸೇರಿಕೊಳ್ಳುತ್ತದೆ. ಅವನ ತಂಗಿ ಹಿಡಿಂಬೆಯನ್ನು ಭೀಮ ವರಿಸುತ್ತಾನೆ. ಅವರಿಬ್ಬರ ಸಂಪರ್ಕದಿಂದ "ಪುಟ್ಟುವುದು ಮೀಶ್ವರಕಲ್ಪಿತದಿಂ ರಾಕ್ಷಸರ್ಗೆ ಸದ್ಯೋಗರ್ಭಮುಂ ಸದ್ಯಃ ಪ್ರಸೂತಿಯುಂ ಸದ್ಯೋಯೌವನಮುಮುಳ್ಳ ಕಾರಣದಿಂದಾಗಳೆ ಷೋಡಶ ವರ್ಷದ ಕುಮಾರನಾಗಿ" ಘಟೋತ್ಕಚನು ಜನಿಸುತ್ತಾನೆ. ಭೀಮ ಅವನ ಹುಟ್ಟಿಗೆ ಕಾರಣನಾಗಿದ್ದರೂ ಪ್ರಕೃತಿ ಸಹಜವಾದ ಜನನ, ಬೆಳವಣಿಗೆಗಳಿಲ್ಲ. ಅವನನ್ನು ತಾಯಿಯ ಹತ್ತಿರವೇ ಬಿಡುತ್ತಾರೆ. ಅಂದರೆ ತಮ್ಮ ಪರವಾಗಿರುವ ಸಾಮಂತ ರಾಜನನ್ನು ನೇಮಿಸುತ್ತಾರೆ. ವಿವಾಹ ಮಾಡಿಕೊಳ್ಳುವ ಮೂಲಕ ಸಾಮಾಜಿಕವಾಗಿ ಮತ್ತು ಹಿಡಿಂಬನ ಸಾವು, ಘಟೋತ್ಕಚನ ನೇಮಕ ರಾಜಕೀಯವಾಗಿ ಪಲ್ಲಟಗಳನ್ನು ಉಂಟುಮಾಡಿದೆ. ಪಾಂಡವರು ವನವಾಸದ ದಿನಗಳನ್ನು ಕಷ್ಟದ ದಿನಗಳೆಂದು ಭಾವಿಸಿದ್ದಾರೆ. ಅವರ ಬಗ್ಗೆ ಪಟ್ಟಣದ ಜನರೇ ದುಃಖಿಸುತ್ತಾರೆ. ಆದರೆ ವನದಲ್ಲೇ ವಾಸಮಾಡುವ ಜನರ ಬಗ್ಗೆ ಮರುಕ ವ್ಯಕ್ತಪಡಿಸುವುದಿಲ್ಲ. ಒಬ್ಬರಿಗೆ ಒದಗುವ ಕಷ್ಟ ಅಥವಾ ದುಃಖ ಎಲ್ಲರನ್ನೂ ಮಿಡಿಯುವಂತೆ ಮಾಡುತ್ತದೆ. ಅದೇ ಬಹುಜನ ವನವಾಸಿಗಳ ಕಷ್ಟ ಪಟ್ಟಣಿಗರಿಗೆ ವಿಶೇಷವಾಗುವುದಿಲ್ಲ.

ಬಕನ ಕಾಡು ಇರುವುದು ಏಕಚಕ್ರನಗರದ ದಕ್ಷಿಣ ಭಾಗದಲ್ಲಿ. ರಾಕ್ಷಸರೆಂದು ಯಾರನ್ನೆಲ್ಲಾ ಕರೆಯಲಾಗಿದೆಯೋ ಅವರೆಲ್ಲ ತೆಂಕಣದಿಕ್ಕಿನಲ್ಲಿಯೇ ಇದ್ದಾರೆ. ಈ ದಿಕ್ಕಿನಲ್ಲಿ ವಾಸಿಸುವವರನ್ನೆ ರಾಕ್ಷಸರೆಂದೇ ಗುರುತಿಸಿರುವ ವರ್ಗವಿದೆ. ಪಾಂಡವರು ಏಕಚಕ್ರನಗರದ ವಾಸಿಗಳಾಗಿದ್ದ ಸಂದರ್ಭದಲ್ಲಿ ಬಕ ರಾಕ್ಷಸನ ಸಂಹಾರ ನಡೆಯುತ್ತದೆ. ಈ ಸಂಹಾರವು ಅನೇಕ ಪ್ರಶ್ನೆಗಳನ್ನು ಉಳಿಸುತ್ತದೆ. ಒಂದೆಡೆ ಸಂಪದ್ಭರಿತವಾದ ಏಕಚಕ್ರನಗರ; ಇನ್ನೊಂದೆಡೆ ಹಸಿದು ಕೂಳಿಗಾಗಿ ಕಾಯುವ ಬಕ. ಇಂತಹ ಸಂಗತಿಗಳು ಅಂದಿನ ಸಾಮಾಜಿಕ ಪರಿಸರವನ್ನು ವಿಭಿನ್ನವಾಗಿ ಅರ್ಥ ಮಾಡಿಕೊಳ್ಳಲು ಸಹಕಾರಿಯಾಗಿವೆ. ಅವನನ್ನು ಕೊಂದ ಭೀಮ "ರಕ್ಕಸನ ಕರಿಯ ಪಿರಿಯೊಡಲ"ನ್ನು ಎಳೆದು ತರುತ್ತಾನೆ. ಅವನ ಬಣ್ಣದ ಮೂಲಕವೂ ದಕ್ಷಿಣಾವಾಸಿಗಳನ್ನು ಕನಿಷ್ಠರನ್ನಾಗಿ ಗುರುತಿಸಲಾಗಿದೆ.

ಅಂಗಗೊರುಬನೆಂಬ ರಾಕ್ಷಸ ಬ್ರಾಹ್ಮಣರನ್ನು ತಿನ್ನುವುದಕ್ಕೆ ಬಂದಾಗ ಅವನು : "ಆಕಾಸ್ಕೂ ಭೂಮ್ಗೂ ಕೀಲು ಕೊಟ್ಟಂಗೆ/ ದೊಡ್ಡದೊಂದು ತೆಂಗೀನ ಮರದ ಉದ್ದಾಕೆ/ರಾಕ್ಷನು ಅವರ ಮುಂದುಗಡೆ ನಿಂತೋವುನೆ/ಮಂಡೇಯ ಕೂದಾಲು ನೆಲವ ಗುಡುಸೀತು/ಮೈಯಿನ ತುಂಬ ಮೊಳದುದ್ದ ಕೂದಾಲು/ಹೆಬ್ಬಂಡೆ ಗಾತ್ರುಕೆ ರಾಕ್ಷನ ತಲೆಯು/ಹಡುಗಾತ್ರ ಆ ಕಡೆಗು ಈ ಕಡೆಗು ಕಿವಿಗಳು/ ಮೊಕುದ ಮಧ್ಯದಲ್ಲಿ ಗೆರ್ಸಿಯ ಅಗುಲ್ಕೆ/ ಒಂದೇ ಒಂದು ಕಣ್ಣು ಆ ರಾಕ್ಷನೀಗೆ/ ಕ್ವಾಟೆಯ ಬಾಕುಲಂಗೆ ಬಾಯ ಬುಟುಕೊಂಡು/ ಕಾಡುಕ್ವಾಣದ ಗಾತ್ರ ತುಟಿಗಳ ಕಚ್ಚುತ್ತ /ಒಂದೊಂದು ಮಾರು ಒಂದೊಂದು ಕ್ವಾರಲ್ಲು/ತ್ಯಾಗದ ಮರದುದ್ದದ ತೋಳುಗಳ ಬೀಸುತ/ ಗುಡ್ಡದ ಗಾತ್ರ ದೊಡ್ಡದಾದ ಹೊಟ್ಟೆ /ಆಲದ ಮರುದ್ಗಾತ್ರ ಅವನ ತೊಡೆಗಳು/ ಒಂದೊಂದು ಬಂಡೆ ಗಾತ್ರ ಒಂದೊಂದು ಕುಂಡಿ/ ಅರಮನೆ ಹೆಗ್ಗಂಬದಂತಿರೊ ಕಾಲುಗಳು/ನಡುದ್ರೆ ನೆಲ ನಡುಗೊ ಅಪಾಪಾಟಿ ಪಾದಗಳು/ಟಾರೆಣ್ಣೆಯಂಥ ಕರ್ರನೆ ಮೈಯಿ/ಅವ್ನು ಮಾತಾಡುದ್ರೆ ಗುಡುಗಿನ ಸಪ್ತ" - ಹೀಗೆ ಇದ್ದಾನೆಂದು ಜನಪದ ಮಹಾಭಾರತವು ವರ್ಣಿಸುತ್ತದೆ.

ಕನ್ನಡ ಮಹಾಭಾರತಗಳು ಚಿತ್ರಿಸಿರುವ ಜರಾಸಂಧ, ಶಿಶುಪಾಲ, ಸಹಸ್ರ ಕವಚ ಡಂಬಕಾಸುರರೂ "...ಕೂಡ ಜನ-ವಿಶೇಷ ಎನಿಸುವ ಮನುಷ್ಯ ಜೀವಿಗಳು. ಅಸುರರು ಸೃಷ್ಟಿಕರ್ತನಾದ ಪ್ರಜಾಪತಿಯ ವಂಶಜರೆಂದು 'ಶತಪಥ ಬ್ರಾಹ್ಮಣ'ವು ಹೇಳುತ್ತದೆ. ಅಂಥವರು ಹೇಗೆ ದುಷ್ಟಶಕ್ತಿಗಳಾದರೋ ತಿಳಿಯದು. ಆದರೆ ಅವರು ದೇವರುಗಳ ವಿರುದ್ಧ ಭೂಮಿಯ ಒಡೆತನಕ್ಕಾಗಿ ಹೋರಾಡಿದರು. ದೇವರುಗಳಿಂದ ಪರಾಜಿತರಾದರು ಹಾಗೂ ಕೊನೆಗೆ ಅವರಿಗೆ ಬಲಿ ಬಿದ್ದರೆಂಬ ಸಂಗತಿಯೂ ನಮೂದಿತವಾಗಿದೆ. ಇದರಿಂದ ಸ್ಪಷ್ಟವಾಗುವ ವಿಷಯವೇನೆಂದರೆ ಅಸುರರು ಮಾನವಕುಲದ ಸದಸ್ಯರೇ ಹೊರತು ರಾಕ್ಷಸರಲ್ಲ" ಎಂದಿದ್ದಾರೆ, ಅಂಬೇಡ್ಕರರು.

**ಗಂಧರ್ವರು-ಅಂಗದರ್ಪಣ**

ಪಾಂಡವರು ದ್ರೌಪದಿಯ ಸ್ವಯಂವರದಲ್ಲಿ ಪಾಲ್ಗೊಳ್ಳುವುದಕ್ಕಾಗಿ ದಕ್ಷಿಣದಿಂದ ಪುನಃ ಉತ್ತರದತ್ತ ಸಾಗುವ ಸಂದರ್ಭಗಳಲ್ಲಿಯೂ ಅರಣ್ಯನಾಯಕರೊಂದಿಗೆ ಸಂಘರ್ಷ ನಡೆಸಿದ್ದಾರೆ. ಅಂಗದರ್ಪಣ ಎಂಬುವವನು ಯಮುನಾ ನದಿ ತೀರದ ವನವನ್ನು ಆಳುತ್ತಿದ್ದನು. ಅಂಬೇಡ್ಕರ್ ಅಂಗದರ್ಪಣನಂತಹ ಗಂಧರ್ವರು ದೇವತೆಗಳ ಉಳಿಗದವರೆಂದು ಗುರುತಿಸಿದ್ದಾರೆ. ಪಾಂಡವರು ಅವನ ವನವನ್ನು ಪ್ರವೇಶಿಸುವ ಹೊತ್ತಿಗೆ ಕತ್ತಲೆಯಾಗಿದ್ದರಿಂದ ಕೊಳ್ಳಿಯನ್ನು ಹಿಡಿದು ಪ್ರವೇಶಿಸುತ್ತಾರೆ. ಅದನ್ನು ಕಂಡ ಅಂಗದರ್ಪಣ ಪ್ರಶ್ನಿಸಿ, ಪ್ರತಿಭಟಿಸುತ್ತಾನೆ. ಆಗ ಅರ್ಜುನ ಅವನನ್ನು ಸದೆಬಡಿಯುತ್ತಾನೆ. ಅದನ್ನು 'ವಿಕ್ರಮಾರ್ಜುನ ವಿಜಯ'ವು ಹೀಗೆ ವರ್ಣಿಸಿದೆ:

*ಬನಂ ಎನ್ನಾಳ್ವ ಬನಂ, ನಿಶಾಬಲಂ ಇಂತು ಅಸ್ಮದ್ಬಲಂ,*
*ಧೂರ್ತನಯ್,*
*ನಿನಗೆ ಈ ಪೊಟ್ಟಜೆಗೊಳ್, ಇತ್ತ ಬರ್ಪ ಅದಟಂ ಇಂತು ಆರಿತ್ತರ್*
*ಎಂದು ಆಂತೊಡೆ,*
*ಆತನನ್ ಆ ಕೊಳ್ಳಿಯೊಳಿಟ್ಟೊಡೆ ಅಂತದು*
*ಲಯಾಂತೋಗ್ರಾಗ್ನಿಯಂತೆ ಅಟ್ಟೆ, ಬಂದು*
*ಎನಸುಂ ಮಾಣದೆ, ಬಾಗಿದಂ ಪದಯುಗಕ್ಕೆ ಆರೂಢಸರ್ವಜ್ಞನಾ*
ವಿ.ವಿ.೩.೩೪

ಅಂಗದರ್ಪಣ ಆ ಕಾಡಿನ ನಾಯಕನಾಗಿದ್ದಾನೆ. ಅವನಲ್ಲಿ ಸೇನೆಯೂ ಇದೆ. ಆ ಸೇನೆ ಕಾಡಿನ ರಕ್ಷಣೆಗೆ ಇರುವುದು

**ಮದುವೆ**

ಪಾಣಿಗ್ರಹಣ
ಎಂಬಲ್ಲಿ
ಹಣವೂ ಇದೆ
ಗ್ರಹಣವೂ ಇದೆ
ಹಣ ಗಂಡಿನ ಪಾಲಿಗೆ
ಗ್ರಹಣ ಹೆಣ್ಣಿನ ಪಾಲಿಗೆ

**ಶಿವಮೊಗ್ಗ ಗೀತಾಶಾಸ್ತ್ರಿ**
ಬೆಂಗಳೂರು - ೨೮

ತಿಳಿಯುತ್ತದೆ. ಕತ್ತಲೆಯಲ್ಲಿ ಕೊಳ್ಳಿ ಹಿಡಿದು ಕಾಡಿನ ಪ್ರವೇಶವನ್ನು ನಿರ್ಬಂಧಿಸಲಾಗಿದೆ. ಇದರ ಉದ್ದೇಶ ಬೆಂಕಿಯಿಂದ ಕಾಡನ್ನು ರಕ್ಷಿಸಿಕೊಳ್ಳುವುದಾಗಿದೆ. ಸ್ಥಳೀಯರ ಈ 'ಕಾನೂನ'ನ್ನು ತಿಳಿಯದೆ ಕೊಳ್ಳಿ ಹಿಡಿದು ಅತಿಕ್ರಮಣ ಮಾಡಿದ್ದಾನೆ. ಪ್ರಭುತ್ವದಿಂದ ಅರಣ್ಯವಾಸಿಗಳು ದೂರವೇ ಉಳಿದಂತೆ ಕಾಣುತ್ತದೆ. ಏಕೆಂದರೆ ಸ್ಥಳೀಯ ರೂಢಿಗಳಿಗೂ ಹಾಗೂ ಅದರ ಕಾನೂನುಗಳಿಗೂ ಹೊಂದಾಣಿಕೆ ಆಗದಿರುವ ಸಂಭವವೇ ಹೆಚ್ಚು. ಪ್ರಭುತ್ವದ ಕೆಲವೇ ಜನರು ಇತರೆ ಜನತೆಯ 'ರೀತಿ–ನೀತಿ'ಗಳನ್ನು ಸುಲಭವಾಗಿ ಉಲ್ಲಂಘಿಸಿದ್ದಾರೆ. ಅವರದೇ ಆದ ಕಾನೂನುಗಳು ಆಕ್ರಮಣವಾದ ಪ್ರದೇಶವನ್ನು ನಿಯಂತ್ರಿಸುತ್ತವೆ. ಇವುಗಳಿಗೆ ಜನರು ಹೊಂದಿಕೊಳ್ಳುವಂತೆ ಮಾಡಲಾಗುತ್ತದೆ. ಪ್ರಭುತ್ವ ಒಂದು ಪ್ರದೇಶದ ಮೇಲೆ ಅತಿಕ್ರಮಣ ಮಾಡುವುದು, ಅಲ್ಲಿನ ನಾಯಕರನ್ನು ಸೋಲಿಸುವುದು ಮಹತ್ತರವಾದ ಕಾರ್ಯವೆಂಬಂತೆ ಭಾವಿಸಿಕೊಂಡಿದೆ. ಅಂಗದರ್ಪಣನು 'ಎನಸುಂ ಮಾಣದೆ ಬಾಗಿದಂ' ಎಂಬಲ್ಲಿ, ಪ್ರತಿಭಟಿಸಿದರೆ ಇಡೀ ವನವೇ ನಾಶವಾಗುವ ಭಯವಿದೆ. ಜೊತೆಗೆ ತನ್ನ ಅಧಿಕಾರವನ್ನು ಉಳಿಸಿಕೊಳ್ಳಬೇಕಾದ ಅನಿವಾರ್ಯತೆಯೂ ಇದೆ. ಹಿಡಿಂಬ, ಬಕ, ಅಂಗದಪರ್ಣರನ್ನು ಗಣನಾಯಕರನ್ನಾಗಿ ಗುರುತಿಸಿಕೊಳ್ಳಬಹುದು. ಬಲಿಷ್ಠರು ಇಂತಹ ನಾಯಕರನ್ನು ಸೋಲಿಸಿ ಸಾಮ್ರಾಜ್ಯವನ್ನು ವಿಸ್ತರಿಸಿದ್ದಾರೆ. ಉಡುಗೊರೆಯ ರೂಪದಲ್ಲಿ ಅವರು ಕೊಟ್ಟ ಸಂಪತ್ತನ್ನು ವಶಪಡಿಸಿಕೊಂಡಿದ್ದಾರೆ. ವೈವಿಧ್ಯ ಭೂಪ್ರದೇಶವನ್ನು ಏಕಗೊಳಿಸುವ ಚಲನೆಯೂ ಇಲ್ಲಿದೆ. ಪ್ರಭುತ್ವ ವನವಾಸಿಗಳನ್ನು ಮೊದಲಿನಿಂದಲೂ ಹತ್ತಿಕ್ಕುತ್ತ ಬಂದಿದೆ ಎಂಬುದು ಗಮನಾರ್ಹ.

**ಖಾಂಡವ ವನದ ನಾಗಗಳು**

ಅಂಬೇಡ್ಕರ್ ಅಸುರ ಹಾಗೂ ರಾಕ್ಷಸರ "...ರೀತಿಯಾಗಿ ಇನ್ನೊಂದು ಗೂಢ ಪ್ರಶ್ನೆಯಾದ ನಾಗಾಗಳ ಬಗೆಗೂ ಬೌದ್ಧಧರ್ಮಶಾಸ್ತ್ರ ಸಾಹಿತ್ಯ ಹೆಚ್ಚಿನ ಬೆಳಕನ್ನು ಬೀರಬಲ್ಲದು. ಅದು (ಮನುಷ್ಯ) ಗರ್ಭದಿಂದ ಹುಟ್ಟಿದ ನಾಗಾಗಳು ಮತ್ತು ಮೊಟ್ಟೆಯಿಂದ ಹುಟ್ಟಿದ ನಾಗಾಗಳು – ಇವೆರಡರ ನಡುವಿನ ವ್ಯತ್ಯಾಸವನ್ನು ಹೇಳಿ ನಾಗಾ ಎಂಬ ಪದಕ್ಕೆ ಇರುವ ಎರಡು ಅರ್ಥಗಳು ಸ್ಪಷ್ಟಪಡಿಸುತ್ತದೆ. ಮೂಲ ಅರ್ಥದಲ್ಲಿ ನಾಗಾ ಎಂಬುದು ಮನುಷ್ಯ ಸಮುದಾಯವೊಂದರ ಹೆಸರನ್ನು ಸೂಚಿಸುತ್ತದೆ" ಎಂದಿದ್ದಾರೆ. ಇವರನ್ನು ಕೊನೆಗಾಣಿಸಲು ಜನಮೇಜಯ ರಾಜನು ಯಜ್ಞಮಾಡುತ್ತಾನೆ. ಆ ಯಜ್ಞದ ವಿಧಿಯ ಅಂಗವಾಗಿ ಹೇಳಲ್ಪಟ್ಟ ಕತೆಯೇ ಮಹಾಭಾರತವಾಗಿದೆ. ಡಿ. ಡಿ. ಕೊಸಾಂಬಿಯವರು " 'ನಾಗರು' ಅಥವಾ 'ನಾಗಜಾತಿ' ಎಂಬ ಹೆಸರನ್ನು ಆರ್ಯರು ಈ ಎಲ್ಲ ಅರಣ್ಯವಾಸಿಗಳನ್ನೂ ಒಟ್ಟಾಗಿ ಸಂಬೋಧಿಸಿ ಬಳಸಿದ ಮಾತಿರಬೇಕು. ಈ ಎಲ್ಲ ಸಮುದಾಯಗಳು ಅಥವಾ ಬಹುಪಾಲಿನವು ಹಾವನ್ನು ತಮ್ಮ ಸಮುದಾಯ ಚಿಹ್ನೆಯಾಗಿ ಹೊಂದಿದ್ದಿರಬೇಕು ಅಥವಾ ಅವರು ಹಾವನ್ನು ಪೂಜಿಸುತ್ತಿದ್ದಿರಬೇಕು ಎಂಬುದೇ ಆರ್ಯರು ಅವರೆಲ್ಲರನ್ನೂ ಒಟ್ಟಿಗೆ ನಾಗಜಾತಿ ಎಂದು ಕರೆಯಲು ಕಾರಣವಾಗಿರಬಹುದು" ಎಂದಿದ್ದಾರೆ.

ಈ ನಾಗಾಗಳು ಮಹಾಭಾರತದ ಖಾಂಡವ ವನದಲ್ಲಿ ಹೆಚ್ಚಾಗಿ ವಾಸವಾಗಿದ್ದಂತೆ ತೋರುತ್ತದೆ. ಆ ವನವು "ಯಮುನಾ ನದಿಯ ತೆಂಕಣ ದೆಸೆಯೊಳ್ ನೂಱು ಯೋಜನದಗಲದೊಳಮನಿತೆ ನೀಳದೊಳಂ" ಆವರಿಸಿತ್ತು. ಇಲ್ಲಿ –

*ಅಲರಂ ನೋಯಿಸದೊಯ್ಯನೊಯ್ಯನಳಿಗಳ್ ಬಂಡುಣ್ಬುವಾಟಂದು ಬಂ*
*ದಲೆಯಲ್ಕಣ್ಮದು ಗಾಳಿ ಸೂರ್ಯಕಿರಣಾನೀಕಕ್ಕಮೆಂದಪ್ಪೊಡಂ*
*ಸಲವಿಲ್ಲುಧ್ಧತ ಸಿದ್ಧ ಖೇಚರರೆ ತಾಮಾಳ್ವೇಲಿಯಾಗಿಂತು ನಿ*
*ಚ್ಚಲುಮೋರಂತಿರೆ ಕಾವರೀ ದೊರೆತು ಕಾಪೀ ನಂದನಕ್ಕೆಂದ್ರನಾ ವಿ.ವಿ.೫.೮೧*

ಖಾಂಡವ ವನವನ್ನು ಪರಿಚಯಿಸುವ ಕ್ರಮವೇ ಅದರ ದಟ್ಟತೆಯನ್ನು ಸೂಚಿಸುತ್ತಿದೆ. ಈ ವನದ ರಕ್ಷಣೆ ಇಂದ್ರನು ವಹಿಸಿಕೊಂಡಿದ್ದನು. ಅವನ "ಬೆಸದೊಳ್ ಕಾವ ಕಿನ್ನರ ಕಿಂಪುರುಷ ಗರುಡ ಗಂಧರ್ವ ಸಿದ್ಧ ವಿದ್ಯಾಧರ", ಖೇಚರರು 'ಆಳ್ವೇಲಿ'ಯಾಗಿ ಕಾವಲಿದ್ದರು. ಇವರೆಲ್ಲಾ 'ನಿಚ್ಚಲುಮೋರಂತಿರೆ ಕಾವರ್.' ಆದ್ದರಿಂದಾಗಿ ದುಂಬಿ, ಗಾಳಿಗಳಿಗೆ ನಿಯಮಗಳನ್ನು ವಿಧಿಸಲಾಗಿದೆ. ಸೂರ್ಯನ ಕಿರಣಗಳನ್ನು ನಿರ್ಬಂಧಿಸಲಾಗಿದೆ. ಇದು ಕೃಷ್ಣನಿಗೂ ಭಯವುಂಟುಮಾಡಿದೆ. ಬಹುಶಃ ಈಗಿನ ಸಂರಕ್ಷಿತ ಅರಣ್ಯ ಪ್ರದೇಶದಂತಿರಬಹುದು. ಸ್ವತಃ ಇಂದ್ರ ತನ್ನ ಮಡದಿ ಶಚಿಗೇ ಅಲ್ಲಿನ 'ಶೋಕವಲ್ಲರಿಯ ಪಲ್ಲವಮೊಂದನೆ ಕೊಯ್ದು' ಮುಡಿದುಕೊಳ್ಳುವುದಕ್ಕೆ ಅನುವುಮಾಡಿಕೊಟ್ಟವನಲ್ಲ. ಅಷ್ಟು ಜತನದಿಂದ ಖಾಂಡವವನ್ನು ಕಾಯ್ದುಕೊಂಡು ಬರಲಾಗಿದೆ. ಹೀಗಿರುವಾಗ ಅರ್ಜುನ ಅನಲನಿಗೆ

## 'ಹೊಸತು' ಚಂದಾದಾರ / ಓದುಗರಿಗೆ ಮಾಹಿತಿ

ಜನವರಿ ೨೦೧೯ರ 'ಹೊಸತು' ಎಂದಿನಂತೆ ವಾರ್ಷಿಕ ವಿಶೇಷ ಸಂಚಿಕೆಯಾಗಿದ್ದು, ಲೇಖನಗಳ ಆಯ್ಕೆ / ಪರಿಷ್ಕರಣೆ ಮುಂತಾದ ಕೆಲಸಗಳಿಗೆ ಹೆಚ್ಚಿನ ಕಾಲಾವಕಾಶ ಬೇಕಿರುವುದರಿಂದ ಓದುಗರಿಗೆ ಸಂಚಿಕೆ ೨೦೧೯ ಜನವರಿ ೧೮ರೊಳಗೆ ತಲುಪುವುದು. ಓದುಗರು ಸಹಕರಿಸಬೇಕಾಗಿ ವಿನಂತಿ.

'ಊಡಲೆಂದು' ಪ್ರತಿಜ್ಞೆ ಮಾಡಿದ್ದಾನೆ. ಬ್ರಾಹ್ಮಣ ವೇಷಧಾರಿಯಾಗಿದ್ದ ಅಗ್ನಿ ಈ ವನವನ್ನೇ ಆಯ್ಕೆ ಮಾಡಿಕೊಳ್ಳಲು ಕಾರಣವೂ ಇದೆ. "ಖಟ್ವಾಂಗನೆಂಬರಸನ ಯಜ್ಞದೊಳಾತನ ತಂದ ಘೃತಸಮುದ್ರಮಂ ಕುಡಿದೊಡಾದ ರೋಗ"ವನ್ನು ಪರಿಹರಿಸಿಕೊಳ್ಳಬೇಕಾಗಿತ್ತು. 'ಘೃತ'ವನ್ನು ಯಜ್ಞದಲ್ಲಿ ಬಳಸುತ್ತಿದ್ದುದರಿಂದ ಅವನ ರೋಗವೂ ಅದರಿಂದಲೇ ನಾಶವಾಗಬೇಕಾಗಿತ್ತು. ಆದ್ದರಿಂದ ಖಾಂಡವ ವನದಲ್ಲಿ ಯಜ್ಞಕ್ಕೆ ಬಳಸಲಾಗುತ್ತಿದ್ದ "ಕಕುಭಾಶೋಕ ಕದಂಬ ಲುಂಗ ಲವಲೀ ಭೂಜಾರ್ಜುನಾನೋಹಕ", "ಫಳ ಕರ್ಪೂರ ಲವಂಗ ಲವಳೀ ಹಿಂತಾಳ ತಾಳೀ ತಮಾಳ" ಮೊದಲಾದ ಮರಗಳ ಸಮೂಹವೇ ಇತ್ತು. ಹಾಗೆಯೇ ಇಂದ್ರನ ಆಡಳಿತಕ್ಕೆ ಒಳಪಟ್ಟ ವನವಾಗಿರುವುದರಿಂದ, ಕಾವ್ಯ ನಾಯಕ ಅರ್ಜುನನು ಇದನ್ನು ಗೆಲ್ಲಬೇಕಾಗಿದೆ. ಅದಕ್ಕಾಗಿ ಅಗ್ನಿಯ 'ಹಸಿವು' ಸಹಕರಿಸಿದೆ. ಕೃಷ್ಣನೂ ನೆರವಾಗಿದ್ದಾನೆ. ಅಂದರೆ ಪಶುಪಾಲಕರಾದ ಯಾದವರು, ಕೃಷಿಕ ವ್ಯವಸ್ಥೆಯನ್ನು (ಅಗ್ನಿಯನ್ನು) ಪ್ರತಿನಿಧಿಸುವ ಅರ್ಜುನನೂ ಸೇರಿಕೊಂಡು ಅರಣ್ಯವಾಸಿಗಳನ್ನು ನಿರ್ನಾಮ ಮಾಡಲಾಗಿದೆ.

ಇಲ್ಲಿ ಹಸಿವು ಪ್ರಭುತ್ವಗಳ ಭೀಕರ ರಕ್ತದ ಹಸಿವಿನ ರೂಪಕವಾಗಿಯೇ ಕಾಣುತ್ತದೆ. ಬ್ರಾಹ್ಮಣರು ಅಥವಾ ಅವರ ವೇಷದಲ್ಲಿದ್ದವರು ರಾಜನು ಯಾವುದೇ ಸಂದರ್ಭಗಳಲ್ಲಿದ್ದರೂ ಅವರಿಂದ ತಮ್ಮ ಅಗತ್ಯತೆಗಳನ್ನು ಪೂರೈಸಿಕೊಂಡಿದ್ದಾರೆ. ಅವರಿಗಾಗಿ ಪ್ರಭುತ್ವಗಳು 'ಉಗ್ರ ಕಿನ್ನರಸುರ ದನುಜೋರಗರ' ವಿರುದ್ಧ ಯುದ್ಧಮಾಡಿವೆ. ಬೆಂಕಿಯು ವನವನ್ನು ಆವರಿಸುತ್ತಿದ್ದಾಗ ವನವನ್ನು ಕಾಯಲು ನೇಮಿಸಿದ ಕಿನ್ನರರು ಬೇಗ ಸೋತಿದ್ದಾರೆ. ವನವಾಸಿಗಳೇ ಆದ 'ಪನ್ನಗರ್ ಪನ್ನತಿಕೆಯಿಂ' ಪ್ರತಿಭಟಿಸುತ್ತಾರೆ. ಅಂತಿಮವಾಗಿ ಅವರನ್ನೂ ಕೊಲ್ಲಲಾಗುತ್ತದೆ. ಅಲ್ಲಿದ್ದ 'ಮಯನೆಂಬ ದಾನವವಿಶ್ವಕರ್ಮಂ' ಅರ್ಜುನನಿಗೆ ಶರಣಾಗಿ ಜೀವವನ್ನು ಉಳಿಸಿಕೊಳ್ಳುತ್ತಾನೆ. ಕಾಡಿನ ಮಧ್ಯದಲ್ಲಿದ್ದ "ತಕ್ಷಕನ ಮಗನಪ್ಪಶ್ವಸೇನನೆಂಬ ಪನ್ನಗಂ ತನ್ನ ತಾಯಂ ತನ್ನ ಬಾಲಮಂ ಕರ್ಚಲ್ವೇಟ್ಟು ದಹನಾರ್ಚಿಗಳಿಂ ಬರ್ದುಂಕಿ ನೆಗೆದು ಪಾಱುವಾಗಳದನೆರೆಟ್ಟಿಂಡಮಪ್ಪಿನಮಾಖಂಡಳ ತನಯನಿಸುವುದುಂ ತನ್ನ ಬಾಲಂಬೆರಸುರಿಯೊಳ್ ಬಿಟ್ಟು ಮಿಡುಮಿಡುಮಿಡುಕುತಿರ್ದ ಜನನಿಯಂ ಕಂಡು ಪಾವುಗಳುಳ್ಳ ಪಗೆಯಂ ಮಱೆಯವೆಂಬುದಂ ನನ್ನಿ" ಮಾಡಲು ಅರ್ಥಾವಲೀಕ ಅಸ್ತ್ರವಾಗಿ ಕರ್ಣನ ಬತ್ತಳಿಕೆಯನ್ನು ಪ್ರವೇಶಿಸಿದನು. ಶ್ರೀಕೃಷ್ಣನು ಖಾಂಡವ ವನವನ್ನು ಬೇಡಿದ ಅಗ್ನಿಯ ಕುರಿತು "ನಿಖಿಳನಿರ್ಜರ ಬಲಸಹಿತ ಶತಮಖನೊಡನೆ ವಿಗ್ರಹವಲಾ" ಎಂದು ಮೊದಲು ಆಕ್ಷೇಪಿಸುತ್ತಾನೆ. ಆದರೂ ವನವನ್ನು ದಹಿಸಲು ಅರ್ಜುನನಿಗೆ ನೆರವಾಗುತ್ತಾನೆ. ವನವನ್ನು ರಕ್ಷಿಸಲು ಬಂದ ಇಂದ್ರನಿಂದಲೇ "ಹರಿಗೆ ವಂದಿಸಿ ಮಗನನೊಲಿದಾದರಿಸಿ ಮರಳು"ವಂತೆ ಮಾಡಿ, ಬ್ರಹ್ಮ, ಈಶ್ವರರು ಅರ್ಜುನನಿಗೆ ಜಯವನ್ನು ಕೊಡಿಸಿದ್ದಾರೆ. ಅವನಿಂದಲೇ 'ಕೀರಿಟಿ'ಯ ಸಾಹಸವನ್ನು ಹಾಡಿಸಿದ್ದಾರೆ. ಸಂಪೂರ್ಣವಾಗಿ ವನವನ್ನು ದಹಿಸಿದ ಅನಲನು ಸಂತೋಷದಿಂದ ಆಶೀರ್ವದಿಸಿದ್ದಾನೆ.

ವನವೊಂದು ಬೆಂಕಿಗೆ ಆಹುತಿಯಾದರೆ ಮರಗಿಡಗಳು ಮಾತ್ರ ನಾಶವಾಗುವುದಿಲ್ಲ. ಅಲ್ಲಿನ ಪ್ರಾಣಿ–ಪಕ್ಷಿಗಳು, ಸ್ಥಳೀಯ ಜನರು ತಮ್ಮ ಬದುಕನ್ನು ಕಳೆದುಕೊಳ್ಳುತ್ತಾರೆ. ಒಂದು ಸಂಸ್ಕೃತಿಯೇ ಅಳಿಯುತ್ತದೆ. ಅಗ್ನಿ ದಟ್ಟವಾದ ಮತ್ತು

ರಕ್ಷಿಸಲ್ಪಟ್ಟ ವನವನ್ನು ಕೇಳುವಲ್ಲಿ, ವನದಂತೆ ಸಮೃದ್ಧವಾಗಿದ್ದ ಅಲ್ಲಿನ ಸ್ಥಳೀಯವಾಸಿಗಳನ್ನು ಮಟ್ಟಹಾಕುವುದು ಮುಖ್ಯವಾದ ಉದ್ದೇಶವಾಗಿರುವಂತಿದೆ. ತಮ್ಮ ಜೀವನದ ಅವಿಭಾಜ್ಯ ಅಂಗವೆಂದು ಭಾವಿಸಿದ ಅರಣ್ಯವಾಸಿಗಳು, ಬೆಂಕಿ ಬಿದ್ದಾಕ್ಷಣ ಓಡಿಹೋಗುವುದಿಲ್ಲ. ಬೆಂಕಿಯನ್ನು ನಂದಿಸಲು ಪ್ರಾಣವನ್ನೇ ಮುಡಿಪಾಗಿಡುತ್ತಾರೆ. ಇದಕ್ಕೆ ಪನ್ನಗರೇ ಉತ್ತಮ ಉದಾಹರಣೆಯಾಗಿದ್ದಾರೆ. ಯಾರದೋ ಕಾರಣಕ್ಕಾಗಿ ನಿರ್ದಯವಾಗಿ 'ನಾಗ'ಗಳನ್ನು ಕೊಲ್ಲಲಾಗಿದೆ. ಅಶ್ವಸೇನನ ಸೇಡು ಪ್ರಭುತ್ವವನ್ನು ಸಾಮಾನ್ಯ ಜನರಲ್ಲಿ 'ಕೆಲವರು' ಯಾಕೆ 'ಪರಂಪರೆ'ಯಿಂದ ವಿರೋಧಿಸುತ್ತಾರೆ ಎಂಬುದಕ್ಕೆ ಉತ್ತರವಾಗಿದೆ. 'ಬಂದು ತನ್ನ ಮಱೆವೊಕ್ಕೊಡೆ' ಕಾಯುವ ಪ್ರಭುತ್ವವು, ಮಯನನ್ನು, ಮದನಪಾಲನೆಂಬ ಋಷಿಯನ್ನು ಹಾಗೂ 'ಅಗ್ನಿಸೂಕ್ತಂಗಳ'ನ್ನು ಜಪಿಸಿದ ಲಾವುಕ ಪಕ್ಷಿಗಳನ್ನು ರಕ್ಷಿಸಲಾಗಿದೆ. ಇಲ್ಲಿ ತಮ್ಮ ಅಧೀನದಲ್ಲಿ ಇರಬಯಸುವವರನ್ನು ಹಾಗೂ ತಮ್ಮ ಆಚಾರಗಳನ್ನು ಅನುಸರಿಸುವವರನ್ನು ರಕ್ಷಿಸಲಾಗಿದೆ. ಅವರನ್ನು ವಂಶಪಾರಂಪರ್ಯವಾಗಿ ಕಾಯುವಂತೆ ವಚನವನ್ನು ನೀಡಿವೆ. ಇವುಗಳನ್ನು ಮಾಡದೆ ಸ್ವತಂತ್ರವಾಗಿ ಜೀವಿಸಲು ಬಯಸಿದ ಇತರೆ ಜೀವಿಗಳನ್ನು ಕೊಲ್ಲಲಾಗಿದೆ. ಬ್ರಾಹ್ಮಣ ವೇಷದ ಅಗ್ನಿಯ ಹಸಿವನ್ನು ನೀಗಿಸಲು ವನವನ್ನೇ ಯಜ್ಞವನ್ನಾಗಿ ದಹಿಸಲಾಗಿದೆ.



'ನೋಟು..' ಬದಲಾದ್ರೆ ಸಾಕೇ..?
ದೇಶದ ಬಗ್ಗೆ ಜನರ 'ನೋಟ..'
ಬದಲಾಗಬೇಕು ಅಲ್ವೇ..?!!

ಅಂದರೆ ಒಂದು ವರ್ಗದ ಹಿತಕ್ಕಾಗಿ ಯಜ್ಞಗಳನ್ನು ನಡೆಸುತ್ತಿರುವಂತೆ ತೋರುತ್ತದೆ. ಅದಕ್ಕೆ ಉತ್ತಮ ವಾತಾವರಣ ಕಲ್ಪಿಸಿದ ಸಮಕಾಲೀನ ಪ್ರಭುತ್ವದ ನೆರವನ್ನು ಪಡೆಯಲಾಗುತ್ತದೆ. ಯಜ್ಞ ಅಥವಾ ದಹನ ನಾಶದ ಮೂಲಕ ತಮಗೆ ಪೂರಕವಾಗಿ ಹೊಸದನ್ನು ಸೃಷ್ಟಿಸಿಕೊಳ್ಳುವ ಸಂಕೇತವಾಗಿದೆ. ಅನೇಕ 'ಪ್ರಭುತ್ವ'ಗಳು ಸೇರಿಕೊಂಡು ವಿವಿಧ ಕಾರಣಗಳನ್ನು ಒದಗಿಸಿ ದಹನವನ್ನು ಸಮರ್ಥಿಸಿವೆ. ಆದರೆ ದಹನದಿಂದ ಆಗುವ ಪರಿಣಾಮಗಳ ಬಗೆಗೆ ಯಾವ ಮಾತುಗಳನ್ನೂ ಆಡುವುದಿಲ್ಲ. ನಾಶ ಹಾಗೂ ಕೊಲ್ಲುವುದೇ ಪ್ರಭುತ್ವಗಳ ಮೂಲಭೂತ ಸಿದ್ಧಾಂತವಾಗಿದೆ. ಒಟ್ಟಾರೆಯಾಗಿ, "ಖಾಂಡವ ವನ ದಹನ ಪ್ರಸಂಗವಂತೂ ಆಳುವ ಪ್ರಭುತ್ವವು ಗಣಿಗಾರಿಕೆ ಮತ್ತು ಅಭಿವೃದ್ಧಿಯ ಹೆಸರಲ್ಲಿ ಪೋಸ್ಕೊ, ವೇದಾಂತಗಳಂತಹ ಬಹುರಾಷ್ಟ್ರೀಯ ಕಂಪನಿಗಳಿಗೆ ಅನುವುಮಾಡಿಕೊಡುತ್ತಿರುವ ಅರಣ್ಯಸಂಪತ್ತಿನ ಲೂಟಿಯನ್ನೇ ಹೇಳುತ್ತಿರುವ ಹಾಗಿದೆ. ಯಾರದೋ ಬದುಕಿನ ನೆಲೆಯನ್ನು ಒಂದಿಷ್ಟೂ ವಿವೇಚನೆಯಿಲ್ಲದೆ ಯಾರಿಗೋ ದಾನವಾಗಿ ಹಂಚುತ್ತಿರುವ ಪ್ರಭುತ್ವದ ಅವಿವೇಕಿ ಔದಾರ್ಯವೇ ಇಲ್ಲಿ ಬಿಂಬಿತವಾಗುತ್ತಿರುವಂತಿದೆ. ಇದು ಪರಿಸರನಾಶದ ಬಗೆಗೆ ಮಾತ್ರ ಹೇಳುತ್ತಿರುವುದಲ್ಲ. ಪ್ರಭುತ್ವದ ಜೀವಕಾರುಣ್ಯದ ಕೊರತೆ, ಅಹಂಭಾವಗಳನ್ನು ಎದುರಿಗಿಟ್ಟು, ಅಶ್ವಸೇನನಂತಹ ನಕ್ಸಲ್‌ಬಾರಿ ಹೋರಾಟಗಳ ಹುಟ್ಟಿಗೆ ಆಳುವ ಪ್ರಭುತ್ವವೇ ಹೇಗೆ ಕಾರಣವಾಗುತ್ತದೆ ಎನ್ನುವುದನ್ನೇ ಹೇಳುವಂತಿದೆ. ದಾನ ಎನ್ನುವ ಮೌಲ್ಯದ ಅಪವ್ಯಯವನ್ನೂ, ದಾನವನ್ನು ದಕ್ಕಿಸಿಕೊಳ್ಳುತ್ತಿರುವವರ 'ಹಸಿವಿನ ಅನಾಹುತಕಾರಿ ಅಗಾಧತೆ'ಯನ್ನು ಸೂಚಿಸುವಂತಿದೆ." ಕಾವ್ಯವು ಪ್ರತಿಮೆಗಳ ಮೂಲಕ ಪ್ರಾಣಿಗಳು ದಹನವನ್ನು ವಿರೋಧಿಸುವಂತೆ ಚಿತ್ರಿಸಿದೆ. ದಹನದಿಂದ 'ಸಂಗತ ಧೂಮಾವಳಿಯನಿಭಂಗಳೇ ಗೆತ್ತು' ಸಿಂಹಗಳು ಗರ್ಜಿಸಿ, ಅವುಗಳನ್ನು ಎದುರಿಸಲು ಅವುಗಳತ್ತ ಹಾರಿವೆ. ಹೀಗೆ ಸಹಜ ವೈರಿಗಳಾದ ಪ್ರಾಣಿಗಳ ಪ್ರತಿರೂಪಗಳನ್ನು ಚಿತ್ರಿಸಿರುವುದು ಪ್ರತಿಭಟನಾತ್ಮಕವಾಗಿಯೇ ಕಂಡುಬಂದಿದೆ. ಯುದ್ಧ ರಣರಂಗದಲ್ಲೇ ನಡೆಯುವಂಥದ್ದಲ್ಲ ಎನ್ನುವುದಕ್ಕೆ ಈ ಪ್ರಸಂಗ ಮುಖ್ಯವಾಗುತ್ತದೆ.

ಅಂತಿಮವಾಗಿ ಹಿಂದೂಗಳು ಈ ನೆಲದ ಮೂಲ ನಿವಾಸಿಗಳನ್ನು ಹತ್ತಿಕ್ಕಿ, ತಮ್ಮ ಅನುಯಾಯಿಗಳನ್ನಾಗಿ ಮಾಡಿಕೊಂಡಿದ್ದಾರೆ. ಆದರೂ ಪ್ರಸ್ತುತದಲ್ಲಿ ವೈದಿಕೇತರರನ್ನು ಕೊಂದು, ಅವರ ಸಮಾಧಿ ಮೇಲೆ ಸಾಮ್ರಾಜ್ಯ ಕಟ್ಟಿದವರು ನಮಗೆ ಆದರ್ಶರನ್ನಾಗಿ ರೂಪಿಸಲಾಗಿದೆ. ಅವರ ಸಾಮ್ರಾಜ್ಯದ ಸಿರಿತನಗಳ ಬಗ್ಗೆ ಬೀಗುವಂತೆ ಮಾಡಿರುವ ಆಲೋಚನೆಗಳು; ಅವರ ನಡುವೆಯೇ ಇದ್ದ ಜನಸಾಮಾನ್ಯರ ಸಾವು, ನೋವು, ಹಸಿವುಗಳ ಬಗ್ಗೆ ಯೋಚಿಸುವಂತೆಯೂ ಪ್ರೇರೇಪಿಸುವುದಿಲ್ಲ. ಆದರೆ ಅಂಬೇಡ್ಕರರ ಚಿಂತನೆಗಳು ಜನಸಾಮಾನ್ಯರ ಬಗೆಗೆ ಧ್ವನಿಯಾಗಿ ನಿಲ್ಲುತ್ತವೆ. ಅವರ ಉದ್ಧಾರಕ್ಕಾಗಿ ಚಿಂತಿಸುತ್ತವೆ. ಅವರನ್ನು ಸಾಮಾಜಿಕ, ಧಾರ್ಮಿಕ ಸ್ವತಂತ್ರರನ್ನಾಗಿ ಮಾಡಲು ಮುಂದಾಗುತ್ತವೆ.

ರವಿ ಸಿದ್ಲಿಪುರ
ಸಂಶೋಧನಾರ್ಥಿ, ಸಹ್ಯಾದ್ರಿ ಕಲಾ ಕಾಲೇಜು
ಶಿವಮೊಗ್ಗ – ೫೭೭ ೨೦೩




ನವಕರ್ನಾಟಕ ಪ್ರಕಾಶನ ಪ್ರಕಟಿಸಿರುವ ಶ್ರೀ ಸಿ. ಯು. ಬೆಳ್ಳಕ್ಕಿಯವರ "ಕೇಳುವ ಕೌತುಕ" ಕೃತಿಯನ್ನು ದಿನಾಂಕ ೧೦–೧೧–೨೦೧೮ರಂದು ಧಾರವಾಡ ರಂಗಾಯಣದ ಸುವರ್ಣ ಸಾಂಸ್ಕೃತಿಕ ಸಮುಚ್ಚಯ ಸಭಾಂಗಣದಲ್ಲಿ ಪ್ರೊ॥ ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಬಿಡುಗಡೆ ಮಾಡಿದರು. ನಾಡೋಜ ಶ್ರೀ ಚೆನ್ನವೀರ ಕಣವಿಯವರು ಅಧ್ಯಕ್ಷತೆ ವಹಿಸಿದ್ದರು.

ವೇದಿಕೆಯಲ್ಲಿ ಶ್ರೀ ಶಂಕರ ಹಲಗತ್ತಿ, ಶ್ರೀ ರಮೇಶ ಉಡುಪ, ಪ್ರೊ॥ ಸಿದ್ಧಲಿಂಗ ಪಟ್ಟಣಶೆಟ್ಟಿ, ಶ್ರೀ ಚೆನ್ನವೀರ ಕಣವಿ, ಶ್ರೀ ಸಿ. ಯು. ಬೆಳ್ಳಕ್ಕಿ ಹಾಗೂ ಡಾ॥ ಸಿದ್ದನಗೌಡ ಪಾಟೀಲ ಉಪಸ್ಥಿತರಿದ್ದರು.



# ಗಂಗಮ್ಮನ ಗುಡ್ಡೆ 'ಕಲ್ಲು ಸೇವೆ' ಆಚರಣೆ

**ತೋ**ಂಡಿ ಸಂಪ್ರದಾಯದ ಮೂಲಕ, ತಲೆಮಾರಿನಿಂದ ತಲೆಮಾರಿಗೆ ಮೌಖಿಕವಾಗಿ ಹರಿದು ಬರುತ್ತ, ಅಧ್ಯಯನದ ಕಾರಣಗಳಿಗಾಗಿ ಗ್ರಂಥಸ್ಥ ಸ್ವರೂಪವನ್ನು ಪಡೆದುಕೊಂಡಿರುವಂತಹದ್ದು ಜಾನಪದ ಸಾಹಿತ್ಯ. ಇದರಲ್ಲಿ ಜನಪದರ ನೋವು–ನಲಿವು, ಸುಖ–ದುಃಖ, ಅವರ ಇಡೀ ಜೀವನದ ವಿವರಗಳೇ ಮಡುಗಟ್ಟಿ ನಿಂತಿವೆ. ಇಂತಹ ಸಾಹಿತ್ಯದಲ್ಲಿ ಜನಪದ ಕಥೆ, ಗಾದೆ, ಗೀತೆ, ಒಗಟು, ಒಡಪು, ಲಾವಣಿ, ಮಹಾಕಾವ್ಯಗಳಂತಹ ಹಲವು ಪ್ರಕಾರಗಳನ್ನು ಕಾಣುತ್ತೇವೆ. ಅಂತೆಯೇ ಹಲವು ಜನಪದ ನಂಬಿಕೆ, ಸಂಪ್ರದಾಯ, ಆಚರಣೆಗಳು ಸಹ ಚಾಲ್ತಿಯಲ್ಲಿರುವುದನ್ನು ಗಮನಿಸಬಹುದು.

ಜನಪದ ನಂಬಿಕೆ ಹಾಗೂ ಆಚರಣೆಗಳು ಜನಪದರ ಮನಸ್ಸಿಗೆ ನೇರ ಸಂಬಂಧ ಮತ್ತು ಸಂಪರ್ಕಗಳನ್ನು ಹೊಂದಿರುವಂತಹವು. ಈ ನಂಬಿಕೆ, ಆಚರಣೆಗಳು ಎಂದಿನಿಂದ ಜಾರಿಗೆ ಬಂದವು ಎಂಬುದಕ್ಕೆ ಉತ್ತರ, ಪ್ರಶ್ನೆಯಷ್ಟು ಸರಳವಾಗಿಲ್ಲ. ಭೂಮಿಯಲ್ಲಿ ಮನುಷ್ಯನ ಹುಟ್ಟು ಯಾವಾಗ ಪ್ರಾರಂಭವಾಯಿತೋ ಅಂದಿನಿಂದಲೇ ಆತನ ಅರಿವಿಗೆ ಬರುವ ಹಾಗೂ ಬಾರದ ರೀತಿಯಲ್ಲಿ ಅನೇಕ ನಂಬಿಕೆ, ಆಚರಣೆಗಳು ರೂಢಿಗೆ ಬಂದಿವೆ. ನಂಬಿಕೆಗಳೇ ಆಚರಣೆಯಾಗಿ ಕ್ರಿಯಾರೂಪಕ್ಕಿಳಿಯುತ್ತವೆ. ಹಾಗಾಗಿ ಈ ಆಚರಣೆಗಳು ಹಲವು ವಿಧಿ, ನಿಷೇಧಗಳನ್ನು ಒಳಗೊಂಡಿವೆ.

ಇಂದಿನ ಉದಾರೀಕರಣ ಹಾಗೂ ಜಾಗತೀಕರಣದ ಹೊಸ್ತಿಲಲ್ಲಿ ನಿಂತು ನೋಡುವ ನಮಗೆ ಈ ಆಚರಣೆಗಳು ಒಂದು ರೀತಿಯ ಅಸಂಬದ್ಧ ಹಾಗೂ ವಿವೇಕರಹಿತ ಕ್ರಿಯೆಗಳಾಗಿ ಕಂಡರೂ ಸಹ ಆ ಆಚರಣೆಗಳ ಆಶಯ ಮತ್ತು ಅದರ ಹಿಂದಿನ ವೈಜ್ಞಾನಿಕ ಸತ್ಯಗಳನ್ನು ನಾವು ಅರ್ಥ ಮಾಡಿಕೊಳ್ಳದ ಹೊರತು, ಇವುಗಳ ಪ್ರಾಮುಖ್ಯತೆಯ ಅರಿವು ನಮಗೆ ದಕ್ಕುವುದೇ ಇಲ್ಲ. ಇವು ಸಂಸ್ಕೃತಿಯ ಭಾಗವಾಗಿಯೇ ನಮ್ಮ ನಡುವೆ ಸಾಗಿ ಬಂದಿರುವಂತಹವು. ಇಂದು ನಾವು ಕಾಣುತ್ತಿರುವ ಗಿಡ, ಮರ, ಗಾಳಿ, ನೀರನ್ನು ಒಳಗೊಂಡ ಪರಿಸರ ಅಲ್ಪಸ್ವಲ್ಪವಾದರೂ ಉಳಿದಿವೆಯೆಂದರೆ ಅದಕ್ಕೆ ಈ ಆಚರಣೆಗಳೇ ಮೂಲ ಕಾರಣ ಎನ್ನಬಹುದು. ಈ ರೀತಿಯ ಆಚರಣೆಗಳು ಗ್ರಾಮೀಣ ಭಾಗಗಳಲ್ಲಿ ಇಂದಿಗೂ ಪ್ರಚಲಿತದಲ್ಲಿದ್ದು, ಅಂತಹವುಗಳನ್ನು ದಾಖಲಿಸುವ ಹಾಗೂ ಓದುಗ ಲೋಕಕ್ಕೆ ಪರಿಚಯಿಸಿ ಮತ್ತಷ್ಟು ಅಧ್ಯಯನಗಳಿಗೆ ಒಳಗುಮಾಡುವಂತಹ ಜವಾಬ್ದಾರಿ ಎಲ್ಲಾ ಜನಪದ ಮನಸ್ಸುಗಳ ಮೇಲೂ ಇದೆ. ಎಲ್ಲಕ್ಕಿಂತ ಮುಖ್ಯವಾಗಿ ಇಂತಹ ಆಚರಣೆಗಳು ನಮ್ಮ ಕೃಷಿ ಚಟುವಟಿಕೆಗಳೊಂದಿಗೆ ನೇರವಾದ ಸಂಬಂಧವನ್ನು ಹೊಂದಿವೆ.

'ಚರಗ', 'ಗೊಬ್ಬರ ಪೂಜೆ', 'ಭೂಮಿ ಹುಣ್ಣಿಮೆ', 'ಕಿಚ್ಚು ಹಾಯಿಸುವುದು', 'ಹೊನ್ನಾರು', 'ಉಣ್ಣೆ ಕಟ್ಟೆ', 'ರಾಶಿ ಪೂಜೆ', 'ತಿಪ್ಪೇ ಪೂಜೆ' ಮುಂತಾದ ವಿಶಿಷ್ಟ ರೀತಿಯ ಆಚರಣೆಗಳು ಇಂದಿಗೂ ಕರ್ನಾಟಕದ ಹಲವು ಭಾಗಗಳಲ್ಲಿ ನಡೆಯುತ್ತಿವೆ. ಇಂತಹ ವಿಶೇಷ ಹಾಗೂ ವಿಶಿಷ್ಟ ರೀತಿಯ ಆಚರಣೆಗಳಲ್ಲಿ 'ಕಲ್ಲು ಸೇವೆ' ಆಚರಣೆಯೂ ಸಹ ಒಂದು. ಇದರ ಹೆಸರೇ

**ಲಕ್ಷ್ಮೀಕಾಂತ**

ಈಕೆಯು ಒಕ್ಕಲಿಗ ಸಮುದಾಯದ ಹೆಣ್ಣುಮಗಳಾಗಿದ್ದು, ಇವರ ವಂಶಸ್ಥರು ಇಂದಿಗೂ ಹಳ್ಳಿಯಲ್ಲಿದ್ದಾರೆ. ಈಕೆಗೆ ಒಕ್ಕಲಿಗರು, ಬ್ರಾಹ್ಮಣರು, ಮಾದಿಗರು, ಮಡಿವಾಳ, ತಿಗಳ, ಲಿಂಗಾಯತ ಹೀಗೆ ಎಲ್ಲ ಸಮುದಾಯದವರೂ ಸಹ ನಡೆದುಕೊಳ್ಳುತ್ತಾರೆ. ಅಲ್ಲದೆ ಈ ಭಾಗದ ಜನತೆ ಹಾಗೂ ಸುತ್ತಮುತ್ತಲಿನ ಹಳ್ಳಿಗರು, ಹೊರ ಜಿಲ್ಲೆಯ ಭಕ್ತರು ಸಹ ಇಲ್ಲಿಗೆ ಬರುತ್ತಾರೆ. ಇಲ್ಲಿ ಯಾವುದೇ ಅರ್ಚಕ ಅಥವಾ ಪೂಜಾರಿಗಳಿಲ್ಲ. ಬಂದಂತಹ ಭಕ್ತಾದಿಗಳೇ ತಾವೇ ಸ್ವಯಂ ಪೂಜೆ ಮಾಡಿಕೊಂಡು ಹೋಗುತ್ತಾರೆ. ದೀಪ ಹಚ್ಚಲು ಸಣ್ಣ ಗುಡಿಯನ್ನು ಬಿಟ್ಟರೆ ಯಾವುದೇ ಮೂರ್ತಿಯಾಗಲಿ, ದೇವಾಲಯವಾಗಲೀ ಇಲ್ಲ. ಬಯಲೇ ಇಲ್ಲಿ ಆಲಯ. ಇಲ್ಲಿ ಗಮನಿಸುವಂತಹದ್ದು, ಎಲ್ಲ ಜಾತಿ ವರ್ಗದ ಜನ ಸಮುದಾಯದವರಿಗೂ ಮುಕ್ತ ಅವಕಾಶ ಕಲ್ಪಿಸುವ ಆಶಯವೂ ಇರಬಹುದು. ದೇವಾಲಯ ನಿರ್ಮಿತವಾದರೆ ಸ್ಪೃಶ್ಯ–ಅಸ್ಪೃಶ್ಯ, ಸವರ್ಣೀಯ–ದಲಿತ ಎಂಬ ತಿಕ್ಕಾಟಗಳಿಗೆ ಕಾರಣವಾಗುತ್ತದೆ. ಆದರೆ ಇಲ್ಲಿ ಈ ರೀತಿಯ ಯಾವುದೇ ಘರ್ಷಣೆಗಳಿಗೆ ಆಸ್ಪದವಿಲ್ಲ. ಬೆಟ್ಟದಂತೆ ಕಾಣುವ ಕಲ್ಲು ರಾಶಿಯ ಸಮಾಧಿಯೇ ದೇವಾಲಯ. ಅದರ ಮೇಲೆ ಕಲ್ಲುಗಳನ್ನು ಹಾಕಿ ಪೂಜಿಸಿಕೊಂಡು ಹೋಗುತ್ತಾರೆ.

## ಹೊಸತು – ೨೦೧೯ ಜನವರಿ ಸಂಚಿಕೆ : ಓದುಗರ ವೇದಿಕೆ

ಆತ್ಮೀಯ ಹೊಸತು ಓದುಗ ಬಂಧುಗಳೇ,

ಜನವರಿ ೨೦೧೯ಕ್ಕೆ ನಿಮ್ಮ ಹೊಸತು ಪತ್ರಿಕೆಯ ವಿಶೇಷ ಸಂಚಿಕೆ ತಯಾರಿ ನಡೆದಿದೆ. ಈ ಸಂಚಿಕೆಯಲ್ಲಿ ಪ್ರತಿವರ್ಷದಂತೆ ಈ ವರ್ಷವೂ ಓದುಗರ ವೇದಿಕೆ ಇರಲಿದೆ. ಈ ಸಲದ ಓದುಗರ ವೇದಿಕೆಯ ವಿಷಯ : **‘೨೦೧೯ರ ಲೋಕಸಭಾ ಚುನಾವಣೆಯನ್ನು ಕುರಿತಾಗಿ ನಿಮ್ಮ ಅಪೇಕ್ಷೆ – ನಿರೀಕ್ಷೆಗಳು’**.

ಈ ಕುರಿತು ೧೫೦ ಪದಗಳೊಳಗೆ ಇರುವ ನಿಮ್ಮ ಬರಹ ೫ ಡಿಸೆಂಬರ್ ೨೦೧೮ರೊಳಗೆ **ಹೊಸತು** ಕಾರ್ಯಾಲಯಕ್ಕೆ ಕಳಿಸಬೇಕಾಗಿ ವಿನಂತಿ.

**– *ಸಂ.***

ತಿಳಿಸುವಂತೆ ಇದೊಂದು ರೀತಿಯ ವಿಶಿಷ್ಟ ಆಚರಣೆಯಾಗಿದ್ದು, ಇಂದಿಗೂ ಚಾಲ್ತಿಯಲ್ಲಿದೆ. ನಮ್ಮಲ್ಲಿ ಪೂಜಾ ವಿಧಿ ವಿಧಾನಗಳಲ್ಲಿ ಬಾಳೆಹಣ್ಣು, ತೆಂಗಿನಕಾಯಿ, ಹೊಂಬಾಳೆ, ಕಕ್ಕೆಸೊಪ್ಪು, ಹೂವುಗಳು ಮೊದಲಾದವುಗಳ ಬಳಕೆಯಿರುವುದು ಸಾಮಾನ್ಯ ಸಂಗತಿ. ಇದೇ ರೀತಿ ಪ್ರಸ್ತುತ ನಾನು ಇಲ್ಲಿ ತಿಳಿಸಲು ಹೊರಟಿರುವ ‘ಕಲ್ಲು ಸೇವೆ’ ಆಚರಣೆಯಲ್ಲಿ ಕಲ್ಲುಗಳನ್ನು ತಂದು ಪೂಜಿಸುವ ಕ್ರಮವಿದ್ದು ಇದನ್ನು ‘ಕಲ್ಲು ಸೇವೆ’ ಎಂದು ಕರೆಯುವರು.

ಈ ‘ಕಲ್ಲು ಸೇವೆ’ ಆಚರಣೆಯು ಸುಮಾರು ೧೫೦ರಿಂದ ೨೦೦ ವರ್ಷಗಳಿಗೂ ಹಿಂದಿನಿಂದ ಪ್ರಚಲಿತದಲ್ಲಿರುವುದು ಕಂಡುಬರುತ್ತದೆ. ಈ ಸೇವೆಯು ಜರುಗುವುದು ತುಮಕೂರು ಜಿಲ್ಲೆ, ಕುಣಿಗಲ್ ತಾಲ್ಲೂಕು, ಕೊತ್ತಗೆರೆ ಹೋಬಳಿಗೆ ಸೇರಿರುವ ‘ಗಂಗಮ್ಮನ ಗುಡ್ಡೆ’ ಎಂಬ ಸ್ಥಳದಲ್ಲಿ. ಈ ಸ್ಥಳವು ನೀಲತ್ತಹಳ್ಳಿ ಗಡಿಗೆ ಸೇರಿದ್ದು, ಸುಮಾರು ೨೫೦ ವರ್ಷಗಳ ಹಿಂದೆ ಶೆಟ್ಟಿಕೆರೆ ಗ್ರಾಮದ, ಒಕ್ಕಲಿಗ ಸಮುದಾಯಕ್ಕೆ ಸೇರಿದ ಪಟೇಲರ ಹೆಣ್ಣು ಮಗಳಾದ ‘ಗಂಗಮ್ಮ’ ಎಂಬುವವರನ್ನು ‘ಕೋಘಾಟ’ (ಕೋಘಟ್ಟ) ಎಂಬ ಊರಿಗೆ ಕೊಟ್ಟು ವಿವಾಹ ಮಾಡಲಾಗಿತ್ತು. ಈಕೆ ಬಿಮ್ಮನಿಸಿ (ಗರ್ಭಿಣಿ)ಯಾಗಿದ್ದು, ಹೆರಿಗೆಗೆಂದು ತವರೂರಾದ ಶೆಟ್ಟಿಕೆರೆ ಗ್ರಾಮಕ್ಕೆ ಬಂದಿದ್ದರು. ಹೀಗಿರುವಾಗ ಒಂದು ದಿನ ಮನೆಯ ಹೊರಗೆ ತಲೆಗೆ ಎಣ್ಣೆ ಹಚ್ಚಿ ಬಾಚಿಕೊಳ್ಳಲು ಕುಳಿತಿರುವಾಗ, ಭಿಕ್ಷೆ ಕೇಳಲೆಂದು ಬಂದ ಬುಡಬುಡಿಕೆ ವೇಷದಲ್ಲಿದ್ದ ಮಂತ್ರ (ಮಾಟಗಾರ) ವಾದಿಯೊಬ್ಬ, ಈಕೆ ಎಣ್ಣೆ ಗಡಿಗೆಯನ್ನು ಬಾಗಿಲಲ್ಲೇ ಬಿಟ್ಟು ಭಿಕ್ಷೆ ತರಲು ಮನೆಯೊಳಗೆ ಹೋದಾಗ, ಆ ಎಣ್ಣೆಯೊಳಗೆ ಮದ್ದನ್ನು ಹಾಕಲಾಗಿ, ಅದನ್ನು ತಲೆಗೆ ಹಚ್ಚಿಕೊಂಡ ಆಕೆ ಅಕಾಲ ಮೃತ್ಯುವಿಗೆ ಒಳಗಾದರು. ಆಗ ಆ ಮಂತ್ರವಾದಿ ಆಕೆಯ ಎರಡೂ ಕೈಗಳ ಹಸ್ತವನ್ನು ಕತ್ತರಿಸಿಕೊಂಡು ಹೋದನು. ನಂತರ ಆಕೆಯನ್ನು ತಂದೆ ತಾಯಿಗಳು ತಮ್ಮ ಹಳ್ಳಿಯ ಪಕ್ಕದಲ್ಲೆ ಶವಸಂಸ್ಕಾರ ಮಾಡಿದರು. ಈ ರೀತಿ ನಿಧನರಾದ ಈಕೆಯನ್ನು ಶವಸಂಸ್ಕಾರ ಮಾಡುವಾಗ ಉತ್ತರ ದಕ್ಷಿಣಾಭಿಮುಖವಾಗಿ ಕ್ರಮದಂತೆ ಮಲಗಿಸಿ, ಮಣ್ಣನ್ನು ಹಾಕಿ ಶವಸಂಸ್ಕಾರ ಕ್ರಿಯೆಯನ್ನು ನೆರವೇರಿಸದೆ, ಆಕೆಯನ್ನು ಚಕ್ಕಂಬಟ್ಟಲ ಕೂರಿಸಿ ಆಕೆಯ ಸುತ್ತಲೂ ಕಲ್ಲುಗಳನ್ನು ಸುರಿದು ಶವಸಂಸ್ಕಾರ ಕಾರ್ಯವನ್ನು ನೆರವೇರಿಸಲಾಯಿತಂತೆ. ಗ್ರಾಮದ ಹಿರಿಯಜ್ಜ ನಂಜಪ್ಪನವರು ಹೇಳುವಂತೆ ಗಂಗಮ್ಮನವರಿಗೆ ಮಣ್ಣಿಗಿಂತ ಕಲ್ಲುಗಳೇ ಹೆಚ್ಚು ಪ್ರಿಯವಾಗಿದ್ದ ಕಾರಣವಾಗಿ ಆಕೆಗೆ ಕಲ್ಲುಗಳಿಂದ ಶವಸಂಸ್ಕಾರ ಕಾರ್ಯವನ್ನು ಮಾಡಲಾಗಿದೆ ಎಂಬ ವಿಷಯವನ್ನು ತಮ್ಮ ತಂದೆ ತನಗೆ ತಿಳಿಸಿದುದಾಗಿ ಹೇಳುತ್ತಾರೆ. ಬಿಮ್ಮನಿಸಿಯರನ್ನು ಮಣ್ಣಲ್ಲಿ ಮುಚ್ಚಬಾರದೆಂಬುದು ಇಲ್ಲಿನ ಹಳ್ಳಿಗರ ನಂಬಿಕೆಯಾಗಿರುವುದು ತಿಳಿದುಬರುತ್ತದೆ.

ಇಲ್ಲಿ ಗಮನಿಸುವಂತಹ ಸಂಗತಿಯೆಂದರೆ ಮದ್ದು ದೇಹವನ್ನು ಸೇರಿದರೆ ಮಾತ್ರ ಸಾವು ಸಂಭವಿಸುತ್ತದೆಂಬುದು ನಮಗೆ ತಿಳಿದಿರುವಂತಹ ಸಂಗತಿ, ಆದರೆ ಇಲ್ಲಿ ಈಕೆ ತಲೆಗೆ ಹಚ್ಚಿಕೊಂಡ ಕಾರಣವಾಗಿ ಸಾವನ್ನಪ್ಪಿದರೆಂದು ಹೇಳುತ್ತಾರೆ, ಇದರ ಬಗ್ಗೆ ಇನ್ನಷ್ಟು ಅಧ್ಯಯನಗಳು ನಡೆಯಬೇಕಿದೆ. ಈಕೆ ಮಗುವನ್ನು ಪಡೆಯದೆ ಅಕಾಲ ಮೃತ್ಯುವಿಗೆ ಒಳಗಾಗಿರುವ ಕಾರಣವಾಗಿ ಹಾಗೂ ಈ ರೀತಿ ಬಿಮ್ಮನಸಿಯಾಗಿರುವ ಹೆಣ್ಣುಮಕ್ಕಳು ತೀರಿಕೊಂಡರೆ ಅವರಿಗೆ ಒಂದು ರೀತಿಯ ವಿಶೇಷ ಶಕ್ತಿ ಪ್ರಾಪ್ತವಾಗುತ್ತದೆಯೆಂಬುದು ಹಳ್ಳಿಗರ ನಂಬಿಕೆ. ಅಲ್ಲದೆ ಈ ರೀತಿ ತೀರಿಕೊಂಡ ಹೆಣ್ಣುಮಕ್ಕಳಿಗೆ ವಿಶೇಷ ಶಕ್ತಿಯಿರುವ ಕಾರಣವಾಗಿ ಮಾಟಗಾರರು ಆಕೆಯ ದೇಹದ ಭಾಗಗಳನ್ನು ಮಂತ್ರ ತಂತ್ರಗಳಂತಹ ದುಷ್ಟ ಕೆಲಸಗಳಿಗೆ ಬಳಕೆ ಮಾಡಿಕೊಳ್ಳಬಹುದಾದ ಸಾಧ್ಯತೆಗಳು ಇರುವ ಕಾರಣದಿಂದ ಇಲ್ಲಿ ಗಂಗಮ್ಮನವರನ್ನು ಮಣ್ಣಲ್ಲಿ ಮುಚ್ಚದೆ, ಕಲ್ಲುಗಳಿಂದ ಮುಚ್ಚಿರಬಹುದು. ಏಕೆಂದರೆ ಮಣ್ಣಿನಿಂದ ಮುಚ್ಚಿದರೆ ಶವವನ್ನು ಬೇಗ ಹೊರತೆಗೆಯಬಹುದು. ಆದರೆ ಕಲ್ಲುಗಳನ್ನು ಆ ರೀತಿ ಬೇಗ ತೆಗೆಯಲಾಗುವುದಿಲ್ಲ. ಮನಶ್ಶಾಸ್ತ್ರದ ಹಿನ್ನೆಲೆಯಲ್ಲಿ ಗಮನಿಸಿದಾಗ ಈ ರೀತಿ ಸಾವಿಗೀಡಾದ ಹೆಣ್ಣುಮಕ್ಕಳು ದುಷ್ಟ ಶಕ್ತಿಗಳಾಗುವರು ಎಂಬ ನಂಬಿಕೆ ಜನಪದರಲ್ಲಿರುವ ಕಾರಣವಾಗಿ ಈ ರೀತಿ ಕಲ್ಲುಗಳಿಂದ ಮುಚ್ಚಿರಲೂಬಹುದು. ಜೊತೆಗೆ ಇಂತಹ ಹೆಣ್ಣುಮಕ್ಕಳು ತೀರಿಕೊಂಡರೆ ಆ ವಂಶದವರಿಗೆ ಕೇಡು ಸಂಭವಿಸುವುದು ಎಂಬ ಭಾವನೆಯೂ ಇದೆ.

ಈ ರೀತಿಯಾಗಿ ಊರಿನಿಂದ ಹೊರಗೆ ಸಣ್ಣ ಸಣ್ಣ ಕರಿಕಲ್ಲು ಬಂಡೆಗಳಿರುವ ಬಯಲು ಪ್ರದೇಶದಲ್ಲಿ ಅವರ ಅಂತ್ಯಕ್ರಿಯೆ ಮಾಡಲಾಗಿದೆ. ಕೆಲವು ದಿನಗಳು ಕಳೆದ ನಂತರ ಅಪರಿಚಿತ ವ್ಯಕ್ತಿಯೊಬ್ಬರು ಬಹಳ ಅನಾರೋಗ್ಯದಿಂದ ಬಳಲುತ್ತಿದ್ದು, ಹಲವು ನಗರದ ಆಸ್ಪತ್ರೆಗಳನ್ನು ಸುತ್ತಾಡಿ ಎಲ್ಲಿಯೂ ವಾಸಿಯಾಗದೆ, ಕೊನೆಗೊಮ್ಮೆ ಈ ಮಾರ್ಗವಾಗಿ ಬಂದ ಅವರು ಗಂಗಮ್ಮನವರ ಸಮಾಧಿ ಸ್ಥಳದಲ್ಲಿ ನಡೆದು ಹೋಗುತ್ತಾ ತನ್ನ ಕಾಯಿಲೆ ವಾಸಿಯಾದರೆ ನಿನಗೆ ‘ಕಲ್ಲು ಸೇವೆ’ಯನ್ನು ಮಾಡಿಸುವೆನೆಂದು ಹರಕೆ ಕಟ್ಟಿಕೊಂಡರು. ಕೆಲವೇ ದಿನಗಳಲ್ಲಿ ಅವರ ಕಾಯಿಲೆ ಸಂಪೂರ್ಣವಾಗಿ ವಾಸಿಯಾಗಿ ಅವರು ಗುಣಮುಖರಾದರಂತೆ. ನಂತರ ಅವರು, ಕೊಟ್ಟ ಮಾತಿನಂತೆ ಬೇರೆಡೆಯಿಂದ ಗಾಡಿಗಳಲ್ಲಿ ಕಲ್ಲುಗಳನ್ನು ತುಂಬಿಕೊಂಡು ಬಂದು ಆಕೆಯ ಸಮಾಧಿಯ ಮೇಲೆ ಎಸೆದು ಚರುಪು ಮಾಡಿಸಿ ಪೂಜೆ ಸಲ್ಲಿಸಿ ಹೋದರು. ಇದೇ ಹರಕೆ ಅಥವಾ ಆಚರಣೆ ಇಂದು ಗಂಗಮ್ಮನ ಗುಡ್ಡೆಯ ‘ಕಲ್ಲು ಸೇವೆ’ ಎಂದು ಪ್ರಚಲಿತದಲ್ಲಿದೆ. ಹೀಗೆ ಈಕೆ ದೈವವಾಗಿ ಮಾರ್ಪಡುವ ಮಿಥ್‌ಅನ್ನು ಇಲ್ಲಿ ಗುರ್ತಿಸಬಹುದು. ಅಂದಿನಿಂದ ಇಲ್ಲಿಗೆ ಬರುವ ಪ್ರತಿಯೊಬ್ಬರೂ ಸಹ ಅಲ್ಲಿಯೇ ಸುತ್ತಮುತ್ತಲು ಸಿಗುವ ಕಲ್ಲುಗಳನ್ನು ಹಾಗೂ ಹೊರಗಿನಿಂದ ಬರುವವರು ತಮ್ಮ ಜೊತೆಯಲ್ಲಿಯೆ ತರುವ ಕಲ್ಲುಗಳನ್ನು ಭಕ್ತಿಯಿಂದ ಇವರ ಸಮಾಧಿಯ ಮೇಲೆ ಎಸೆದು ಪೂಜೆ ಸಲ್ಲಿಸಿ ಹೋಗುತ್ತಾರೆ. ಇಂದು ಈ ಸಮಾಧಿಯ ಮೇಲಿನ ಕಲ್ಲುಗಳ ರಾಶಿಯು ಹಲವಾರು ಗಾಡಿಗಳಷ್ಟಾಗಿದ್ದು, ಈ ಭಾಗದಲ್ಲಿ ವಿಶಿಷ್ಟ ಆಚರಣೆಯಾಗಿ ಇಂದಿಗೂ ಜಾರಿಯಲ್ಲಿದೆ.

ಇಲ್ಲಿನ ಕಲ್ಲು ಅದು ಕೇವಲ ಒಂದು ನಿರ್ಜೀವ ಅಥವಾ ಜಡವಸ್ತುವಾಗಿರದೆ ಅಪ್ಪಟ ಜನಪದರ ಹಾಗೂ ತಳವರ್ಗಗಳ

### ಏರುಪೇರು

ಗಾಳಿ ಬೆಳಕು ಬೆಂಕಿ ನೀರು
ಬೇಕೆಂದ ಹಾಗೆ ನಾವು
ಬಳಸಿಕೊಂಡಿದ್ದು ನಿಜ !
ಪ್ರಕೃತಿ ಮುನಿದರೆ...?
ಎಲ್ಲ ಏರು ಪೇರು
ಉರಿದು ಮುಳುಗಬಹುದು
ನಾವು, ಜೊತೆಗೆ ಕ್ಷಿತಿಜ!

**ದೇವಕಿಸುತ**
ಬೆಂಗಳೂರು – ೫




ಆಸೆಗಳ
ಹೊತ್ತು
ನೋಯದಿರು;
ಹತ್ತಿ
ಕೂರು
ಹಾಯಾಗಿರು!

• ಗೋಪಿ •
ಹಿರೇಬೆಟ್ಟು

ಆರಾಧನೆಯ ಕುರುಹಾಗಿದೆ. ನಮ್ಮ ಸಂಸ್ಕೃತಿಯಲ್ಲಿನ ಜನಪದರ ಯಾವುದೇ ಕೆಲಸಕಾರ್ಯಗಳು, ಆಚರಣೆಗಳು ಪ್ರಾರಂಭವಾಗುವುದೇ ಕಲ್ಲುಗಳ ಮೂಲಕ. ಅವುಗಳನ್ನು ಬೆನಕಗಳೆಂದು ಕರೆದು ಪೂಜಿಸುವ ಕ್ರಮ ಇಂದಿಗೂ ಚಾಲ್ತಿಯಲ್ಲಿದೆ. ನಿಸರ್ಗ ಆರಾಧಕರಾದ ಜನಪದರು ನಿಸರ್ಗದ ಪ್ರತಿ ಅಂಶದಲ್ಲೂ ದೈವತ್ವವನ್ನು ಕಾಣುವಂತಹವರು. ಆ ಕಾರಣವಾಗಿಯೇ ಕಲ್ಲು, ಮಣ್ಣು, ಸಗಣಿ, ಗರಿಕೆ ಹೀಗೆ ಪ್ರತಿಯೊಂದನ್ನೂ ದೈವವೆಂದೇ ಭಾವಿಸುತ್ತಾರೆ. ಈ ಹಿನ್ನೆಲೆಯಲ್ಲಿಯೂ ಇಲ್ಲಿ ಪೂಜೆಯ ಸಂದರ್ಭದಲ್ಲಿ ಕಲ್ಲುಗಳನ್ನು ಬಳಸುತ್ತಿರಬಹುದು.

ಗ್ರಾಮದಿಂದ ಹೊರಗೆ ಪ್ರಶಾಂತವಾದ ಸ್ಥಳದಲ್ಲಿ ಈ ಜಾಗವಿದ್ದು, ಫಲವಂತಿಕೆಯ ಸಂಕೇತವಾಗಿ ಈಕೆಯನ್ನು ಪೂಜಿಸುವರು. ಅಲ್ಲದೆ, ಋತುಮತಿ ಆಗದ ಹೆಣ್ಣುಮಕ್ಕಳು, ಮದುವೆಯಾಗದ, ಮಕ್ಕಳಾಗದ ಹೆಣ್ಣುಮಕ್ಕಳು ಹರಕೆ ಮಾಡಿಕೊಂಡು ಇವರಿಗೆ ನಡೆದುಕೊಳ್ಳುತ್ತಾರೆ. ಅಲ್ಲದೆ, ಸ್ಥಳೀಯರು ಹೇಳುವಂತೆ ಈ ರೀತಿಯ ಹೆಣ್ಣುಮಕ್ಕಳ ಅನೇಕ ಕಷ್ಟಗಳನ್ನು ಈಕೆ ಒಡೆದಿದ್ದಾಳೆ. ಬೆಂಗಳೂರು, ಕುಣಿಗಲ್, ಎಡೆಯೂರು, ರಾಮನಗರ, ಮಾಗಡಿ, ಗುಬ್ಬಿ, ತುಮಕೂರು ಮತ್ತು ಮೈಸೂರು ಮೊದಲಾದ ಭಾಗಗಳಿಂದ ಇಲ್ಲಿಗೆ ಭಕ್ತರು ಆಗಮಿಸುತ್ತಾರೆ. ತಮ್ಮ ಕಷ್ಟಗಳಿಗೆ ಪರಿಹಾರವನ್ನು ಕಂಡುಕೊಂಡಿದ್ದಾರೆ. ಜೊತೆಗೆ, ತಮಗೆ ಯಾವ ಕೆಲಸಗಳಾಗಬೇಕೆಂದು ಇವರಲ್ಲಿ ಹರಕೆಯನ್ನು ಮಾಡಿಕೊಳ್ಳುವರೋ, ಅವರ ಕೆಲಸಗಳು ಆಗುತ್ತವೆ ಎಂಬುದು ಇಲ್ಲಿನವರ ನಂಬಿಕೆ. ಅದರಂತೆ ತಮ್ಮ ಕೆಲಸಗಳು ಕೈಗೂಡಿದಾಗ ಹೊಸ ಸೀರೆ, ಬಳೆ, ಅರಿಶಿಣ, ಕುಂಕುಮಗಳ ಜೊತೆಗೆ ತಮ್ಮ ಶಕ್ತ್ಯಾನುಸಾರ ಕಲ್ಲುಗಳನ್ನು ತಂದು ಈ ಸಮಾಧಿಯ ಮೇಲೆ ಎಸೆದು ತಮ್ಮ ಹರಕೆಯನ್ನು ತೀರಿಸಿ ಪೂಜೆ ಮಾಡಿ ಹೋಗುತ್ತಾರೆ. ಇಲ್ಲಿ ಒಂದು ಹಿಡಿ ಕಲ್ಲು ಹಾಕುವವರಿದ್ದಾರೆ, ಒಂದು ಗಾಡಿ ಹಾಕುವವರಿದ್ದಾರೆ. ಅದೆಲ್ಲವೂ ಅವರವರ ಶಕ್ತಿಗೆ ಬಿಟ್ಟ ವಿಚಾರ.

ಈಕೆಯು ಒಕ್ಕಲಿಗ ಸಮುದಾಯದ ಹೆಣ್ಣುಮಗಳಾಗಿದ್ದು, ಇವರ ವಂಶಸ್ಥರು ಇಂದಿಗೂ ಹಳ್ಳಿಯಲ್ಲಿದ್ದಾರೆ. ಈಕೆಗೆ ಒಕ್ಕಲಿಗರು, ಬ್ರಾಹ್ಮಣರು, ಮಾದಿಗರು, ಮಡಿವಾಳ, ತಿಗಳ, ಲಿಂಗಾಯತ ಹೀಗೆ ಎಲ್ಲ ಸಮುದಾಯದವರೂ ಸಹ ನಡೆದುಕೊಳ್ಳುತ್ತಾರೆ. ಅಲ್ಲದೆ ಈ ಭಾಗದ ಜನತೆ ಹಾಗೂ ಸುತ್ತಮುತ್ತಲಿನ ಹಳ್ಳಿಗರು, ಹೊರ ಜಿಲ್ಲೆಯ ಭಕ್ತರು ಸಹ ಇಲ್ಲಿಗೆ ಬರುತ್ತಾರೆ. ಇಲ್ಲಿ ಯಾವುದೇ ಅರ್ಚಕ ಅಥವಾ ಪೂಜಾರಿಗಳಿಲ್ಲ. ಬಂದಂತಹ ಭಕ್ತಾದಿಗಳೇ ತಾವೇ ಸ್ವಯಂ ಪೂಜೆ ಮಾಡಿಕೊಂಡು ಹೋಗುತ್ತಾರೆ. ದೀಪ ಹಚ್ಚಲು ಸಣ್ಣ ಗುಡಿಯನ್ನು ಬಿಟ್ಟರೆ ಯಾವುದೇ ಮೂರ್ತಿಯಾಗಲಿ, ದೇವಾಲಯವಾಗಲೀ ಇಲ್ಲ. ಬಯಲೇ ಇಲ್ಲಿ ಆಲಯ. ಇಲ್ಲಿ ಗಮನಿಸುವಂತಹದ್ದು, ಎಲ್ಲ ಜಾತಿ ವರ್ಗದ ಜನ ಸಮುದಾಯದವರಿಗೂ ಮುಕ್ತ ಅವಕಾಶ ಕಲ್ಪಿಸುವ ಆಶಯವೂ ಇರಬಹುದು. ದೇವಾಲಯ ನಿರ್ಮಿತವಾದರೆ ಸ್ಪೃಶ್ಯ–ಅಸ್ಪೃಶ್ಯ, ಸವರ್ಣೀಯ–ದಲಿತ ಎಂಬ ತಿಕ್ಕಾಟಗಳಿಗೆ ಕಾರಣವಾಗುತ್ತದೆ. ಆದರೆ ಇಲ್ಲಿ ಈ ರೀತಿಯ ಯಾವುದೇ ಘರ್ಷಣೆಗಳಿಗೆ ಆಸ್ಪದವಿಲ್ಲ. ಬೆಟ್ಟದಂತೆ ಕಾಣುವ ಕಲ್ಲು ರಾಶಿಯ ಸಮಾಧಿಯೇ ದೇವಾಲಯ. ಅದರ ಮೇಲೆ ಕಲ್ಲುಗಳನ್ನು ಹಾಕಿ ಪೂಜಿಸಿಕೊಂಡು ಹೋಗುತ್ತಾರೆ.

'ಗಂಗಮ್ಮ' ಅಥವಾ 'ಗಂಗಮ್ಮನ ಪೂಜೆ' ಎಂಬ ಶಬ್ದಗಳು ಮಾತೃ ಪ್ರಧಾನ ಸಮಾಜ ಹಾಗೂ ಜಲಸಂಸ್ಕೃತಿಯ ಆರಾಧನೆಯನ್ನು ತಿಳಿಸುವಂತಹವು. ಇನ್ನೂ ಬದುಕಿ ಬಾಳಬೇಕಾದ ಈಕೆಯ ಸಾವು ದುರಂತಮಯವಾಗಿದ್ದು, ನಂತರ ಈಕೆ ಮರುಹುಟ್ಟು ಪಡೆದು ದೈವವಾಗಿರುವಳೆಂಬ ನಂಬಿಕೆ ಮಾತೃ ಪ್ರಧಾನ ಸಂಸ್ಕೃತಿಯ ಅಸ್ತಿತ್ವ ಇನ್ನೂ ಉಳಿದುಕೊಂಡಿರುವುದನ್ನು ನಮ್ಮ ಗಮನಕ್ಕೆ ತಂದುಕೊಡುತ್ತದೆ.

ಈ ಸ್ಥಳವು ಪ್ರತಿ ವರ್ಷ ಬಿಮ್ಮನಸಿಯರನ್ನು ಬಲಿ ಬೇಡುತ್ತದೆ. ಹಾಗಾಗಿ ಬಲಿ ನೀಡಿ ಎಂದು ಮಂತ್ರವಾದಿಯೊಬ್ಬ ಸಾರಿ ಹೋಗಿದ್ದಾನೆಂದು ಗ್ರಾಮದವರು ಹೇಳುತ್ತಾರೆ. ಬಹುಶಃ ತನ್ನ ಮಾಟ ಮಂತ್ರಗಳಿಗೆ ಈ ಶವಗಳಿಂದ ಅನುಕೂಲವಾಗಬಹುದೆಂಬ ಕಾರಣ ಇರಬಹುದು. ಆದರೆ ಈ ರೀತಿ ಮಾಡಲು ಸಾಧ್ಯವಾಗದೆ ಗ್ರಾಮದವರು 'ಕಲ್ಲು ಸೇವೆ' ನಡೆಸುತ್ತಿದ್ದೇವೆಂದು ಹೇಳುತ್ತಾರೆ. ಒಟ್ಟಾರೆ, ಇಲ್ಲಿನ ಸುತ್ತಲಿನ ಪರಿಸರವನ್ನು ಅವಲೋಕಿಸಿದರೆ ಮೊದಲ ಅಭಿಪ್ರಾಯವೇ ವಾಸ್ತವಕ್ಕೆ ಹತ್ತಿರವಿರುವಂತೆ ಕಾಣುತ್ತದೆ. ಈ ಸ್ಥಳವು ಇಂದು 'ಗಂಗಮ್ಮನ ಗುಡ್ಡೆ' ಎಂಬ ಗ್ರಾಮದ ಹೆಸರನ್ನು ಪಡೆದಿದೆ. (ಗ್ರಾಮವು ಈ ಸಮಾಧಿ ಸ್ಥಳದಿಂದ ಸ್ವಲ್ಪ ದೂರದಲ್ಲಿದೆ) ಈ ಗ್ರಾಮದ ಪ್ರಾಚೀನ ಹೆಸರು 'ಕರೆಹೊನ್ನಯ್ಯನಪಾಳ್ಯ'ವೆಂದು ಹೇಳುತ್ತಾರೆ. ಗಂಗಮ್ಮನವರು ಇಲ್ಲಿ ಸಮಾಧಿಯಾದ ನಂತರ ಈ ಗ್ರಾಮದ ಹೆಸರನ್ನು 'ಗಂಗಮ್ಮನ ಗುಡ್ಡೆ' ಗ್ರಾಮ ಎಂದು ಬದಲಿಸಿಕೊಳ್ಳಲಾಗಿದೆ.

ಈ ಸ್ಥಳದಲ್ಲಿ ಪ್ರತಿ ವರ್ಷ ಯುಗಾದಿ ಹಬ್ಬ ಹಾಗೂ ಆಲ್ಕೆರೆ ಪಟ್ಟಲದಮ್ಮನ ಜಾತ್ರೆಯ ಸಂದರ್ಭದಲ್ಲಿ ವಿಶೇಷ ಪೂಜೆ, ಹರಿಸೇವೆಗಳು ಜರುಗುತ್ತವೆ. ತಳಿಗೆಗೆ ಮೊಸರನ್ನ, ಒಬ್ಬಟ್ಟುಗಳನ್ನು ಮಾಡುತ್ತಾರೆ. ಯಾವುದೇ ರೀತಿಯ ಮಾಂಸಾಹಾರದ ಬಳಕೆಯಿಲ್ಲ, ಹೊಲಸು ನಿಷಿದ್ಧ. ಬಹುಶಃ ಇಲ್ಲಿಗೆ ಮೇಲ್ಜಾತಿಯವರೂ ಸಹ ಪೂಜೆಗೆ ಬರುವ ಕಾರಣದಿಂದಾಗಿ ಈ ರೀತಿಯ ಮಾಂಸಾಹಾರದ ಊಟಗಳನ್ನು ನಿಷೇಧಿಸಿರಬಹುದು. ಅಂದು ಸಾಮೂಹಿಕ ಅನ್ನ ಸಂತರ್ಪಣಾ ಕಾರ್ಯಕ್ರಮವಿದ್ದು, ಬಂದ ಭಕ್ತರೆಲ್ಲರಿಗೂ ಅನ್ನ ದಾಸೋಹವಿರುತ್ತದೆ. ಇಲ್ಲಿ ಬಲಿ ಸಂಪ್ರದಾಯವಿಲ್ಲದಿದ್ದರೂ ಇದು ಒಂದು ಶಾಕ್ತ ಪಂಥದ ಆರಾಧನ ಸ್ಥಳವಾಗಿರುವಂತಿದೆ. ಕಾರಣ ಗ್ರಾಮದ ಹೆಸರಿನಲ್ಲಿರುವ 'ಅಮ್ಮ' ಎಂಬ ಶಬ್ದವೇ ಶಾಕ್ತ ಪಂಥದ ಕುರುಹುಗಳನ್ನು ಒದಗಿಸುತ್ತದೆ. ಜೊತೆಗೆ ಆಲ್ಕೆರೆ ಪಟ್ಟಲದಮ್ಮ ದೈವ ಕೂಡ ಶಾಕ್ತದ ಹಿನ್ನೆಲೆಯ ಶಕ್ತಿದೇವತೆಯಾಗಿದ್ದು, ಬಲಿ ಆಚರಣೆಗಳಿವೆ. ಆಲ್ಕೆರೆ ಪಟ್ಟಲದಮ್ಮನ ಜಾತ್ರೆಯ ಸಂದರ್ಭದಲ್ಲಿ ಇಲ್ಲಿ ವಿಶೇಷ ಪೂಜೆ, ಹರಿಸೇವೆಗಳು ಜರುಗುತ್ತವೆ. ಈ ಅಂಶಗಳು ಸಹ ಗಂಗಮ್ಮನ ಗುಡ್ಡೆ ಶಾಕ್ತ ಸಂಪ್ರದಾಯದ ಸ್ಥಳವೆಂಬುದನ್ನು ಪುಷ್ಟೀಕರಿಸುತ್ತವೆ. ಇದಲ್ಲದೆ ಯುಗಾದಿ ಹಬ್ಬದ ದಿನ ಈ ಗುಡ್ಡೆಯ ಸುತ್ತಮುತ್ತ ವಾಸವಿರುವ ಮನೆಗಳ ಜನರು ತಮ್ಮ ದನಕರುಗಳನ್ನು ಇಲ್ಲಿಗೆ ಸಿಂಗರಿಸಿಕೊಂಡು ತಂದು 'ಉಣ್ಣೆ ಕಟ್ಟೆ' ಹಬ್ಬವನ್ನು ಮಾಡುತ್ತಾರೆ. ಸಂಕ್ರಾಂತಿ ಹಬ್ಬದಂದು ಕಿಚ್ಚು ಹಾಯಿಸುವ ರೀತಿಯಲ್ಲಿ ಇಲ್ಲಿನ ಜನ ಅಂದು ಈ ಗುಡ್ಡೆಯ ಮುಂಭಾಗ ಬೆಂಕಿಯನ್ನು ಹಾಕಿ ಅದರಲ್ಲಿ ರಾಸುಗಳನ್ನು ಬೆದರಿಸುವ ಕಾರ್ಯಕ್ರಮವಿರುತ್ತದೆ. ಇದರಂತೆಯೆ ಶಿವರಾತ್ರಿ ಹಬ್ಬದಂದೂ ಸಹ ವಿಶೇಷ ಪೂಜೆ ಹಾಗೂ ಅನ್ನ ದಾಸೋಹವಿರುತ್ತದೆ. ಉಳಿದಂತೆ ಪ್ರತಿ ದಿನವೂ ಬಂದ ಭಕ್ತಾದಿಗಳು ಪೂಜಾ ಕಾರ್ಯಗಳನ್ನು ನೆರವೇರಿಸುವರು. ಈ ದಾರಿಯಲ್ಲಿ ಅಥವಾ ಈ ಮಾರ್ಗವಾಗಿ ಸಂಚರಿಸುವ ಯಾರೇ ಆದರೂ ಕೂಡ ಇಲ್ಲಿ ನಿಂತು ತಮ್ಮ ಕೈಗೆ ಸಿಕ್ಕಷ್ಟು ಕಲ್ಲುಗಳನ್ನು ಈ ಗುಡ್ಡೆಯ ಮೇಲೆಸೆದು (ಇಲ್ಲಿ ಹಣ್ಣು, ಕಾಯಿ, ಕಡ್ಡಿ, ಕರ್ಪೂರಗಳಿಗೆ ಮಹತ್ವವಿಲ್ಲ) ತಮ್ಮ ಭಕ್ತಿಯನ್ನು ವ್ಯಕ್ತಪಡಿಸುತ್ತಾರೆ. ಇದೇ 'ಕಲ್ಲು ಸೇವೆ' ಆಚರಣೆ. ಬಹುಶಃ ಕರ್ನಾಟಕದ ಯಾವುದೇ ಭಾಗದಲ್ಲಿಯೂ ರೂಢಿಯಲ್ಲಿರದ ವಿಶಿಷ್ಟ ರೀತಿಯ ಆಚರಣೆ ಇದು. ಇಲ್ಲಿ ಹೂ, ಹಣ್ಣು, ಕಡ್ಡಿ, ಕರ್ಪೂರಗಳಿಗಿಂತ ಕಲ್ಲುಗಳಿಗೇ ಹೆಚ್ಚಿನ ಪ್ರಾಮುಖ್ಯತೆ.

**ಲಕ್ಷ್ಮೀಕಾಂತ**
ಪಿಎಚ್.ಡಿ ಸಂಶೋಧನಾ ವಿದ್ಯಾರ್ಥಿ, ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ



# ಮುಂಜಾವಿನ ಸಮಾಗಮ




**ಕ**ಳೆದ ತಿಂಗಳುಗಳಲ್ಲಿ ಗ್ರಹಗಳೆಲ್ಲಾ ಸಂಜೆಯ ಆಕಾಶದಲ್ಲಿ ಸಾಲುಗಟ್ಟಿ ನಿಂತಿದ್ದವು. ಮೋಡವಿದ್ದುದರಿಂದ ಎಲ್ಲವೂ ನೋಡಲು ಸಿಗಲಿಲ್ಲ. ಈಗ ಶುಭ್ರ ನೀಲಿ ಆಕಾಶದಲ್ಲಿ ಸಂಜೆ ಎದ್ದು ಕಾಣುವ ಚುಕ್ಕೆ ಮಂಗಳ ಗ್ರಹ. ಇದರ ಹೊರತಾಗಿ ಬೇರೆ ಯಾವ ಪ್ರಕಾಶಮಾನ ಗ್ರಹವೂ ಇಲ್ಲ. ಪಶ್ಚಿಮದ ಅಂಚಿಗೆ ಶನಿ ಗ್ರಹವಿದೆಯಾದರೂ ತಿಂಗಳ ಮೊದಲಲ್ಲಿ ಕಾಣುವುದು. ಆದರೆ ಗುರುತಿಸುವುದು ಕಷ್ಟ. ೯ರಂದು ಬಿದಿಗೆಯ ಚಂದ್ರ ಶನಿಗ್ರಹದ ಪಕ್ಕದಲ್ಲೇ ಇರುತ್ತದೆಯಾದರೂ ಎರಡನ್ನೂ ಹುಡುಕುವುದು ಕಷ್ಟವೇ. ಪಶ್ಚಿಮದಲ್ಲಿ ನಕ್ಷತ್ರಗಳೇ ಇಲ್ಲವೇನೋ ಅನ್ನಿಸುವಷ್ಟು ಕ್ಷೀಣವಾದ ನಕ್ಷತ್ರಗಳಿವೆ. ಮಕರ, ಕುಂಭ ರಾಶಿಗಳನ್ನು ಗುರುತಿಸುವುದು ಕಷ್ಟ. ಆದರೆ ಕುಂಭದ ದಕ್ಷಿಣಕ್ಕೆ ಬಕ (ಗ್ರುಸ್) ಎಂಬ ಪುಂಜದ ಎರಡು ಪ್ರಕಾಶಮಾನ ನಕ್ಷತ್ರಗಳು ಕಾಣುವುವು. ಪೂರ್ವದಲ್ಲಿ ಆಕಾಶ ಗಂಗೆಯ ಭಾಗ ಉಜ್ವಲವಾಗಿ ಕಾಣುವುದು. ಮಹಾವ್ಯಾಧ, ವೃಷಭ ಮತ್ತು ವಿಜಯಸಾರಥಿ ಮುಂತಾದ ಪ್ರಕಾಶಮಾನ ಪುಂಜಗಳು ಕಾಣುವುವು. ಉತ್ತರದಲ್ಲಿ ಕುಂತಿ (ಕೆಸಿಯೋಪಿಯ) ಸ್ಪಷ್ಟವಾಗಿ ಕಾಣುವುದು. ನೆತ್ತಿಯ ಮೇಲೆ ಚೌಕಾಕಾರದಲ್ಲಿ ನಕುಲ (ಪೆಗಸಸ್) ಕಾಣುವುದು. ಪಕ್ಕದಲ್ಲೇ ಮೀನರಾಶಿ; ಆದರೆ ಆ ಮೀನುಗಳು ಬಹಳ ಕ್ಷೀಣ; ಈ ಚೌಕವನ್ನು ಮಾತ್ರ ಬಹಳ ಸ್ಪಷ್ಟವಾಗಿ ಗುರುತಿಸಬಹುದು. ೧೫ರ ಸಂಜೆ ಮಂಗಳ ಮತ್ತು ಚಂದ್ರ ಪಕ್ಕ ಪಕ್ಕದಲ್ಲೇ ಕಾಣುತ್ತವೆ.

ಮುಂಜಾವಿಗೆ ಮೂರು ಗ್ರಹಗಳಿವೆ. ಪ್ರಕಾಶಮಾನವಾದ ಶುಕ್ರನನ್ನು ಕಂಡು ಹಿಡಿಯಲು ಯಾರ ನೆರವೂ ಬೇಕಿಲ್ಲ. ೪ರಂದು ಚಂದ್ರ ಇದರ ಜೊತೆಗೂಡುತ್ತದೆ. ಪಕ್ಕದಲ್ಲೇ ಚಿತ್ರಾ ನಕ್ಷತ್ರವೂ ಕಾಣುತ್ತದೆ. ಗುರುಗ್ರಹ ಪೂರ್ವದ ಅಂಚಿಗೆ ಕಾಣುತ್ತದೆ. ಬುಧ ಗ್ರಹ ಮುಂಜಾವಿನ ಆಕಾಶದಲ್ಲಿ ಕಾಣುತ್ತದೆ. ೧೫ರಂದು ಗರಿಷ್ಠ ಎತ್ತರದಲ್ಲಿ ಕಾಣುವ ಅವಕಾಶವಿದೆ. ೨೨ರಂದು ಬುಧ ಮತ್ತು ಗುರು ಜೊತೆಗೂಡುತ್ತವೆ. ಈ ಸಮಾಗಮವನ್ನು ಕ್ಯಾಮೆರಾದಲ್ಲಿ ಸೆರೆಹಿಡಿಯಲು ಪ್ರಯತ್ನಿಸಿ. ಹಾಗೆಯೇ ಮುಂದುವರೆದು ೨೩ – ೨೪ರಂದೂ ಚಿತ್ರ ತೆಗೆದರೆ ಬುಧ ಗ್ರಹದ ಓಟ ಸ್ಪಷ್ಟವಾಗಿ ತಿಳಿಯುತ್ತದೆ.

ಈ ತಿಂಗಳಲ್ಲಿ ಜೆಮಿನಿಡ್ಸ್ ಎಂಬ ಉಲ್ಕಾವೃಷ್ಟಿ ಇದೆ. ಹೆಸರೇ ಸೂಚಿಸುವಂತೆ ಮಿಥುನ ರಾಶಿಯಿಂದ ಹೊರಟಂತೆ ಕಾಣುವ ಉಲ್ಕೆಗಳನ್ನು ಕಾಣಬಹುದು. ೨೧ರಂದು ಉತ್ತರಾಯಣ – ಕನಿಷ್ಠ ಅವಧಿಯ ಹಗಲಿನ ದಿನ. ಸೂರ್ಯ ಉತ್ತರಕ್ಕೆ ಹಿಂದಿರುಗುವ ಸೂಚನೆ.


೨೨ರ ಮುಂಜಾವು
ಜ್ಯೇಷ್ಠಾ ಬುಧ – ಗುರು ಜೋಡಿ

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು – ೫೬೦ ೦೦೧

**ತಿಂಗಳ ವಿಶೇಷ ಘಟನೆಗಳು :**

೪ ಶುಕ್ರ – ಚಂದ್ರ ಜೋಡಿ.*
೫ ಬುಧ – ಚಂದ್ರ ಜೋಡಿ*
೬ ಗುರು – ಚಂದ್ರ ಜೋಡಿ*
೭ ಅಮಾವಾಸ್ಯೆ ೧೨:೫೦ಕ್ಕೆ.
೯ ಶನಿ – ಚಂದ್ರ ಜೋಡಿ (ಆಚ್ಛಾದನೆ ಕಾಣುವುದಿಲ್ಲ)
೧೨ ಭೂಮಿ–ಚಂದ್ರ ನಡುವೆ ಗರಿಷ್ಠ ದೂರ;
ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೧೪ ಜೆಮಿನಿಡ್ಸ್ ಉಲ್ಕಾವೃಷ್ಟಿ*
೧೫ ಚಾಂದ್ರಮಾಸದ ಕೊನೆಯ ಪಾದ; ಮಂಗಳ – ಚಂದ್ರ ಜೋಡಿ*
೧೫ ಬುಧ ಗ್ರಹದ ಗರಿಷ್ಠ ಕೋನೋನ್ನತಿ*
೨೧ ಚಂದ್ರ – ರೋಹಿಣಿ ಜೋಡಿ *
೨೧ ಉತ್ತರಾಯಣ
೨೨ ಮುಂಜಾವು ಬುಧ – ಗುರು ಜೋಡಿ*; ಹುಣ್ಣಿಮೆ ೨೩:೧೮ ಕ್ಕೆ
೨೩ ಗುರು – ಜ್ಯೇಷ್ಠಾ ಜೋಡಿ*
೨೪ ಚಂದ್ರ – ಭೂಮಿ ಕನಿಷ್ಠ ದೂರ.
೨೬ ಮಘ – ಚಂದ್ರ ಜೋಡಿ.*
೨೯ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
(*ಛಾಯಾಗ್ರಹಣಕ್ಕೆ ಸದವಕಾಶ)

ಡಾ॥ ದಿನೇಶ್ ನಾಯಕ್

# ಗೋಪಾಲಕೃಷ್ಣ ಅಡಿಗರ ‘ಶ್ರೀರಾಮನವಮಿಯ ದಿವಸ’

## ಒಂದು ಮರು ಓದು

ಅಡಿಗರು ‘ಶ್ರೀರಾಮನವಮಿಯ ದಿವಸ’ ಕವನವನ್ನು ಬರೆದದ್ದು ೧೯೬೮ರ ವೇಳೆಗೆ. ೧೯೭೨ರಲ್ಲಿ ಪ್ರಕಟವಾದ ‘ವರ್ಧಮಾನ’ ಎಂಬ ಕಾವ್ಯಸಂಕಲನದಲ್ಲಿ ಈ ಕವನ ಸೇರಿಕೊಂಡಿದೆ. ಈ ಕವನವನ್ನು ವಿಶ್ಲೇಷಿಸುವಾಗ ೬೦ರ ದಶಕದ ಭಾರತದ ರಾಜಕೀಯ ವ್ಯವಸ್ಥೆಯ ಬಗ್ಗೆ ಅಡಿಗರಿಗೆ ಇದ್ದ ಅಸಮಾಧಾನ, ನಿರಾಶೆ, ಹತಾಶೆಗಳ ಕುರಿತು ಕೆಲವೊಂದು ಸಂಗತಿಗಳನ್ನು ಇಲ್ಲಿ ಹೇಳಬೇಕಾಗುತ್ತದೆ. ಸಮಕಾಲೀನ ರಾಜಕೀಯದ ಬಗ್ಗೆ ಅಪಾರವಾದ ಆಸಕ್ತಿ ಮತ್ತು ಭಾರತ ರಾಷ್ಟ್ರದ ಕುರಿತ ತಮ್ಮದೇ ಆದ ಯೋಚನೆ, ನಿಲುವುಗಳನ್ನು ಹೊಂದಿದ್ದ ಅಡಿಗರು ಮಹಾತ್ಮ ಗಾಂಧಿ ನಂತರದ ವಿಷಮಗೊಂಡ, ದಿಕ್ಕುತಪ್ಪಿದ ಭಾರತದ ರಾಜಕಾರಣದ ಬಗ್ಗೆ ಒಂದು ಬಗೆಯ ಕ್ರೋಧವನ್ನು ವ್ಯಕ್ತಪಡಿಸುತ್ತಾ ಬಂದವರು. ಸ್ವತಂತ್ರ ಭಾರತದ ಪ್ರಥಮ ಪ್ರಧಾನಿ ನೆಹರು ಅವರ ರಾಜ್ಯಭಾರದ ಕ್ರಮ, ಅವರ ಸಮಾಜವಾದದ ಬಗ್ಗೆ ತೀವ್ರ ಆಕ್ಷೇಪವನ್ನು ಹೊಂದಿದ್ದ ಅಡಿಗರು ಅದೇ ಬಗೆಯ ಮನಸ್ತಾಪವನ್ನು ಕಮ್ಯುನಿಸ್ಟರ ಬಗ್ಗೆ ಕೂಡ ಇಟ್ಟುಕೊಂಡಿದ್ದರು. ಹಾಗೆಯೇ, ಅಡಿಗರಿಗೆ ನೆಹರೂ ಬಳಿಕದ ಇಂದಿರಾ ಗಾಂಧಿಯವರ ‘ಜನಪ್ರಿಯತೆ’ಯ ಹಾದಿಹಿಡಿದ ಸರ್ವಾಧಿಕಾರಿ ಮಾದರಿಯ ರಾಜ್ಯಭಾರ ಕ್ರಮದ ಬಗ್ಗೆ ತೀವ್ರ ಅಸಹನೆ ಇತ್ತು. ಆಡಳಿತ ನಡೆಸುವವರು ಎಲ್ಲರಿಗೂ ಅನುಕೂಲವಾಗುವ ಹಾಗೆ, ಎಲ್ಲರಿಗೂ ನ್ಯಾಯ ಲಭಿಸುವ ಹಾಗೆ ಪ್ರಜೆಗಳನ್ನು ಆಳಬೇಕು. ನಮ್ಮ ಪರಂಪರೆಯಲ್ಲಿ ಹಿಂದಿನಿಂದಲೂ ಇದೊಂದು ಜೀವನ ಮಾರ್ಗವಾಗಿ ಬಂದಿದೆ ಎಂಬುದಾಗಿ ಅವರು ಬಲವಾಗಿ ನಂಬಿದ್ದರು. ಅಡಿಗರು ಬರೆದ ‘ರಾಜಕೀಯ ಮತ್ತು ನಾವು’ (ವಿಚಾರ ಸಾಹಿತ್ಯ-೨, ಕೆವಿಎನ್, ನಾಗವಾರ, ೧೯೮೦) ಎಂಬ ಲೇಖನದಲ್ಲಿ ಅಡಿಗರು ಕಲ್ಪಿಸುವ, ಕಾಣಬಯಸುವ ರಾಷ್ಟ್ರ ರಾಜಕಾರಣದ ಮತ್ತು ರಾಜ್ಯಭಾರದ ಚಿತ್ರಣವೊಂದು ನಮಗೆ ದೊರೆಯುತ್ತದೆ.

ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕಿದ ಕ್ಷಣದಿಂದ ಸಾಯುವವರೆಗೆ ಪ್ರಧಾನಿಯಾಗಿದ್ದ ನೆಹರುರವರು ಆಧುನಿಕ ವಿಜ್ಞಾನ – ತಂತ್ರಜ್ಞಾನಕ್ಕೆ ನೀಡುತ್ತಿದ್ದ ವಿಪರೀತ ಪ್ರಾಮುಖ್ಯತೆಯ ಬಗ್ಗೆ ಅಸಮಾಧಾನವನ್ನು ಕಾರುತ್ತಿದ್ದ ಅಡಿಗರು ‘ನೆಹರು ನಿವೃತ್ತರಾಗುವುದಿಲ್ಲ’ ಎಂಬ ಕವನವೊಂದನ್ನು ಬರೆದಿದ್ದರು. ಅಡಿಗರ ‘ಶ್ರೀರಾಮನವಮಿಯ ದಿವಸ’ ಕವನ ರಚನೆಯ ಸಂದರ್ಭದಲ್ಲಿ ಭಾರತದ ಪ್ರಧಾನಿಯಾಗಿದ್ದವರು ಶ್ರೀಮತಿ ಇಂದಿರಾ ಗಾಂಧಿಯವರು. ಇಂದಿರಾ ಗಾಂಧಿ ಏಕಪಕ್ಷದ, ಏಕಚಕ್ರಾಧಿಪತ್ಯದ ಅತ್ಯಂತ ದಿಟ್ಟ ನಾಯಕಿಯಾಗಿ ಸೆಡ್ಡು ಹೊಡೆದು ನಿಂತು ನಿರಂತರ ಮೂರು ಅವಧಿಗೆ ಪ್ರಧಾನಿಯಾಗಿ, ಆಡಳಿತ ನಡೆಸುತ್ತಿದ್ದ ಪರಿಸ್ಥಿತಿಯಲ್ಲಂತೂ ಅಡಿಗರು ವಿಪರೀತ ವ್ಯಗ್ರರಾಗಿದ್ದರು. ಪ್ರಜಾಪ್ರಭುತ್ವಾತ್ಮಕ ಸಂಸ್ಥೆಗಳನ್ನು ದಮನ ಮಾಡುವ ಮತ್ತು ಅವುಗಳ ಕಾರ್ಯವ್ಯಾಪ್ತಿಯನ್ನು ಸಂಕುಚಿತಗೊಳಿಸುವ ಸರ್ವಾಧಿಕಾರಿ ಮಹತ್ವಾಕಾಂಕ್ಷೆಯ ಆಕೆಯ ದರ್ಪದ ಬಗ್ಗೆ ಅವರು ತೀವ್ರ ಕುಪಿತರಾಗಿದ್ದರು. ಇಂದಿರಾ, ಅಧಿಕಾರವನ್ನು ವೈಯಕ್ತೀಕರಣಗೊಳಿಸುವ ನಿಟ್ಟಿನಲ್ಲಿ ಸಾಂವಿಧಾನಾತ್ಮಕ ನಡಾವಳಿಗಳ ಬಗ್ಗೆ ನಿರಾಸಕ್ತಿ ತಾಳಿದ್ದರು. ತನ್ನ ವೈಯಕ್ತಿಕ ವರ್ಚಸ್ಸಿಗಾಗಿ ಅಲ್ಲಿಯವರೆಗೆ ಈ ನಾಡಿನ ವಿಭಿನ್ನ ಸಮುದಾಯಗಳ ಗಟ್ಟಿ ಧ್ವನಿಯಾಗಿದ್ದ ಕಾಂಗ್ರೆಸ್ ಪಕ್ಷವನ್ನೇ ಬಲಿ ಕೊಟ್ಟರು. ರಾಜಕೀಯ ಐಕಾನ್ ಆಗಬೇಕೆಂಬ ಅದಮ್ಯ ಬಯಕೆ ಮತ್ತು ಜನಪ್ರಿಯತೆಗಾಗಿ ಹಸಿದಿದ್ದ ಇಂದಿರಾ, ನೀರಾ ಚಾಂದೋಕ್ ಹೇಳುವಂತೆ ಕಾಂಗ್ರೆಸ್ ಪಕ್ಷವನ್ನೇ ಬದಲಾಯಿಸಿಬಿಟ್ಟರು. ಈ ದೇಶದ ರಾಜಕೀಯ ವಿದ್ಯಮಾನಗಳನ್ನು ಅತ್ಯಂತ ಸೂಕ್ಷ್ಮವಾಗಿ ದುರ್ಬೀನ್ ಕಣ್ಣುಗಳಿಂದ ಕಾಣುತ್ತಾ ಬಂದಿದ್ದ ಅಡಿಗರಿಗೆ ಇವೆಲ್ಲವೂ ಘಾಸಿಗೊಳಿಸಿದ್ದ ಸಂಗತಿಗಳಾಗಿದ್ದವು. ಹಾಗಾಗಿ ಅವರು ಮತ್ತೆ ಮತ್ತೆ ಹೇಳುವ ಮಾತಿದು – ಸರ್ವಾಧಿಕಾರಿ ಪಕ್ಷ ಒಂದು ಸಲ ಚುನಾವಣೆಗಳ ಮೂಲಕ ಅಧಿಕಾರಕ್ಕೆ ಬಂತೆಂದರೆ ಅಲ್ಲಿ ಪ್ರಜೆಗಳ ಕಥೆ ಮುಗಿದ ಹಾಗೆ. ನಾವು ರಾಜಕೀಯದ ಬಗ್ಗೆ ಎಚ್ಚರ ತಪ್ಪಿದರೆ ಸರ್ವಾಧಿಕಾರಿ ಶಕ್ತಿಗಳು ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ನಾಶಮಾಡಬಹುದು. ವ್ಯಕ್ತಿಸ್ವಾತಂತ್ರ್ಯಕ್ಕೆ ಧಕ್ಕೆ ಬರಬಹುದು.

ಸದಾ ಪ್ರಜಾಪ್ರಭುತ್ವದ ಪರವಾಗಿ ಮಾತಾಡುತ್ತಿದ್ದ ಅಡಿಗರು ರಾಜ್ಯ ರಾಜಕಾರಣಕ್ಕಿಂತ ರಾಷ್ಟ್ರ ರಾಜಕಾರಣದ ಕುರಿತು ಹೆಚ್ಚು ಆಸಕ್ತರಾಗಿದ್ದರು. ಹಾಗಾಗಿ ರಾಜ್ಯದಲ್ಲಿ ಆ ಹೊತ್ತಿಗೆ ಕಾಂಗ್ರೆಸ್ ಅಧಿಕಾರದ ಗದ್ದುಗೆಯಲ್ಲಿದ್ದರೂ ಕೇಂದ್ರದಲ್ಲಿ ಕಾಂಗ್ರೆಸ್



ಶ್ರೀರಾಮನವಮಿ ಹಬ್ಬ ಆಚರಿಸುವುದು ಚೈತ್ರಮಾಸ ಶುಕ್ಲಪಕ್ಷದಲ್ಲಿ. ಅಂದರೆ ಸಾಮಾನ್ಯವಾಗಿ ಏಪ್ರಿಲ್ ತಿಂಗಳಿನಲ್ಲಿ. ಕವಿಯ ಪ್ರಕಾರ ರಾಮನವಮಿಯ ದಿವಸ ರಾಮನ ಹೆಸರು ಹೇಳುವುದೇ ಅಮೃತ. ಹಾಗೆಯೇ ಇಲ್ಲಿ ಕಾಯುವ ಶಬರಿಯನ್ನು ಕವಿ ತರುತ್ತಾರೆ. ಶಬರಿ ರಾಮನಿಗಾಗಿ ಕಾಯುತ್ತಿರುವ ದೃಶ್ಯವನ್ನು ಈ ರಾಷ್ಟ್ರದ ಅನೇಕ ಮಂದಿ ಜನರು ಒಬ್ಬ ಪ್ರಜಾಪ್ರಭುತ್ವವಾದಿ ರಾಷ್ಟ್ರನಾಯಕನ ಬರುವಿಕೆಗಾಗಿ ಉರಿಯುತ್ತಾ ಕಾಯುತ್ತಿರುವಂತಿದೆ. ಅವರೆಲ್ಲರೂ ಬಹುಶಃ ಬಿಡುಗಡೆಗಾಗಿ ಕಾಯುತ್ತಿದ್ದಾರೆ. ಕವಿಗೆ ರಾಮ ಬೇಸಿಗೆಯ ಉರಿಬಿಸಿಲಿನಲ್ಲಿ, ತಾಪದಲ್ಲಿ ಉರಿಯುತ್ತಿರುವ ದೇಹಕ್ಕೆ ಸುಖ ನೀಡುವವನು, ರಾಮನಾಮ ಬೇಸಿಗೆಯ ಸುಡುಬಿಸಿಲಿಗೆ ಅವ್ಯವಸ್ಥಿತಗೊಂಡ ನಾಡಿನ ಜನರ ಮನಸ್ಸಿಗೆ ತಂಪು ನೀಡುವಂಥದು.

ಪಕ್ಷದ ಇಂದಿರಾ ಗಾಂಧಿಯಿಂದಾಗಿ ಪ್ರಜಾಪ್ರಭುತ್ವದ ಅಂತ್ಯ ಸಮೀಪಿಸುತ್ತಿದೆ ಎಂದು ಭಾವಿಸಿದ್ದರು. ಚುನಾವಣೆಗಳ ಮೂಲಕ ಪ್ರಜೆಗಳೇ ಆರಿಸುವ ವಿರೋಧ ಪಕ್ಷಗಳ ಚಟುವಟಿಕೆಗಳಿಗೆ ಸಂಪೂರ್ಣ ಅವಕಾಶ ಇರುವ, ಪ್ರತಿಯೊಬ್ಬನ ವ್ಯಕ್ತಿತ್ವವನ್ನು ಗೌರವಿಸುವ, ಭಿನ್ನ ಆಚಾರ–ವಿಚಾರಗಳ ಬಗ್ಗೆ ಸದಾ ಸಹಿಷ್ಣುತೆ ತೋರುವ ಪ್ರಜಾಪ್ರಭುತ್ವವೊಂದೇ ಈಗಿನ ಕಾಲದಲ್ಲಿ ಕಾರ್ಯಗತವಾಗಬಲ್ಲ ಆದರ್ಶರಾಜ್ಯ ಎಂಬುದಾಗಿ ಅವರು ತಿಳಿದಿದ್ದರು. ಆದರೆ ಆ ಹೊತ್ತಿಗಾಗಲೇ ನೆಹರೂ ಮತ್ತು ಇಂದಿರಾ ಪ್ರಣೀತ ಕಾಂಗ್ರೆಸ್‌ನಿಂದ ಆ ಆದರ್ಶ ರಾಜ್ಯ ಕಲ್ಪಿತ ಸಮುದಾಯವಾಗಿ ಬಿಟ್ಟಿದೆ ಎಂದು ಅಡಿಗರು ಯೋಚಿಸಲು ಆರಂಭಿಸಿದ್ದರು. ಹಾಗಾಗಿ 'ಶ್ರೀರಾಮನವಮಿಯ ದಿವಸ' ಕವನದ ಕವಿ ಪನಿವಾರ ತಿಂದು ಪಾನಕ ಕುಡಿದು ಸುತ್ತಲೂ ನೋಡುತ್ತಾ, ಕವಿ ಕಂಪಿಸುತ್ತಾ, ಒಂದು ಮಹಾಸ್ಫೋಟಕ್ಕಾಗಿ ಹಾಗೂ ಯಾರದೋ ಬರವಿಗಾಗಿ ಕಾದಿದ್ದಾರೆ.




ಅಡಿಗರಿಗೆ ಈಗ ಈ ರಾಷ್ಟ್ರದಲ್ಲಿ ಇರುವುದು ಸರ್ವಾಂಗ ಪರಿಪೂರ್ಣ ಎನ್ನುವಂಥ ಆದರ್ಶರಾಜ್ಯ ಅಲ್ಲ ಎಂದು ಸ್ಪಷ್ಟವಾಗಿ ತಿಳಿದಿದೆ. ನ್ಯಾಯಕ್ಕಾಗಿ, ಸತ್ಯಕ್ಕಾಗಿ, ವ್ಯಕ್ತಿಸ್ವಾತಂತ್ರ್ಯಕ್ಕಾಗಿ ಎದ್ದು ನಿಲ್ಲುವ, ತನ್ನ ಮತ್ತು ಇತರರ ವ್ಯಕ್ತಿತ್ವ ರಕ್ಷಣೆಗಾಗಿ ಹೋರಾಡುವ, ಅನ್ಯಾಯವನ್ನು ಸದಾ ಪ್ರತಿಭಟಿಸುವ ವೀರಧರ್ಮವನ್ನು ಕಾಪಾಡುವ ರಾಜ/ರಾಜಕಾರಣಿ ಅಡಿಗರಿಗೆ ಬೇಕಾಗಿದೆ. ಹಿಂದಿನ ರಾಜರು ಈ ಬಗೆಯ ಮೌಲ್ಯಗಳನ್ನು ಹೊಂದಿದ್ದರು ಎಂಬ ಭಾವನೆ ಅವರಲ್ಲಿದೆ. ಹಾಗಾಗಿ ನಮ್ಮ ಪರಂಪರೆ/ಸಂಸ್ಕೃತಿಯಲ್ಲಿ ಇದಕ್ಕೆ ಪ್ರತೀಕವಾದ ಪ್ರತಿಮೆ ಇದೆಯೇ ಎಂಬ ಯೋಚನೆಯಲ್ಲಿ ಅವರಿಗೆ ರಾಮ ಸರ್ವಸದ್ಗುಣಶೀಲನಾದ ಪ್ರಜಾಪಾಲಕನಾಗಿ ಕಾಣಿಸಿಕೊಳ್ಳುತ್ತಾನೆ. ರಾಮ ವ್ಯಕ್ತಿಸ್ವಾತಂತ್ರ್ಯವನ್ನು ಎತ್ತಿಹಿಡಿಯುವವನು, ಪ್ರಜೆಗಳ ಮಾತನ್ನು ಗಂಭೀರವಾಗಿ ಪರಿಗಣಿಸುವವನು ಆ ಅರ್ಥದಲ್ಲಿ ಅವರಿಗೆ ಆತ ಪ್ರಜಾಪ್ರಭುತ್ವವಾದಿಯೇ. ಮಾತ್ರವಲ್ಲದೇ ಅಡಿಗರಿಗೆ ಆತ ವ್ರತಸ್ಥನು, ಮರ್ಯಾದಾ ಪುರುಷೋತ್ತಮನು ಕೂಡ.

ಈ ಹಿನ್ನೆಲೆಯಲ್ಲಿ ಈ ಕವನದ ವಿಷಾದವನ್ನು / ಸಂಭ್ರಮವನ್ನು ಗಮನಿಸಬೇಕಾಗುತ್ತದೆ. ಹಾಗೆ ನೋಡಿದರೆ ಕವನದ ಆರಂಭ ಒಂದು ಹುಟ್ಟುಹಬ್ಬದ ವಾತಾವರಣದಲ್ಲಿದೆ. ಶ್ರೀರಾಮನವಮಿ ಹಬ್ಬ ಆಚರಿಸುವುದು ಚೈತ್ರಮಾಸ ಶುಕ್ಲಪಕ್ಷದಲ್ಲಿ. ಅಂದರೆ ಸಾಮಾನ್ಯವಾಗಿ ಏಪ್ರಿಲ್ ತಿಂಗಳಿನಲ್ಲಿ. ಕವಿಯ ಪ್ರಕಾರ ರಾಮನವಮಿಯ ದಿವಸ ರಾಮನ ಹೆಸರು ಹೇಳುವುದೇ ಅಮೃತ. ಹಾಗೆಯೇ ಇಲ್ಲಿ ಕಾಯುವ ಶಬರಿಯನ್ನು ಕವಿ ತರುತ್ತಾರೆ. ಶಬರಿ ರಾಮನಿಗಾಗಿ ಕಾಯುತ್ತಿರುವ ದೃಶ್ಯವನ್ನು ಈ ರಾಷ್ಟ್ರದ ಅನೇಕ ಮಂದಿ ಜನರು ಒಬ್ಬ ಪ್ರಜಾಪ್ರಭುತ್ವವಾದಿ ರಾಷ್ಟ್ರನಾಯಕನ ಬರುವಿಕೆಗಾಗಿ ಉರಿಯುತ್ತಾ ಕಾಯುತ್ತಿರುವಂತಿದೆ. ಅವರೆಲ್ಲರೂ ಬಹುಶಃ ಬಿಡುಗಡೆಗಾಗಿ ಕಾಯುತ್ತಿದ್ದಾರೆ. ಕವಿಗೆ ರಾಮ ಬೇಸಿಗೆಯ ಉರಿಬಿಸಿಲಿನಲ್ಲಿ, ತಾಪದಲ್ಲಿ ಉರಿಯುತ್ತಿರುವ ದೇಹಕ್ಕೆ ಸುಖ ನೀಡುವವನು, ರಾಮನಾಮ ಬೇಸಿಗೆಯ ಸುಡುಬಿಸಿಲಿಗೆ ಅವ್ಯವಸ್ಥಿತಗೊಂಡ ನಾಡಿನ ಜನರ ಮನಸ್ಸಿಗೆ ತಂಪು ನೀಡುವಂಥದು.

ಕವನದ ಮುಂದಿನ ಸಾಲುಗಳಲ್ಲಿ ಬಿಸಿಲಿನಲ್ಲಿ ಕಾಯುತ್ತಾ ಮಣ್ಣಿನ ಒಳಗಡೆ ಇರುವ ಒಂದು ಬೀಜದ ಚಿತ್ರವಿದೆ. ಈ ಬೀಜ ಅಂದರೆ ಹೊಸ ಬದುಕಿಗಾಗಿ ಕಾದಿರುವ ಹೊಸ ಜೀವವೊಂದರ ಪ್ರತಿಮೆ. ಇದು ಕೂಡ ಬಿಡುಗಡೆಗಾಗಿ ಕಾಯುತ್ತಿದೆ. ಈ ಬೀಜಕ್ಕೂ ಕೂಡ ಆಚೆ ಬಂದು ಮೊಳಕೆ ಒಡೆಯಬೇಕು, ಚಿಗುರಬೇಕು, ಬೆಳೆದು ಮರವಾಗಬೇಕು, ಹಣ್ಣು ನೀಡಬೇಕು ಆ ಮೂಲಕ ತನ್ನ ಬಾಳು ಸಾರ್ಥಕಗೊಳ್ಳಬೇಕು ಎಂಬ ಬಯಕೆ ಇದೆ. ಆಧುನಿಕ ವ್ಯಕ್ತಿಯೂ ಹಾಗೆಯೇ ವಿಕಸನಗೊಳ್ಳುವ ಹಂಬಲ ಉಳ್ಳವನು. ಆದರೆ ಈ ಸಹಜ ಕ್ರಿಯೆ ಅಥವಾ ಘಟನೆಗಳು ಸಂಭವಿಸಲು ಯಾರೋ ಬರಬೇಕು, ಏನೋ ಆಗಬೇಕು. ಹಾಗಾಗಿ ಯಾರದೋ ಬರುವಿಕೆಗಾಗಿ ಕಾತರರಾಗಿರುವ, ಕಾದು ಉರಿಯುತ್ತಿರುವ ವ್ಯಕ್ತಿಗಳು ಈ ದೇಶದಲ್ಲಿ ಇದ್ದಾರೆ. ಗಿರಿಯ ನೆತ್ತಿಯಲ್ಲಿ ಗುಮ್ಮಟನೊಬ್ಬನು ಉದಯವಾಗುವ ರೀತಿಯಲ್ಲಿ ಚರಿತ್ರೆಯಲ್ಲಿ ಅಪರೂಪವೂ ಅಪೂರ್ವವೂ ಆದ ಘಟನೆಯೊಂದು ಕಾರ್ಯಕಾರಣದಿಂದ ಸಂಭವಿಸಬೇಕು. ಹಾಗಾದಾಗ ಮಾತ್ರ ಈ ರಾಷ್ಟ್ರದಲ್ಲಿ ಸಮಸ್ಯೆಗಳು ಪರಿಹಾರವಾಗಲು ಸಾಧ್ಯ.

ಕವನದ ಮುಂದಿನ ಸಾಲುಗಳು ಸ್ವತಂತ್ರ ಭಾರತದಲ್ಲಿ ಆಧುನಿಕ ವಿಜ್ಞಾನ–ತಂತ್ರಜ್ಞಾನದ ಮೂಲಕ ಸಾಧ್ಯವಾದ ವೈಜ್ಞಾನಿಕ ಸಾಧನೆಗಳನ್ನು ಕುರಿತು ಹೇಳುತ್ತಲೇ ತಕ್ಷಣ ಅವೆಲ್ಲವೂ ಸೋತು ನೆಲಕ್ಕುರುಳುವ, ಮರಳಿ ಮಣ್ಣನ್ನು ಸೇರುವ ದೃಶ್ಯವನ್ನು ಚಿತ್ರಿಸುತ್ತವೆ. ಮಾತ್ರವಲ್ಲದೆ ಚಂದ್ರನತ್ತ ನಮ್ಮ ವಿಜ್ಞಾನಿಗಳ ಪಯಣವನ್ನು ವೈಜ್ಞಾನಿಕತೆಯ ವಿಕಾರ, ವಿಫಲ ಪ್ರಯೋಗವಾಗಿ ಕವಿ ಕಾಣುತ್ತಾರೆ. ಹಾಗಾಗಿ ಅವರು "........ಆಧುನಿಕ ವಿಜ್ಞಾನ ಸಾಧನಗಳ ಸಹಾಯದಿಂದ ಈಗಿನ ಸರ್ವಾಧಿಕಾರಿ ಸಹಸ್ರಾಕ್ಷನಾಗಿ ಪ್ರತಿಯೊಬ್ಬನ ದೈನಿಕ ಜೀವನದ ಪ್ರತಿಯೊಂದು ಅಂಶವನ್ನೂ ಗಮನಿಸಬಲ್ಲ; ಸಹಸ್ರಬಾಹುವಾಗಿ ನಮ್ಮ ನಿಮ್ಮ ಎಲ್ಲರ ತಲೆಯ ಮೇಲೂ ಏಕಕಾಲಕ್ಕೆ ಮೊಟಕಬಲ್ಲ. ವಿಮಾನ, ರೇಡಿಯೋ, ತಂತಿ, ಟಪಾಲ, ಮದ್ದು ಗುಂಡು, ಬಾಂಬು – ಇವುಗಳ ಸಹಾಯದಿಂದ ಇಡೀ ದೇಶವನ್ನೆಲ್ಲ ದೊಡ್ಡ ಜೇಡರಬಲೆಯಂತೆ ಹೆಣೆದು ಮಧ್ಯದಲ್ಲಿ ವಿರಾಜಮಾನವಾಗಿ ಸೂತ್ರ ಹಿಡಿದು ಆಡಿಸಬಲ್ಲ" ಎಂದು ಹೇಳುತ್ತಾರೆ. ಅಡಿಗರಿಗೆ ನೆಹರು–ಇಂದಿರಾ ಗಾಂಧಿ ಆಧುನಿಕತೆ, ವಿಜ್ಞಾನ–ತಂತ್ರಜ್ಞಾನಕ್ಕೆ ತಂದುಕೊಟ್ಟ ಪ್ರಾಮುಖ್ಯತೆಯ ಬಗ್ಗೆ ಅಸಹನೆ ಇದೆ. ಹಾಗಾಗಿ ಆಧುನಿಕ ಭಾರತದ ಬಾಹ್ಯಾಕಾಶ ಸಂಶೋಧನೆಗಳನ್ನು ಅವರು ಈ ದೇಶದ ವೈಜ್ಞಾನಿಕ ಸಾಧನೆ ಎಂಬುದಾಗಿ ಪರಿಗಣಿಸುವುದೇ ಇಲ್ಲ. ಅವರಿಗೆ ಅವೆಲ್ಲವೂ ವಿಕಾರವಾಗಿ ಕಾಣುತ್ತವೆ.

ಇಂಥ ವಿಕಾರಗಳು ಆಧುನಿಕ ವೈಜ್ಞಾನಿಕ ನಾಗರಿಕತೆಯ ಸನ್ನಿವೇಶದಲ್ಲಿ ಸಂಭವಿಸುವುದರಿಂದ ಕವಿಗೆ ಪರಂಪರೆಯ ಸಂತೃಪ್ತ ಲೋಕವಾಗಿ ವೇದಗಳು, ಉಪನಿಷತ್‌ಗಳು ಕಾಣಿಸಿಕೊಳ್ಳುತ್ತವೆ. ಅಲ್ಲಿರುವ ಮೌಲ್ಯಗಳು ವರ್ತಮಾನದ ಕಲುಷಿತಗೊಂಡ ರಾಜಕಾರಣದಿಂದ ಕಣ್ಮರೆಯಾಗಿವೆ. ಹಾಗಾಗಿ ಅವುಗಳನ್ನು ಭೂತಕನ್ನಡಿಯ ಸಹಾಯದಿಂದ ಹುಡುಕಬೇಕಾಗಿದೆ. ವರ್ತಮಾನದ ಈ ಹುಡುಕಾಟದಿಂದ ಭವಿಷ್ಯವನ್ನು ಕಟ್ಟಬೇಕಾಗಿದೆ. ಹಾಗಾಗಿ ಕವಿ ಸದ್ಯದ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳುವುದು ನಮ್ಮ ಪರಂಪರೆಯಲ್ಲಿ. ವೇದೋಪನಿಷತ್ತುಗಳಲ್ಲಿರುವ ಆದರ್ಶಗಳನ್ನು, ಮೌಲ್ಯಗಳನ್ನು ಹುಡುಕುತ್ತಾ ಕವಿ ಅಲ್ಲಿಂದ ಮುಂದಕ್ಕೆ ಹೋದಂತೆ ರಾಮನ ನೆನಪಾಗುವುದು. ಕವನದ ಮುಂದಿನ ಭಾಗದಲ್ಲಿ ಸಂಪೂರ್ಣ ರಾಮನೇ ತುಂಬಿ ಬಿಟ್ಟಿದ್ದಾನೆ.

ರಾಮನು ಕೌಸಲ್ಯೆ ದಶರಥರಿಗೆ ಹಠಾತ್ ಆಗಿ ಅಪರೂಪದ ಘಟನೆಯಾಗಿ ಹುಟ್ಟಿದನು. ಅವನು ಪುತ್ರಕಾಮೇಷ್ಟಿಯಲ್ಲಿ ಫಲಗೊಂಡವನು. ಆದರೆ ಸಾಮಾನ್ಯನಂತಿದ್ದು ಭಿನ್ನನಾಗಿದ್ದನು. ಹಾಗಾಗಿ ಕವಿಯ ಪ್ರಕಾರ ಆತನಲ್ಲಿ ಗರಿಷ್ಠ ತೇಜಸ್ಸು ಇತ್ತು. ಇಂಥ ತೇಜೋಮಯನಾದ, ವಿರಾಟ್ ವ್ಯಕ್ತಿತ್ವದ ಆತ ನೆಲೆಯೂರಿ ನಿಂತದ್ದು ಈ ಮಣ್ಣಲ್ಲಿ. ಬಳಿಕ ಆತ ನಂತರ ರಾಜಾರಾಮನಾದ, ಪ್ರಜಾಪಾಲಕನಾದ ಮತ್ತು ತ್ರಿಕಾಲ ಚಕ್ರದಲ್ಲಿ ಸದಾ ತಿರುಗುವಂತಹ ಆದರ್ಶ ವ್ಯಕ್ತಿಯಾದ. ಹಾಗಾಗಿ ಕವಿಗೆ ಇದೊಂದು ವಿಸ್ಮಯದ ಅಪರೂಪದ ಘಟನೆ. ಕವಿಗೆ ರಾಮನು ಪರಂಪರೆ ಮಾತ್ರವಲ್ಲದೆ ಆಧುನಿಕ ಸಿಡಿತಲೆಯೂ ಹೌದು. ಅಂದರೆ ಆಧುನಿಕ ವಿಜ್ಞಾನ–ತಂತ್ರಜ್ಞಾನದ ಸಿಡಿತಲೆಗೆ ಪರ್ಯಾಯವಾದ ಪರಂಪರೆಯ ಸಿಡಿತಲೆ ರಾಮ. ಕವಿಯ ಪ್ರಕಾರ ಈತನು ಬೌದ್ಧಿಕವಾಗಿ ವಿಶೇಷ ಜ್ಞಾನಿಯೂ ಹೌದು. ಹಾಗಾಗಿ ಈತ ಆಧುನಿಕ ರಾಜಕೀಯ ಸನ್ನಿವೇಶದಲ್ಲಿ ಅತ್ಯಂತ ಆದರ್ಶಪ್ರಾಯನು, ಪ್ರಸ್ತುತನು. ಈ ಕಾರಣಕ್ಕಾಗಿಯೇ ಈ ನಾಡಿನಲ್ಲಿ ರಾಮನು ಹಂಸ ಒಯ್ಯುವ ಒಂದು ಸುಂದರ ಒಸಗೆಯಂತೆ ಜನಜನಿತನಾದ. ಜನಮಾನಸದ ಕಣ ಕಣದಲ್ಲಿ ಸುರುಳಿ ಸುರುಳಿಯಾಗಿ, ಹುಡುಕಿ ಹುಡುಕಿ ಸೇರಿ ಬಿಟ್ಟ. ಇದರಿಂದಾಗಿ ಆಧುನಿಕ ನಾಗರಿಕತೆಯಲ್ಲಿ ಎಲ್ಲರಿಗೂ ಮನಸೋ ಇಚ್ಛೆಯಂತೆ ಓಡಾಡಲು ಯೋಗ್ಯವಾಗುವಂಥ ಹೆದ್ದಾರಿಯಂತೆ ರಾಮಚರಿತೆಯೊಂದು ಸೃಷ್ಟಿಯಾಯಿತು. ರಾಮನು ಮಣ್ಣಿನ ಮಗಳಾದ ಜಾನಕಿಗೆ ನಿಷ್ಠನಾಗಿ ಆಕೆಯ ಮೇಲಿನ ಆಕರ್ಷಣೆಯಿಂದ ಲಂಕೆಯನ್ನು ನಾಶಮಾಡಿದನು. ಬಳಿಕ

ಅಗ್ನಿಪರೀಕ್ಷೆ ಮಾಡದೇ ಸೀತೆಯನ್ನು ಮುಟ್ಟೆನು ಎಂಬ ಉಡಾಫೆಯನ್ನು ತೋರಿದನು ಎಂದು ಕವಿ ಹೇಳುವಾಗ ಅದು ವ್ಯಂಗ್ಯವಲ್ಲ. ಬದಲಾಗಿ ಆಡಳಿತಗಾರ/ರಾಜಕಾರಣಿಯಾದವನು ಪ್ರತಿಬಾರಿಯೂ ತನ್ನ ಕೌಟುಂಬಿಕ, ಖಾಸಗಿ ವಿಚಾರಗಳಿಗೆ ಸಂಬಂಧಿಸಿಯೂ ತನ್ನನ್ನು ತಾನು ಪರೀಕ್ಷೆಗೊಡ್ಡುತ್ತಾ ತನ್ನ ಚಾರಿತ್ರ್ಯವನ್ನು, ಪ್ರಾಮಾಣಿಕತೆಯನ್ನು, ತನ್ನ ನೀತಿ–ಧರ್ಮವನ್ನು ಪ್ರಜೆಗಳಿಗೆ ತೆರೆದಿಡುವ ಸಾಮಾಜಿಕ ಬದ್ಧತೆಯನ್ನು ಹೊಂದಿರಬೇಕು ಎಂಬ ಭಾವವಿದೆ.

ರಾಮನೇನೋ ರಾವಣನ ಅಥವಾ ಕೆಡುಕಿನ ತಲೆಗಳನ್ನು ಕಡಿದ. ಆದರೆ ಅದರಿಂದ ಎಲ್ಲವೂ ನಾಶವಾಯಿತೇ? ಇಲ್ಲ. ಕೇಡಿಗೆ ತಲೆಯ ಲೆಕ್ಕವಿಲ್ಲ ಎಂಬುದು ಬಳಿಕ ಈ ನಾಡಿನಲ್ಲಿ ಸ್ಪಷ್ಟಗೊಂಡಿದೆ. ಕೇಡನ್ನು ನಾಶ ಮಾಡಿದಂತೆ ಮತ್ತೆ ಮತ್ತೆ ಬೆಳೆವ ರಕ್ತಬೀಜಾಸುರರಂತೆ ಭ್ರಷ್ಟ ರಾಜಕಾರಣಿಗಳು ಇಲ್ಲಿ ಕಾಣಿಸಿಕೊಂಡಿದ್ದಾರೆ. ಹಾಗಾಗಿ ಇವರ ನಾಶಕ್ಕೆ ಯಾವ ಹತ್ಯಾರವೂ ಸಾಲದು, ಎಲ್ಲವೂ ದಂಡವಾಗುತ್ತಿದೆ ಎಂಬ ವಿಷಾದದಲ್ಲಿ ಕತ್ತಲೆಯಲ್ಲಿ ಕವಿ ಕುಳಿತಿದ್ದಾರೆ. ಬೆಳಕಿಲ್ಲದ ಅರ್ಥಾತ್ ಬುದ್ಧಿಯಿಲ್ಲದ, ಕಾಣ್ಕೆರಹಿತವಾದ ಈ ವ್ಯವಸ್ಥೆಯಲ್ಲಿ/ರಾಷ್ಟ್ರದಲ್ಲಿ ಬೆಳಕಿಗಾಗಿ ಚಕಮಕಿ ಕಲ್ಲನ್ನು ಉಜ್ಜುತ್ತಾ ಯಾವುದೋ ಸ್ಫೋಟಕ್ಕಾಗಿ, ಇನ್ಯಾವುದೋ ಅವತಾರದ ನಿರೀಕ್ಷೆಯಲ್ಲಿ ಕವಿ ಇಲ್ಲಿದ್ದಾರೆ. ಎಲ್ಲವೂ ಕಳೆದುಹೋಗುತ್ತಿರುವ ಈ ರಾಷ್ಟ್ರದಲ್ಲಿ ಆಶಾವಾದಿಯಾದ ಕವಿಯ ಮುಂದೆ ಪ್ರಶ್ನೆ ಇದೆ. ವಾಲ್ಮೀಕಿ ಹುತ್ತಗಟ್ಟಿ ರಾಮನನ್ನು ಚಿತ್ರಿಸಿದ. ಆದರೆ ಈಗ ಈ ಕವಿ ಹುತ್ತಗಟ್ಟಿ ಧ್ಯಾನಸ್ಥ ಸ್ಥಿತಿಯಲ್ಲಿ ರಾಮನನ್ನು ಚಿತ್ರಿಸಲು ಸಾಧ್ಯವಿಲ್ಲ. ಯಾಕೆಂದರೆ ಹುತ್ತಗಟ್ಟಿ ಚಿತ್ರಿಸಿದ ರಾಮ ಕಾವ್ಯನಾಯಕನಾದ, ಕಾಲ್ಪನಿಕನಾದ. ಹಾಗಾಗಿ ವಾಸ್ತವವನ್ನು ಅರ್ಥಮಾಡಿಕೊಂಡು ವಸ್ತುನಿಷ್ಠವಾಗಿ ಮತ್ತೆ ರಾಮನ ಆದರ್ಶಗಳನ್ನು ಸತತ ಪ್ರಯತ್ನ ಮತ್ತು ನೈಪುಣ್ಯತೆಯಿಂದ ಕೆತ್ತಬೇಕಾಗಿದೆ ಎಂಬ ಅರಿವು ಕವಿಗಿದೆ. ಆದ್ದರಿಂದ ಪುರುಷರಲ್ಲಿ ಉತ್ತಮನಾದ ರಾಮನ ಆದರ್ಶಗಳಿಗೆ ಮತ್ತೆ ಈ ರಾಷ್ಟ್ರದಲ್ಲಿ ಎಡೆ ದೊರಕೀತೇ ಎಂಬ ಪ್ರಶ್ನೆ ಇದೆ. ಅಂದರೆ ಅಡಿಗರಿಗೆ ಭಿನ್ನರನ್ನು ಗೌರವಿಸುವ, ವ್ಯಕ್ತಿಸ್ವಾತಂತ್ರ್ಯವನ್ನು ಬೆಂಬಲಿಸುವ ರಾಜಕಾರಣಿ/ಆಡಳಿತಗಾರ ಆಡಳಿತವನ್ನು ನಡೆಸಬೇಕಾಗಿದೆ. ಅವರಿಗೆ ರಾಮ ಅಂತಹ ಆಡಳಿತಗಾರನಾಗಿ ಕಾಣುತ್ತಾನೆ. ಹಾಗಾಗಿ ಈ ರಾಮನು ಒಂದು ಅರ್ಥದಲ್ಲಿ ಅವರಿಗೆ ಪ್ರಜಾಪರನೂ, ದೋಷರಹಿತನೂ ಆಗಿದ್ದಾನೆ.

ಅಡಿಗರ ಕಾವ್ಯಗಳನ್ನು ವಿಶ್ಲೇಷಿಸಿದ ಅನೇಕ ವಿಮರ್ಶಕರು ಅವರಲ್ಲಿರುವ ವೈದಿಕ ಪ್ರತಿಮೆಗಳು, ಪುರೋಹಿತಶಾಹಿ ಮತವ್ಯೂಹಗಳಿಂದ ಕೂಡಿದ ಹಿಂದುತ್ವದ ವೈಚಾರಿಕ ವಿನ್ಯಾಸಗಳನ್ನು ಕುರಿತು ಸಾಕಷ್ಟು ಚರ್ಚೆ ನಡೆಸಿದ್ದಾರೆ. ೭೦ರ ದಶಕದ ನಂತರದಲ್ಲಿ ಅಡಿಗರು ರಚಿಸಿದ ಬಹುತೇಕ ಕವನಗಳಲ್ಲಿ ಈ ಅಂಶಗಳು ಸ್ಪಷ್ಟವಾಗಿ ಕಾಣಿಸುತ್ತವೆಯಾದರೂ, ಪ್ರಸ್ತುತ 'ಶ್ರೀರಾಮನವಮಿಯ ದಿವಸ' ಕವನದಲ್ಲಿ ಹಿಂದುತ್ವದ ಜೊತೆಗಿನ ಅವರ ನಂಟು ಎಲ್ಲೂ ವ್ಯಕ್ತವಾಗುವುದಿಲ್ಲ. ಈ ಕವನ ೧೯೬೮ರ ವೇಳೆಗೆ ರಚನೆಯಾಗಿದ್ದರಿಂದ ಅವರಿಗೆ ಗಾಂಧಿಯ ಆದರ್ಶ ರಾಮ / ಗ್ರಾಮಸ್ವರಾಜ್ಯ ದೂರವಾಗುತ್ತಿರುವುದು ಸ್ಪಷ್ಟವಾಗತೊಡಗಿದೆ (ಮಹಾತ್ಮ ಗಾಂಧಿ ವಿಚಾರಧಾರೆಗಳ ಬಗ್ಗೆ ಅಡಿಗರಿಗೆ ಗೌರವವಿರುವುದು 'ನನ್ನ ಅವತಾರ' ಮತ್ತು ಗಾಂಧಿಯ ಬಗ್ಗೆ ಅವರು ರಚಿಸಿದ ಇನ್ನಿತರ ಕವನಗಳಿಂದ ಗುರುತಿಸಬಹುದು). ಹಾಗಾಗಿ ಅವರು ಏಕಪಕ್ಷ ಕಾಂಗ್ರೆಸ್, ಏಕವ್ಯಕ್ತಿ ಇಂದಿರಾ ಗಾಂಧಿಗೆ ಪರ್ಯಾಯವಾಗಿ ರಾಮನನ್ನು ಕಲ್ಪಿಸುತ್ತಾರೆ ಮತ್ತು ಅವನ ರಾಜ್ಯಭಾರದ ಹಪಹಪಿಕೆಯಲ್ಲಿ ಬೀಳುತ್ತಾರೆ. ಆದರೆ ಅಡಿಗರ ಈ ರಾಮನು ಸದ್ಯದ ವ್ಯಗ್ರ, ಅಸಹಿಷ್ಣು ಹಿಂದುತ್ವವಾದೀ ರಾಜಕಾರಣದ ಐಕಾನ್ ಆಗಿರುವ ರಾಮನಿಗಿಂತ ಭಿನ್ನನು.

ಈ ಹೊತ್ತು ಸಂಘಪರಿವಾರ ರಾಮನಿಗೆ ಕೇಸರಿ ಧೋತ್ರವನ್ನು ಉಡಿಸಿ, ಎಡದ ಕೈಯಲ್ಲಿ ಧನುಸ್ಸನ್ನು ಎತ್ತಿ ಹಿಡಿದು, ಬಲದ ಕೈಯಲ್ಲಿ ಬಾಣವನ್ನು ಹೂಡಲು ತಯಾರಾಗಿ ಎದೆ ಉಬ್ಬಿಸಿ ನಿಲ್ಲಿಸಿ, ತನ್ನವರನ್ನೆಲ್ಲ ದೂರ ಮಾಡಿಸಿ, ಏಕಾಂಗಿಯಾಗಿಸಿ ಆತನನ್ನು ಸೈನಿಕ ರಾಮನನ್ನಾಗಿಸಿದೆ. ಏಕವ್ಯಕ್ತಿ, ಏಕಚಕ್ರಾಧಿಪತ್ಯದ ಸರ್ವಾಧಿಕಾರಿ ಧೋರಣೆಯ ರಾಷ್ಟ್ರನಾಯಕನಾಗಿ ಮೋದಿ ಇಲ್ಲಿ ವಿಜೃಂಭಿಸುತ್ತಿದ್ದಾರೆ. ಭಾರತೀಯ ಜನತಾ ಪಕ್ಷದ ಈ ಆಡಳಿತ ಮತ್ತೊಂದು ಇಂದಿರಾ ಗಾಂಧಿ ಆಡಳಿತದ ವೈಖರಿಯಲ್ಲಿ ಸಾಗುತ್ತಿದೆ. ಇಲ್ಲಿ ರಾಮನ ಆದರ್ಶ, ಮೌಲ್ಯಗಳು ಖಿಲಗೊಂಡು ಕೇವಲ ರಾಮನ ಮೂರ್ತಿ ಮತ್ತು ಮಂದಿರದ ಸುತ್ತ ಎಲ್ಲವೂ ಗಿರಕಿ ಹೊಡೆಯುತ್ತಿದೆ. ಹಾಗಾಗಿ ೬೦ರ ದಶಕದಲ್ಲಿ ಅಡಿಗರು ತಮ್ಮ ಮನಃಪಟಲದಲ್ಲಿ ಕೆತ್ತಿದ ರಾಮನೇ ಬೇರೆ, ಈಗಿನ ಹಿಂದುತ್ವವಾದಿ ರಾಜಕಾರಣವು ಹಿಂದೂ ಭಾವಪ್ರಪಂಚವನ್ನು ಕೆರಳಿಸಲು ಈ ರಾಷ್ಟ್ರದಾದ್ಯಂತ ಚಿತ್ರಿಸಿರುವ ಮತ್ತು ಮತ್ತೆ ಮತ್ತೆ ಚಿತ್ರಿಸುತ್ತಿರುವ ರಾಮನೇ ಬೇರೆ.

**ಡಾ. ದಿನೇಶ್ ನಾಯಕ್**
ಸಹಾಯಕ ಪ್ರಾಧ್ಯಾಪಕ, ಕನ್ನಡ ವಿಭಾಗ
ಸಂತ ಅಲೋಶಿಯಸ್ ಪದವಿ ಕಾಲೇಜು (ಸ್ವಾಯತ್ತ) ಅಂಚೆಪೆಟ್ಟಿಗೆ ಸಂಖ್ಯೆ – ೨೨೦
ಮಂಗಳೂರು – ೫೭೫೦೦೩

# ಮನುಷ್ಯ



ಕಾವ್ಯಲೋಕ

Sujit Mishra

**ಅ**ಪ್ಪ ನೆಟ್ಟ ಹಲಸಿನ ಮರಕ್ಕೆ
ಇಷ್ಟ ಮಾನ ಮನುಷ್ಯಂಗಿದ್ದರೆ
ಸೊಪ್ಪು ಹಾಕದ ಗೊಬ್ಬರ ಬೇಡ
ಇಷ್ಟಷ್ಟು ದಿನ ಹೊಟ್ಟೆ ತುಂಬಲಕ್ಕು
ನೀನು ನೆಟ್ಟ ಸೆಸಿ ಮರವಾದರೆ
ನಿನಗೇ ಹೇಳ ನೆಟ್ಟದಲ್ಲ ಹೇಳು
ಆನು ಮಾಡುವ ಕೆಲಸ ಮಾಡಾತ್ತೆ
ಎನಗೇ ಹೇಳ ಮಾಡಿದರೆ ಸೋತೆ
ದನ ಕಂಜಿ ಹಾಕಿದ್ದು ಹಾಲುಕೊಡಲಲ್ಲ
ದನದ ವಂಶ ಉದ್ಧಾರಕ್ಕೆ ಹೇಳ
ಪಾಪದವ ಹೇಳ ನೋಡೆಡ ಎಂತ
ಉಪವಾಸ ಮಾಡಿದರೂ ರೋಗಿ ಅಲ್ಲ
ಕಪಟ ನಾಟಕ ನಟನೆ ಗೊಂತ್ತಿಲ್ಲೆ
ಇದ್ದಷ್ಟು ದಿನ ಒಪ್ಪೊತ್ತಾದರೂ ಉಣ್ತ
ಅದೇ ಅವಂ ಸಕ್ಕರೆ ಬೆಲ್ಲ ತಿಂತ
ಆದರೂ ಹೇಂಗಾದರೂ ಬದುಕುತ್ತ.

**ಎಂ. ಟಿ. ಶಾಂತಿಮೂಲೆ**
"ಸಾವಯವ" ಸಂಚಾಲಕ, ಪೈಲಾರು ಅಂಚೆ – ೫೭೪ ೨೪೮

ನಾನು ಓದಿದ ಪುಸ್ತಕ

ಲೇಖಕರು : **ದು. ಸರಸ್ವತಿ**
ಪುಟಗಳು : ೧೦೪ ಬೆಲೆ : ರೂ. ೮೦/–
ಪ್ರಕಾಶಕರು : **ಕವಿ ಪ್ರಕಾಶನ**, ಕವಲಕ್ಕಿ, ಹೊನ್ನಾವರ, ಉತ್ತರ ಕನ್ನಡ ಜಿಲ್ಲೆ




# ಸಣ್ತೆಮ್ಮಿ ಎಂಬ ನೆಲದ ಕಣ್ಣು

**ಕಾ**ಲು ದಶಕಗಳಿಂದ ದು. ಸರಸ್ವತಿಯವರ ಬದುಕಿನ ಭಾಗವಾಗಿ, ಚಿಂತನೆಯ ವ್ಯಕ್ತ ರೂಪವಾಗಿ ಅರಳಿದ ಕಿರು ನಾಟಕಗಳು ಈಗ 'ಸಣ್ತೆಮ್ಮಿ ಪುರಾಣ' ಎಂಬ ಹೆಸರಿನಲ್ಲಿ ಸಂಕಲಿತವಾಗಿ ಬಂದಿವೆ. ಇದರಲ್ಲಿ ಆರು ನಾಟಕಗಳಿವೆ. ಆಧುನಿಕ ಮಹಿಳಾ ಸಾಹಿತ್ಯ ಪುರಾಣ ಭಂಜನೆಯ ಕಡೆಗೆ ಮೊದಲಿನಿಂದಲೂ ಒಲವು ತೋರಿಕೊಂಡೇ ಬಂದಿದೆ. ಅದು ಪುರಾಣದ ಮಹಿಳೆಗೆ ತಾನು ಕೊರಳಾಗುವುದರೆಡೆಗೆ, ಅವಳದಲ್ಲದ ಮಾತುಗಳನ್ನು ಅವಳಿಂದ ಹೇಳಿಸಿರುವುದನ್ನು ಬಿಚ್ಚಿ ತೋರುವುದರೆಡೆಗೆ, ಅವಳನ್ನು ಕಟೆದು ಕೂರಿಸಿದ ಪ್ರತಿಮೆ ಇಂದಿನ ತನಗೆ ತೊಡಕಾಗಿರುವುದರಿಂದ ಅದನ್ನು ಒಡೆಯುವುದರೆಡೆಗೆ ಆಸಕ್ತಿ ತೋರಿದೆ. ಆದರೆ ಇಲ್ಲಿ ದು. ಸರಸ್ವತಿಯವರು ಈ ಎಲ್ಲಾ ಹಾದಿಗಳನ್ನು ದಾಟಿ ಸ್ವತಃ ಪುರಾಣವನ್ನೇ ನೆಲದ ಕಣ್ಣಿನಿಂದ ಹೆಣ್ಣು ಕಣ್ಣಿನಿಂದ ಬೆದಕಿ ತೋರುವ ತನ್ನದೇ ಒಂದು ಕಿರುದಾರಿಯನ್ನು ಸೃಷ್ಟಿಸುವೆಡೆಗೆ ಒಲವು ತೋರಿದ್ದಾರೆ. ಇದಕ್ಕಾಗಿ ಬಳಕೆಯಾದ 'ಸಣ್ತೆಮ್ಮಿ' ಎಂಬ ಪರಿಕಲ್ಪನೆ ಮತ್ತು 'ಪುರಾಣ' ಎಂಬ ಪರಿಕಲ್ಪನೆ ಇಡೀ ಸ್ಥಾಪಿತ ವ್ಯವಸ್ಥೆಯನ್ನು ಮತ್ತು ಚಿಂತನೆಯನ್ನು ಎದುರು ಹಾಕಿಕೊಳ್ಳುವ ಕ್ರಮ ಬಹಳ ಆಸಕ್ತಿದಾಯಕವಾದುದು. ಈ ಪುರಾಣ ಎನ್ನುವ ಪದವನ್ನು ಪಂಡಿತರು ಹೇಳಿದರೆ ಅದು ಪಾವಿತ್ರ್ಯವನ್ನು ಧರಿಸಿ ಎಂದೂ ಬದಲಾಗದ ಶಾಸನವಾಗಿಬಿಡುತ್ತೆ. ಅದನ್ನೇ ಪಾಮರರು ಹೇಳಿದರೆ ಅದೊಂದು ಕಂತೆ ಅನ್ನಿಸಿಕೊಂಡು ಹೆಚ್ಚು ತಲೆಕೆಡಿಸಿಕೊಳ್ಳಬೇಕಾಗಿರದ 'ಕಂತೆ ಪುರಾಣ' ಅನ್ನಿಸಿಕೊಂಡುಬಿಡುತ್ತೆ. ಹೀಗೆ ಅನ್ನಿಸಿಕೊಳ್ಳುವುದರಿಂದಲೇ ಅದಕ್ಕೊಂದು ಸ್ವಾಯತ್ತತೆಯೂ ಸಿಗುತ್ತೆ. ಈ ಸ್ವಾಯತ್ತತೆಯನ್ನು ಸಾಧ್ಯತೆಯಾಗಿ ಬಳಸಿಕೊಳ್ಳುವುದನ್ನು ಜನಪದರು ನಿರಂತರವಾಗಿ ಕಾಪಾಡಿಕೊಂಡು ಬಂದಿದ್ದಾರೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಪ್ರಜಾಪ್ರಭುತ್ವವನ್ನು ಕಾಪಿಟ್ಟುಕೊಳ್ಳುವ ಒಳವಿದ್ಯುತ್ ಆಗಿ ಇವು ಕೆಲಸ ಮಾಡುತ್ತಿರುತ್ತವೆ.

ಮೌಖಿಕ ಸಾಹಿತ್ಯ ಮಾಡಿದ ಈ ಕೆಲಸವನ್ನು ಲಿಖಿತ ಸಾಹಿತ್ಯದಲ್ಲಿ ಮಾಡಿದ ಮೊದಲಿಗನೆಂದರೆ ನಿಸ್ಸಂಶಯವಾಗಿ ಅದು ಹರಿಹರ. ಪುರಾಣದ ಪಾವಿತ್ರ್ಯವನ್ನು ನಿರ್ದಾಕ್ಷಿಣ್ಯವಾಗಿ ಅಡಿಮೇಲು ಮಾಡಿದವನು ಇವನು. ಹೆಣ್ಣು, ಅಸ್ಪೃಶ್ಯ, ಶೂದ್ರ, ವೇಶ್ಯೆಯರ ಹೆಸರನ್ನು ತಲೆಬರಹಕ್ಕೇ ತಂದ ಅವನ ದಿಟ್ಟತನದ ಹಿಂದೆ ಅವನಿಗೊಂದು ಖಚಿತತೆ ಇದೆ. ಬ್ರಾಹ್ಮಣ ಗುರುಗಳಾದ ಸಾಮವೇದಿಗಳು ಆಕಾಶಗಾಮಿಗಳಾಗಿ ಹಾರಿಕೊಂಡು ಹೋಗುವಾಗ, ಕೆಳಗಡೆ ನಾಯಿಮಾಂಸದ ಅಡುಗೆಯನ್ನು ಮಾಡುತ್ತಿದ್ದ ಶ್ವಪಚಯ್ಯ, ಎಲ್ಲಿ ಅವರ ನೆರಳು ತಾನು ಮಾಡುವ ಅಡುಗೆಯ ಮೇಲೆ ಬಿದ್ದು ತನ್ನ ಅಡುಗೆ ಮೈಲಿಗೆಯಾಗುತ್ತೋ ಎಂದು ಹೆದರಿ ತಕ್ಷಣ ತನ್ನ ಚಪ್ಪಲಿಯಿಂದ ಅದನ್ನು ಮುಚ್ಚಿದನಂತೆ! ಹೀಗೆ ವರ್ಣಿಸುವ ಮೂಲಕ ಹರಿಹರ ಶುದ್ಧತೆ ಅಶುದ್ಧತೆಯನ್ನು ಮುರಿದು ಹಾಕುವ ಪರಿ ಅನನ್ಯ. ಹೀಗೆ ಕವಿಯೊಬ್ಬ ಕತೆ ಕಟ್ಟಲು ಶುರು ಮಾಡಿದ ನಂತರದ ಕನ್ನಡ ಸಾಹಿತ್ಯ ಚರಿತ್ರೆಯ ಪಥವೇ ಬದಲಾಗಿ ಹೋಯಿತು. ಮುಂದೆ ತತ್ವಪದಕಾರರು ಇನ್ನಷ್ಟು ವ್ಯಕ್ತಿನೆಲೆಯ ಫಿಲಾಸಾಫಿಕಲ್ ಆದ ಚಿಂತನೆಗಳನ್ನು ಮುನ್ನೆಲೆಗೆ ತಂದರು. ಸಣ್ತೆಮ್ಮಿ ಇವೆಲ್ಲದರ ಮುಂದುವರಿಕೆಯಾಗಿ ಕಾಣ್ತಾಳೆ. ಏನೂ ತಿಳಿದವಳು, ಏನೋ ಮಾತಾಡ್ತಾಳೆ ಎಂಬ 'ಉದಾರತೆ'ಯಲ್ಲಿ ನೋಡುಗರು ನೋಡುತ್ತಾ, ನೋಡುತ್ತಾ ಸರಿಯಾದ್ದನ್ನೇ ಹೇಳ್ತಿದ್ದಾಳಲ್ಲಾ ಎಂದು ಮೂಗಿನ ಮೇಲೆ ಬೆರಳಿಟ್ಟು ಯೋಚಿಸುವಂತೆ ಮಾಡ್ತಾಳೆ. ನಿಜ ಹೇಳಬೇಕೆಂದರೆ, ಆಳಿಸಿಕೊಳ್ಳುವವರ ಅಸಹಾಯಕತೆಗೆ ಹೆಗಲು ಕೊಡುತ್ತಾ ಹೋಗುವ ಸಣ್ತೆಮ್ಮಿ ಆಳುವವರ ಅವಿವೇಕಗಳನ್ನು ಅನಾವರಣ ಮಾಡತೊಡಗುತ್ತಾಳೆ. ಶತಮಾನಗಳ ಕಾಲ ಗಂಡಾಳ್ವಿಕೆಯು ಕಟ್ಟಿ ಬೆಳೆಸಿದ 'ಪೌರುಷ'ದ ಮಾದರಿಯನ್ನು ಆಕೆ "ಅಯ್ಯೋ ಸಿವ್ನೆ, ಈ ಗಂಡುಸ್ರು (ಮೀಸೆ ಮಣ್ಣಾತದೆ ಅಂತ) ಮೀಸೆ ಸಲ್ವಾಗಿ ಅದೇನ್ ಪಾಡ ಪಡ್ತರಲ್ಲ? ಜೀವಾನೆ ಪಣಕ್ಕೆ ವಡ್ತಾರಲ್ಲ ಏನನ್ನನ ಇದ್ಕೆ? ಅದ್ನೇನು ಇವ್ರು ನೀರು ಗೊಬ್ರ ಹಾಕಿ ಬೆಳ್ಸಿದ್ರೆ?" ಅಂತ ಬದಿಗೆ ಸರಿಸಿ ಬಿಡ್ತಾಳೆ. ಆ ಮೂಲಕ ಅವಳು ಜೀವನಾನುಭವ ಎಂಬ ತಿಳಿವಿನ ದೊಂದಿಯನ್ನು ಮುಂದಕ್ಕೆ ಒಡ್ಡುತ್ತಾಳೆ. ಆಕೆ ಹೇಳುತ್ತಾಳೆ : "ಎಂತ ಪಾಪನು ತೊಳುದ್ರೆ ವೋಗುತ್ತೆ", "ಕೇಡಿನ್ಮನೆ ಅಜ್ಞಾನ. ಅರ್ವಿದ್ರೆ ಅಜ್ಞಾನಿಲ್ಲ". ನಾಗರಿಕ ಜಗತ್ತು ಮತ್ತೆ ಮತ್ತೆ ಈ ಸಾಮಾನ್ಯರ, ಹೆಂಗಸರ ಜೀವನಾನುಭವವನ್ನು 'ತಿಳಿವು' ಅಂತ ಒಪ್ಪಿಕೊಳ್ಳುವುದನ್ನು ನಿರಾಕರಿಸುತ್ತಲೇ ಬಂದಿದೆ. ಅದು ತಿಳಿವನ್ನು ತಾನು ಮಾತ್ರ ನೀಡಬಲ್ಲೆ ಎಂಬ ಅಹಂಕಾರವನ್ನು ಪ್ರದರ್ಶಿಸುತ್ತಲೇ ಬಂದಿದೆ. ಸಣ್ತೆಮ್ಮಿ ಹುಟ್ಟಿಕೊಂಡಿರುವುದೇ ಈ ಅಹಂಕಾರದ ವಿರುದ್ಧ. ಸೌಂದರ್ಯ ಎಂದರೇನು ಎಂದು ನಿರೂಪಿಸುವ ಸೌಂದರ್ಯ ಸ್ಪರ್ಧೆಯ ಆಯೋಜಕರ, ಬೆಂಬಲಿಗರ, ಅದರ ವ್ಯಾಪಾರಿಗಳ ಠೇಂಕಾರದ ಎದುರಿಗೆ ಸಣ್ಣದನಿಯ ಸಣ್ತೆಮ್ಮಿ ಗಟ್ಟಿಯಾಗಿ ಎದ್ದು ನಿಲ್ತಾಳೆ ('ಆ ತಾಯಿ ಕೊಟ್ ಮೈನ ಅದೆಂಗೈತೊ ಅಂಗ್ ಇಟ್ಕಾಳದ್ ಬುಟ್ಟು…'). ಮುಂದೆ ಒಂದೊಂದೇ ಹೆಜ್ಜೆಯನ್ನು ದೃಢವಾಗಿ ಇಡುತ್ತಾ, ನೋಡುಗರಿಗೆ ಮುಖಾಮುಖಿಯಾಗುತ್ತಾ, ಬಿಚ್ಚಿಕೊಳ್ಳುತ್ತಾ, ತನ್ನೊಳಗನ್ನು ನೋಡಿಕೊಳ್ಳುತ್ತಾ, ಬೆಳೆಯುತ್ತಾ ಹೋಗುತ್ತಾಳೆ. "ಮೈಯೆಂಬ ಇಸ್ಮಯ ಲೋಕದ ಒಳಾ… ಗಡೇಲಿ ಮನಸೆಂಬೊ ಇಚಿತ್ರ ಕಗ್ಗತ್ತಲ ಗುಹೆ"ಯೊಳಗೆ ಅನ್ವೇಷಿಸುತ್ತಾ ನಡೆಯುವ ಸಣ್ತೆಮ್ಮಿ ನಿರ್ಲಕ್ಷಿತರ ನಿರ್ದಾಕ್ಷಿಣ್ಯ ಕಣ್ನೋಟ ಮಾತ್ರವಲ್ಲ, ಎಲ್ಲರೂ ನಿರ್ಲಕ್ಷಿಸುತ್ತಿರುವ ಮತ್ತು ಆ ಕಾರಣಕ್ಕೆ ನರಳುತ್ತಿರುವುದನ್ನು ತೆರೆದ ಕಣ್ಣಿನಿಂದ ನೋಡಲು ಪ್ರೇರೇಪಿಸುತ್ತಿರುವವಳು ಕೂಡ ಹೌದು. ಅದು 'ಪ್ರೀತಿಯ ಶತ್ರುವೇ ಅಧಿಕಾರದ ಆವಾಹನೆ' ಎಂಬ ಒಂದು ಸಾಲಿನ ತಿಳುವಳಿಕೆ. ನಾವು ಇನ್ನೊಬ್ಬರನ್ನು ಸಹಿಸಲು, ಸಲಹಲು, ಪ್ರೀತಿಸಲು ಅಡ್ಡಿ ಮಾಡುತ್ತಿರುವುದು ನಾವು ಅವರ ಮೇಲೆ ಯಾವುದೋ ಒಂದು ರೀತಿಯಲ್ಲಿ ಯಜಮಾನಿಕೆ ಮಾಡಲು ಪ್ರಯತ್ನಿಸುವುದರಿಂದಲೇ ಆಗಿದೆ. ಅದು ಕಾಳಜಿಯ ಹೆಸರಿನಲ್ಲೋ, ಪ್ರೀತಿಯ ಹೆಸರಿನಲ್ಲೋ ನಡೆಯುತ್ತಿರುತ್ತದೆ. ಇದನ್ನು ಸರಸ್ವತಿಯವರ 'ಲವ್ ಪುರಾಣ', 'ಬುದ್ಧ ಪುರಾಣ'ಗಳು ಫಿಲಾಸಾಫಿಕಲ್ ಆಗಿ ಹೇಳುತ್ತವೆ. 'ರಾಮಾಯ್ಣ' ಸೀತೆಯೊಂದಿಗೆ ಅಹಲ್ಯೆ, ಶೂರ್ಪಣಖಿಯರನ್ನೂ ಮುಟ್ಟಿ ಮಾತಾಡಿಸುತ್ತದೆ. ರಾಮಾಯಣದ ಕೊನೆ ಯುದ್ಧವಾಗದೆ ಜನರೆಲ್ಲರ ಮನ, ಮನೆ ಗೆಲ್ಲುವುದೇ ಗುರಿಯಾಗಬೇಕೆಂಬ ಆಸೆಯನ್ನು ಹುಟ್ಟುಹಾಕುತ್ತದೆ. ಇದಲ್ಲದೆ, 'ದನಿನ್ ಚಮ್ಡುದ್ ಮೆಟ್ಕಂಡ್ರೆ ಗ್ವಾಮಾತೆ ತುಳ್ದಂಗಲ್ವಾ?', 'ಸತ್ಯ ಉಡ್ಕದೂಂದ್ರೆ' ಎಂಬ ಪ್ರಸ್ತುತ ಸಂಗತಿಗಳಿಗೆ ಪ್ರತಿಕ್ರಿಯೆ ರೂಪದ ನಾಟಕಗಳೂ ಇಲ್ಲಿವೆ. ಈ ಸಂಕಲನ ಪ್ರಕಟವಾದ ನಂತರದಲ್ಲಿ ಅವರು ಪಕ್ಷಿಗಳನ್ನು ರೂಪಕವಾಗಿಸಿಕೊಂಡು ಇನ್ನೊಂದು ಪುರಾಣವನ್ನೂ ಅಭಿನಯಿಸಿದ್ದಾರೆ. ಸರಸ್ವತಿ ಈ ಪುರಾಣಗಳನ್ನು ತನ್ನದೇ ಒಂದು ನುಡಿಗಟ್ಟನ್ನಾಗಿ ಬೆಳೆಸಿಕೊಳ್ಳುತ್ತಿದ್ದಾರೆ. ಹೀಗೆ ಮಾಡಿಕೊಳ್ಳುವುದು ತನಗೇ ಅನಿವಾರ್ಯವೇನೋ ಎಂಬ ತಾದಾತ್ಮ್ಯ ಅವರಲ್ಲಿದೆ. ತನ್ನೊಳಗೆ ಮತ್ತು ಲೋಕದ ಜೊತೆಗೆ ಸಂವಾದ ಮಾಡಿಕೊಳ್ಳುವ ದಾರಿಯಾಗಿ ಅವರ ಸಣ್ತೆಮ್ಮಿ ಇದ್ದಾಳೆ. ನಾಟಕ ಮತ್ತು ಏಕವ್ಯಕ್ತಿ ನಾಟಕದಲ್ಲಿ ಕನ್ನಡ ರಂಗಭೂಮಿಗೆ ಇಂತಹ ಪ್ರಯೋಗಗಳು ಸದಾ ಬೇಕಿದೆ. ಸರಸ್ವತಿಯವರ ಈ ಪ್ರಯೋಗದ ವೈಶಿಷ್ಟ್ಯವೆಂದರೆ ಅವರು ತಾನು ಹೇಳಬೇಕಿರುವುದನ್ನು ಆಡಂಬರವಿಲ್ಲದೆ, ಭಾರವಿಲ್ಲದೆ ಹೇಳುತ್ತಾರೆ. ಕನ್ನಡದ ಆಡುಮಾತಿನ ಲಾಸ್ಯದಲ್ಲಿ ಇದನ್ನು ಹೇಳುತ್ತಾ ಹೋಗುವಲ್ಲಿ ಹೇಳುವವರೂ ಕೇಳುವವರೂ ಹಗುರಾಗುವ ಭಾವವೊಂದು ಅಡಗಿದೆ.


**ಡಾ॥ ಸಬಿತಾ ಬನ್ನಾಡಿ**
ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ತರೀಕೆರೆ – ೫೭೭ ೨೨೮, ಚಿಕ್ಕಮಗಳೂರು ಜಿಲ್ಲೆ

# ಆರೋಗ್ಯ ಕರ್ನಾಟಕ

## (ಸಾರ್ವತ್ರಿಕ ಆರೋಗ್ಯದ ವಿಸ್ತರಣೆ)



**ಕ**ರ್ನಾಟಕ ಸರ್ಕಾರ ಇತ್ತೀಚೆಗೆ ಘೋಷಿಸಿದ ಆರೋಗ್ಯ ನೀತಿಯನ್ನು ಆರೋಗ್ಯ ಕರ್ನಾಟಕ ಎಂದು ಕರೆಯಲಾಗಿದೆ. ಇದು ಸಾರ್ವತ್ರಿಕ ಆರೋಗ್ಯ ವಿಸ್ತರಣೆಯ ಮಾದರಿಯ ಆರೋಗ್ಯ ನೀತಿಯಾಗಿದೆ. ಈ ನೀತಿ ಈಗಾಗಲೇ ಅನೇಕ ದೇಶಗಳಲ್ಲಿ ಜಾರಿಗೆ ಬಂದಿದೆ. ಉದಾಹರಣೆ : ನಾರ್ವೆ, ಥಾಯ್‌ಲೆಂಡ್, ನ್ಯೂಜಿಲೆಂಡ್, ಜಪಾನ್, ಜರ್ಮನಿ ಮತ್ತಿತರ ದೇಶಗಳೂ ಈ ನೀತಿಯನ್ನು ಜಾರಿಗೆ ತರಲು ತಯಾರಿ ನಡೆಸಿವೆ. ಭಾರತದಲ್ಲಿ ಈ ನೀತಿಯನ್ನು ಜಾರಿಗೆ ತರಲು ಹೊರಟಿರುವ ಮೊದಲನೆಯ ರಾಜ್ಯ ಕರ್ನಾಟಕ.

**ಕರ್ನಾಟಕದ ಆರೋಗ್ಯ – ಸ್ಥಿತಿಗತಿ**

ಇತರೆ ರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕದಲ್ಲಿ ಆರೋಗ್ಯ ಸ್ಥಿತಿ ಉತ್ತಮವಾಗಿದೆ. ಆ ದಿಶೆಯಲ್ಲಿ ಇಲ್ಲಿ ಕೆಲವು ಮುಖ್ಯ ಅಂಕಿ ಅಂಶಗಳನ್ನು ನೀಡಲಾಗಿದೆ :

ಶಿಶು ಮರಣ ಸಂಖ್ಯೆ ೨೪/೧೦೦೦ (ಜೀವಂತ ಹುಟ್ಟುಗಳಿಗೆ) ಇದು ಇತರೆ ರಾಜ್ಯಗಳಲ್ಲಿದ್ದಷ್ಟೇ (ಕೇರಳ, ದೆಹಲಿ, ಮಹಾರಾಷ್ಟ್ರ, ಪಂಜಾಬ್, ತಮಿಳುನಾಡು) ಇದೆ.

ಕರ್ನಾಟಕ ಆರೋಗ್ಯ ಸ್ಥಿತಿ ಉತ್ತಮವಾಗಿರಲು, ೨೦೦೪ರಲ್ಲಿಯೇ ಕರ್ನಾಟಕದಲ್ಲಿ ಮೊದಲ ಆರೋಗ್ಯ ನೀತಿ ಜಾರಿಗೆ ಬಂದಿತ್ತು. ನಂತರ ಆ ನೀತಿಯನ್ನು ೨೦೧೭ರಲ್ಲಿ ಹೆಸರು ಬದಲಿಸಿ 'ಕರ್ನಾಟಕ ಇಂಟಗ್ರೇಟೆಡ್ ಹೆಲ್ತ್ ಪಾಲಿಸಿ' ಎಂದು ಕರೆಯಲಾಯಿತು.

ಕರ್ನಾಟಕದಲ್ಲಿ ಕರ್ನಾಟಕ ಮೆಡಿಕಲ್ ಎಸ್ಟಾಬ್ಲಿಷ್ಮೆಂಟ್ ಆ್ಯಕ್ಟ್ ೨೦೦೭ (Karnataka Medical Establishment Act ೨೦೦೭)ಅನ್ನು ತಿದ್ದುಪಡಿ ಮಾಡಿ ೨೦೧೮ರಲ್ಲಿ ಪುನಃ ಜಾರಿ ಮಾಡಲಾಗಿದೆ. ೨೦೧೦ರಲ್ಲಿ ಕರ್ನಾಟಕ ಕ್ಲಿನಿಕಲ್ ಎಷ್ಟಾಬ್ಲಿಷ್ಮೆಂಟ್ ಆ್ಯಕ್ಟ್ (Karnataka Clinical Establishment Act) ಜಾರಿಯಾಗಿ ಈಗ ಬಳಕೆಯಲ್ಲಿದೆ.

ಇದಲ್ಲದೆ ಸರಕಾರಿ ವಿಮಾ ಯೋಜನೆಯಾದ 'ಯಶಸ್ವಿನಿ ಯೋಜನೆ'ಯನ್ನು ೨೦೦೨ರಲ್ಲಿ ಹಾಗೂ 'ವಾಜಪೇಯಿ ಆರೋಗ್ಯ ಶ್ರೀ ಯೋಜನೆ'ಯನ್ನು ೨೦೧೦ರಲ್ಲಿ ಜಾರಿಗೊಳಿಸಲಾಗಿತ್ತು.

ಆದರೆ ಈಗ ೨೦೧೮ರಲ್ಲಿ ಒಂದು ಸಮಗ್ರ ಆರೋಗ್ಯ ಯೋಜನೆ ಜಾರಿಗೆ ಬಂದಿದೆ.

**ಆರೋಗ್ಯ ಕರ್ನಾಟಕದ ಉದ್ದೇಶವೇನು?**

೧) ಜನರ ಆರೋಗ್ಯ ಸುಧಾರಣೆಗೆ ತಾಂತ್ರಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ, ಕಾನೂನಾತ್ಮಕವಾಗಿ ಸದೃಢವಾಗಿರುವ ವ್ಯವಸ್ಥೆಯನ್ನು ರೂಪಿಸಿ, ಅದು ಈ ಯೋಜನೆಗೆ ಮಾರ್ಗದರ್ಶನ ಹಾಗೂ ಸಲಹೆ ನೀಡುವಂತೆ ರೂಪಿಸುವುದು.

೨) ಈ ಯೋಜನೆಯಲ್ಲಿ ಎಲ್ಲರಿಗೂ ಆರೋಗ್ಯ ಸೌಲಭ್ಯ ದೊರೆಯುವಂತೆ ಮಾಡುವುದು. ಅವರ ಆರ್ಥಿಕ ಪರಿಸ್ಥಿತಿ ಏನೇ ಇದ್ದರೂ ಅವರಿಗೆ ಆರೋಗ್ಯ ಸೌಲಭ್ಯ ನಿರಾಕರಣೆಯಾಗದಂತೆ ಮಾಡುವುದು.

೩) ಈ ವ್ಯವಸ್ಥೆಯಲ್ಲಿ ಪ್ರಾಥಮಿಕ, ದ್ವಿತೀಯ, ತೃತೀಯ ಆರೋಗ್ಯ ಸೇವೆಗಳು ದೊರಕುವಂತೆ ಮಾಡುವುದು. ಆರೋಗ್ಯ ಕೇಂದ್ರಗಳಲ್ಲಿ ಎಲ್ಲಾ ಸೇವೆಗಳು ದೊರಕಿಸಿಕೊಡುವುದಲ್ಲದೆ, ಕೆಲವು ಆಯ್ದ ಆಸ್ಪತ್ರೆಗಳಲ್ಲಿ ದ್ವಿತೀಯ ಹಾಗೂ ತೃತೀಯ ಆರೋಗ್ಯ ಸೇವೆಗಳು ದೊರಕುವಂತೆ ಮಾಡುವುದು.

೪) ಬಡತನ ರೇಖೆಯ ಕೆಳಗಿರುವವರಿಗೆ ಸಂಪೂರ್ಣ ಉಚಿತ ಆರೋಗ್ಯ ಸೇವೆಗಳನ್ನು ನೀಡುವುದು. ಬಡತನ ರೇಖೆಯ ಮೇಲಿರುವವರಿಗೆ ಸರಕಾರ ಈ ಯೋಜನೆಯಲ್ಲಿ ಕೇವಲ ೩೦% ಹಣ ಸಹಾಯ ನೀಡುತ್ತದೆ, ಹಾಗೂ ೭೦% ಹಣವನ್ನು ರೋಗಿಯೇ ಭರಿಸಬೇಕಾಗುತ್ತದೆ.

ಈ ಯೋಜನೆಯನ್ನು ಮಾರ್ಚ್ ೨೦೧೮ರಲ್ಲಿ ಜಾರಿಗೆ ತರಲಾಗಿದೆ ಹಾಗೂ ಇದರ ಜವಾಬ್ದಾರಿ ಕರ್ನಾಟಕದ ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಇಲಾಖೆಗೆ ಇರುತ್ತದೆ.

**ಈ ಯೋಜನೆ ಹೇಗೆ ಜಾರಿಗೆ ಬರುತ್ತದೆ?**

ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ (Suvarna Arogya Suraksha Trust) ಆರೋಗ್ಯ ಹಾಗೂ ಕುಟುಂಬ ಯೋಜನೆ ಕಮಿಷನರ್ ಹಾಗೂ ಆರೋಗ್ಯ ಶಿಕ್ಷಣ ನಿರ್ದೇಶಕರಿಗೆ ಈ ಯೋಜನೆಯನ್ನು ಜಾರಿಗೊಳಿಸಲು ಎಲ್ಲ ತರಹದ ಸಹಾಯವನ್ನು ನೀಡಲಿದೆ.

**ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಜವಾಬ್ದಾರಿಗಳು**

೧. ಈ ಯೋಜನೆಯ ಕಂಪ್ಯೂಟರೀಕರಣದ ಜವಾಬ್ದಾರಿ ನಿರ್ವಹಿಸುವುದು.
೨. ಹಣಕಾಸಿನ ನಿರ್ವಹಣೆ.
೩. ಕೇಂದ್ರ ಸರ್ಕಾರದಿಂದ ಆರ್.ಎಸ್.ಬಿ.ವಾಯ್‌ಗೆ ಹಣಕಾಸನ್ನು ಪಡೆದು ಒದಗಿಸುವುದು.
೪. ಪ್ರಾಥಮಿಕ ಆರೋಗ್ಯ ಸಂಸ್ಥೆ ಹಾಗೂ ಖಾಸಗಿ ಆಸ್ಪತ್ರೆಗಳನ್ನು ಸಬಲೀಕರಣಗೊಳಿಸುವುದು.
೫. ಪ್ರಾಥಮಿಕ ಆರೋಗ್ಯ ಸಂಸ್ಥೆ ಹಾಗೂ ಖಾಸಗಿ ನೋಂದಾಯಿತ ಆಸ್ಪತ್ರೆಗೆ ಹಣ ನೀಡುವುದು.
೬. ತಜ್ಞರ ಸಮಿತಿಗೆ ಅಗತ್ಯ ಸಹಾಯ ನೀಡುವುದು.
೭. ಖಾಸಗಿ (ನೋಂದಣಿಗೊಳ್ಳುವ) ಆಸ್ಪತ್ರೆಗಳಿಗೆ ಕಾರ್ಯರೂಪಕ್ಕೆ ಬರಲು ಮಾರ್ಗದರ್ಶನ ರೂಪಿಸುವುದು.
೮. ಆಸ್ಪತ್ರೆಗಳಿಗೆ ರೋಗಿಯನ್ನು ಕಳುಹಿಸಲು ಮಾರ್ಗದರ್ಶನ ಪಟ್ಟಿ ತಯಾರಿಸುವುದು.
೯. ವೈದ್ಯಕೀಯ ಆಡಿಟ್ ನೀತಿಗಳನ್ನು ರೂಪುಗೊಳಿಸುವುದು.

ಪ್ರಾಥಮಿಕ ಆರೋಗ್ಯ ಸಂಸ್ಥೆಗಳ ಆರೋಗ್ಯ ನಿರ್ವಹಣೆ ಆರೋಗ್ಯ ಹಾಗೂ ಕುಟುಂಬ ಕಲ್ಯಾಣದ ಕಮೀಷನರ್ ಜವಾಬ್ದಾರಿ. ವೈದ್ಯಕೀಯ ಶಿಕ್ಷಣ ಇಲಾಖೆಯ ಪ್ರಾಥಮಿಕ ಆರೋಗ್ಯ ಸಂಸ್ಥೆಗಳನ್ನು ನಿರ್ವಹಿಸುವ ಜವಾಬ್ದಾರಿ ವೈದ್ಯಕೀಯ ಶಿಕ್ಷಣ ಇಲಾಖೆಯ ನಿರ್ದೇಶಕರದ್ದು.

**ಹಣಕಾಸು**

ಕರ್ನಾಟಕದ ಮುಂಗಡ ಪತ್ರದಲ್ಲಿ ಮಂಜೂರು ಮಾಡಿದ ಹಣಕಾಸನ್ನು ಈ ಯೋಜನೆಗೆ ಬಳಸಲಾಗುವುದು.

**ಗುರಿ**

೧. ಕರ್ನಾಟಕದ ೧.೪ ಕೋಟಿ ಜನಸಂಖ್ಯೆಗೆ ಎಲ್ಲರಿಗೂ ಆರೋಗ್ಯ ವ್ಯವಸ್ಥೆಯನ್ನು ಜಾರಿ ಮಾಡುವುದು.
೨. ಬಿಪಿಎಲ್ ಕಾರ್ಡ್ ಹೊಂದಿದವರಿಗೆ ಉಚಿತ ಸೇವೆಗಳು.
೩. ಎಪಿಎಲ್ ಕಾರ್ಡ್ ಹೊಂದಿದವರಿಗೆ ಸರಕಾರ ೩೦% ಹಣಕಾಸಿನ ವೆಚ್ಚವನ್ನು ಭರಿಸುವುದು.

**ಡಾ|| ಪ್ರಕಾಶ್ ಸಿ. ರಾವ್**

೪. ಚಿಕಿತ್ಸೆ ಆ ಸಂಸ್ಥೆಯಲ್ಲಿ ಇಲ್ಲದಿದ್ದಲ್ಲಿ ಎಲ್ಲ ಸರಕಾರಿ ಆಸ್ಪತ್ರೆಗಳು, ಪ್ರಾಥಮಿಕ ಆರೋಗ್ಯ ಸಂಸ್ಥೆಗಳು ತಮ್ಮ ರೋಗಿಗಳನ್ನು ನೋಂದಣಿ ಹೊಂದಿದ ಖಾಸಗೀ ಆಸ್ಪತ್ರೆಗಳಿಗೆ ಕಳುಹಿಸಬಹುದು.

**ಯಾರು ಈ ಸೌಲಭ್ಯಗಳನ್ನು ಪಡೆದುಕೊಳ್ಳಬಹುದು?**

೧. ಯಾವುದೇ ವಯಸ್ಸಿನ ಕರ್ನಾಟಕದ ಎಲ್ಲ ನಿವಾಸಿಗಳು ಸೌಲಭ್ಯಗಳನ್ನು ಪಡೆಯಬಹುದು. (ಬಿಪಿಎಲ್, ಎಪಿಎಲ್ ಕಾರ್ಡ್ ಹೊಂದಿದವರು ಕೂಡ).

೨. ನೋಂದಣಿ ಮಾಡಿದ ವ್ಯಕ್ತಿಗೆ ಆರೋಗ್ಯ ಕಾರ್ಡ್‌ಅನ್ನು ನೀಡಲಾಗುವುದು.

'ಆರೋಗ್ಯ ಕರ್ನಾಟಕ' ಯೋಜನೆಯಲ್ಲಿ ಮೊದಲಿದ್ದ ಎಲ್ಲ ಆರೋಗ್ಯ ಯೋಜನೆಗಳನ್ನು ಸೇರಿಸಿಕೊಳ್ಳಲಾಗಿದೆ. ಆ ಯೋಜನೆಗಳು ಈ ರೀತಿ ಇವೆ :

೧. ಯಶಸ್ವಿನಿ ಯೋಜನೆ
೨. ವಾಜಪೇಯಿ
೩. ರಾಜೀವ್ ಆರೋಗ್ಯ ಭಾಗ್ಯ
೪. ರಾಷ್ಟ್ರೀಯ ಸ್ವಾಸ್ಥ್ಯ ಬಿಮಾ ಯೋಜನೆ (RSBY)
೫. ರಾಷ್ಟ್ರೀಯ ಬಾಲ ಸ್ವಾಸ್ಥ್ಯ ಕಾರ್ಯಕ್ರಮ
೬. ಮುಖ್ಯಮಂತ್ರಿ ಸ್ವಾಸ್ಥ್ಯ ಹರೀಶ ಯೋಜನೆ
೭. ಇಂದಿರಾ ಸುರಕ್ಷಾ ಯೋಜನೆ

**ರೋಗಿಗಳನ್ನು ದಾಖಲಾತಿ ಮಾಡುವುದು**

ಈ ವ್ಯವಸ್ಥೆ ಪಡೆಯಲು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನಲ್ಲಿ ಒಮ್ಮೆ ದಾಖಲಾತಿ ಮಾಡಿಸಿಕೊಳ್ಳಬೇಕು.

ತುರ್ತು ಆರೋಗ್ಯ ಪರಿಸ್ಥಿತಿ ಇದ್ದರೆ ಖಾಸಗಿ ಆಸ್ಪತ್ರೆಯಲ್ಲೂ ದಾಖಲಾತಿ ಮಾಡಿಸಿಕೊಳ್ಳಬಹುದು. ದಾಖಲಾತಿಗೆ ಆಧಾರ್ ಕಾರ್ಡ್ ಹಾಗೂ ಪಿಡಿಎಸ್ ಕಾರ್ಡ್ (ರೇಷನ್ ಕಾರ್ಡ್) ಬೇಕಾಗುತ್ತದೆ. ನಂತರ ಆರೋಗ್ಯ ಕರ್ನಾಟಕ ಕಾರ್ಡ್‌ಅನ್ನು ನೀಡಲಾಗುವುದು. ಆ ಕಾರ್ಡ್ ಕಳೆದುಹೋದಲ್ಲಿ ನಕಲಿ ಕಾರ್ಡ್‌ಗೆ ೨೦ ರೂ. ತೆಗೆದುಕೊಳ್ಳಲಾಗುವುದು. ಚಿಕಿತ್ಸೆಯ ವೆಚ್ಚವನ್ನು ಸರಕಾರ ಭರಿಸುತ್ತದೆ.

**ಚಿಕಿತ್ಸಾ ವೆಚ್ಚಗಳು**

ದ್ವಿತೀಯ ಆರೋಗ್ಯ ಸೇವೆಗಳಿಗೆ ರೂ. ೩೦,೦೦೦.೦೦ಗಳನ್ನು ೫ ಜನರ ಒಂದು ಕುಟುಂಬಕ್ಕೆ ನೀಡಲಾಗುವುದು.

ತೃತೀಯ ಆರೋಗ್ಯ ಸೇವೆಗಳು ರೂ. ೩೦,೦೦೦ ರೂ.ಗಳು ಅದನ್ನು ಅಗತ್ಯಬಿದ್ದರೆ ರೂ. ೧,೫೦೦,೦೦ ರೂ.ಗಳಿಗೆ ಹೆಚ್ಚಿಸಲಾಗುವುದು.

ದ್ವಿತೀಯ ಆರೋಗ್ಯ ಚಿಕಿತ್ಸೆಗಳ ನಂತರವೂ ವ್ಯಕ್ತಿ ಗುಣ ಹೊಂದದಿದ್ದರೆ ವಿಶೇಷ ಸೇವೆಗಳಿರುವ ಆಸ್ಪತ್ರೆಗಳಿಗೆ ಕಳಿಸಲಾಗುವುದು.

ಈ ನೋಂದಣಿ ಹೊಂದಿದ ಆಸ್ಪತ್ರೆಗಳಿಗೆ ಸುವರ್ಣ ಟ್ರಸ್ಟ್ ಚಿಕಿತ್ಸಾ ವೆಚ್ಚವನ್ನು ನೀಡಲಾಗುವುದು. ಆದರೆ ಈ ಆಸ್ಪತ್ರೆಗಳು ನಿಗದಿತ ವೆಚ್ಚಕ್ಕಿಂತ ಹೆಚ್ಚು ಹಣವನ್ನು ರೋಗಿಯಿಂದ ಪಡೆಯುವಂತಿಲ್ಲ. ಆದರೆ ನೋಂದಣಿ ಹೊಂದಲಾರದ ವ್ಯಕ್ತಿ ಕೂಡ ಚಿಕಿತ್ಸೆ ಪಡೆಯಬಹುದು. ಆದರೆ ಸರಕಾರ ಕೇವಲ ೩೦% ಹಣವನ್ನು ನೀಡುತ್ತದೆ. ಬಾಕಿ ೭೦% ಹಣವನ್ನು ರೋಗಿಯೇ ಭರಿಸಬೇಕಾಗುತ್ತದೆ.

**ರೋಗಿಯನ್ನು ಆಸ್ಪತ್ರೆಗೆ ಕಳುಹಿಸುವುದರ ಬಗ್ಗೆ**

ಯಾವ ಆಸ್ಪತ್ರೆಗೆ ಹೋಗಬೇಕೆಂಬುದನ್ನು ರೋಗಿಯೇ ಪಟ್ಟಿಯಿಂದ ಆಯ್ಕೆಮಾಡಿಕೊಳ್ಳಬಹುದು. ಪ್ರಾಥಮಿಕ ಆರೋಗ್ಯ ಸಂಸ್ಥೆಯನ್ನು ಆರೋಗ್ಯ ಹಾಗೂ ಕುಟುಂಬ ಕಲ್ಯಾಣದ ಕಮಿಷನರ್ ಜವಾಬ್ದಾರಿ ತೆಗೆದುಕೊಳ್ಳುವುದು.





**ಪ್ರಾಥಮಿಕ ಆರೋಗ್ಯ ಸೇವೆಗಳು :** ಪ್ರಾಥಮಿಕ ಆರೋಗ್ಯ ಸೇವೆಗಳನ್ನು ಪ್ರಾಥಮಿಕ ಆರೋಗ್ಯ ಸಂಸ್ಥೆಗಳಲ್ಲಿ ನೀಡಲಾಗುವುದು.

ವೈದ್ಯಕೀಯೇತರ ಸಿಬ್ಬಂದಿ ಹಾಗೂ ಆಶಾ ಕಾರ್ಯಕರ್ತರನ್ನು ರೋಗಿ ಮನೆಗೆ ಕಳುಹಿಸಿ ಮಹಿಳೆಯ ಆರೋಗ್ಯ ಸುಧಾರಿಸಲು ಪ್ರಯತ್ನ ಮಾಡಲಾಗುವುದು.

**ಚರ್ಚೆ**

ಆರೋಗ್ಯ ಕರ್ನಾಟಕ ಹೊಸ ಆರೋಗ್ಯ ವ್ಯವಸ್ಥೆಯಾಗಿ ಜಾರಿ ಬಂದರೂ, ಇದರಲ್ಲಿ ವಿಶೇಷ ಸೌಲಭ್ಯಗಳೇನೂ ಇಲ್ಲ, ಇದಕ್ಕೆ ಕಾರಣ ಸರಕಾರ ಈ ವ್ಯವಸ್ಥೆಗೆ ಹೆಚ್ಚಿನ ಹಣಕಾಸಿನ ನೆರವನ್ನು ನೀಡಿಲ್ಲ ಎಂದು ಬ್ರೂಕಿಂಗ್ಸ್ ಇಂಡಿಯಾ ಸಂಶೋಧನೆಯಿಂದ ತಿಳಿದುಬಂದಿದೆ.

| | | | |
|---|---|---|---|
| ಕರ್ನಾಟಕ | ರೂ. ೭೯೧.೦೦ | ತಮಿಳುನಾಡು | ರೂ. ೮೪೯.೦೦ |
| ಆಂಧ್ರಪ್ರದೇಶ | ರೂ. ೧೦೨೨.೦೦ | ಕೇರಳ | ರೂ.೧೦೭೦.೦೦ |

ಮೊದಲು ಹಲವಾರು ವಿಮಾ ಯೋಜನೆಗಳು ಜಾರಿಯಲ್ಲಿದ್ದವು. ೨೦೧೪ರಲ್ಲಿ ನ್ಯಾಷನಲ್ ಸ್ಯಾಂಪಲ್ ಸರ್ವೇಯ ಪ್ರಕಾರ ರಾಜ್ಯದ ಕೇವಲ ೧೦.೫% ಜನರು ಮಾತ್ರ ಈ ವಿಮಾ ಯೋಜನೆಯಡಿ ಬರುತ್ತಿದ್ದರು. ಆದರೆ ರಾಜ್ಯದಲ್ಲಿ ಜನರು ಆರೋಗ್ಯದ ಮೇಲೆ ಮಾಡುತ್ತಿರುವ ಖರ್ಚು ೭೪.೯%. ಅದು ಮೊದಲಿನಂತೆಯೇ ಮುಂದುವರಿಯುವಂತಿದೆ.

ಈ ಯೋಜನೆ ಪ್ರಾಥಮಿಕ ಆರೋಗ್ಯ ವ್ಯವಸ್ಥೆಯನ್ನು ಕಡೆಗಣಿಸಿದೆ, ಹಿರಿಯ ನಾಗರಿಕರ ಆರೋಗ್ಯವನ್ನು ಕಡೆಗಣಿಸಿದೆ.

ಅಗತ್ಯ ಔಷಧಿಗಳು, ಆರೋಗ್ಯ ಶಿಕ್ಷಣ, ವೈದ್ಯರಿಗೆ ಮುಂದುವರಿದ ವೈದ್ಯಕೀಯ ಶಿಕ್ಷಣ, ರೋಗ ತಡೆಗಟ್ಟುವಿಕೆ ಮುಂತಾದ ಸೌಲಭ್ಯಗಳನ್ನು ಕಡೆಗಣಿಸಿದೆ.

ಆರೋಗ್ಯ ಕರ್ನಾಟಕ ಜಾರಿಗೆ ಬಂದು, ಜನರು ಅದರ ಲಾಭ ಪಡೆಯುವ ತನಕ, ಅದರ ಬಗ್ಗೆ ಹೆಚ್ಚಿನ ವಿವರ ದೊರಕದು. ಕಾದು ನೋಡೋಣ. ಅದು ಜನರಿಗೆ ಪ್ರಯೋಜಕವೇ ಎಂದು.

ಭಾರತದಲ್ಲಿ ಆರೋಗ್ಯ ಮೂಲಭೂತ ಹಕ್ಕಾಗಿಲ್ಲ. ಆರೋಗ್ಯ ಕ್ಷೇತ್ರ ತಳಹದಿ ಗಟ್ಟಿಮಾಡಲು ಭೋರ್ ಸಮಿತಿ, ಆಲ್ಮಅಟಾ ಘೋಷಣೆ, ಹಾಥೀ ಸಮಿತಿ ವರದಿ ಆಧಾರದ ಮೇಲೆ ಎಲ್ಲ ಸಲಹೆಗಳನ್ನು ಗಮನಿಸದಿದ್ದರೂ ಕೆಲವು ಆದೇಶಗಳನ್ನು ಒಪ್ಪಿಕೊಂಡು ಆರೋಗ್ಯ ನೀತಿಗಳನ್ನು ರೂಪಿಸುತ್ತ ಬಂದಿವೆ.

**ಆದರೆ ಈ ವ್ಯವಸ್ಥೆಯಿಂದ**

- ಪ್ರಾಥಮಿಕ ಆರೋಗ್ಯ ವ್ಯವಸ್ಥೆಗೆ ಧಕ್ಕೆಯಾಗಿರಲು ಸಾಧ್ಯತೆ ಇದೆ.
- ಇದು ಖಾಸಗೀಕರಣಗೊಳ್ಳದಂತೆ ಜವಾಬ್ದಾರಿ ವಹಿಸಬೇಕು.
- ಇದು ಸಂಪೂರ್ಣ ಉಚಿತ ಆರೋಗ್ಯ ವ್ಯವಸ್ಥೆಯಾಗಬೇಕು, ಕೊಂಡುಕೊಳ್ಳಲು ಸಾಧ್ಯವಾಗುವ ವ್ಯವಸ್ಥೆಯಾಗಬೇಕು.
- ಈ ಕಾರ್ಯಕ್ರಮದ ಮಾರ್ಗದರ್ಶನ ಮಾಡುವವರ ಬಗ್ಗೆ ಅಸಮಾಧಾನ ವ್ಯಕ್ತವಾಗಿದೆ. ಸರಕಾರ ಇದೆಲ್ಲವನ್ನು ಗಮನಿಸಿ, ಇದೊಂದು ಜನಪರ ಕಾರ್ಯಕ್ರಮವಾಗುವಂತೆ ಮಾಡಲು ಸಾಧ್ಯ ಎಂದು ಆಶಿಸೋಣ.

**ಡಾ|| ಪ್ರಕಾಶ್ ಸಿ. ರಾವ್**
ಅಪರ್ಣ ಕ್ಲಿನಿಕ್, ನಂ. ೧೧೯೪, ೧ನೇ ಮುಖ್ಯರಸ್ತೆ, ಕೆ. ಎನ್. ಎಕ್ಸ್‌ಟೆನ್ಷನ್
ಯಶವಂತಪುರ, ಬೆಂಗಳೂರು – ೫೬೦ ೦೨೨

ಒಂದು ಧರ್ಮ ಇನ್ನೊಂದು ಧರ್ಮದ ನಡುವೆ ಹೇಗೆ ಸಹಬಾಳ್ವೆ ನಡೆಸಬೇಕೆಂಬ ಮಾರ್ಗವನ್ನು ತೋರಿಸಿಕೊಟ್ಟರು ತೋಂಟದಾರ್ಯ ಸ್ವಾಮೀಜಿ. ಗದುಗಿನ ಮಠದ ಜಾತ್ರಾಮಹೋತ್ಸವ ಸಂದರ್ಭದಲ್ಲಿ ಸ್ವಜಾತಿಯವರನ್ನೇ ಮಹೋತ್ಸವದ ಮುಖ್ಯಸ್ಥನನ್ನಾಗಿ ಮಾಡಬೇಕು ಎನ್ನುವ ನೀತಿ ಮುರಿದು ಅನ್ಯಜಾತಿಯ, ಹಿಂದುಳಿದ ವರ್ಗದ, ಅನ್ಯಧರ್ಮದ ವ್ಯಕ್ತಿಗಳಿಗೆ ಅಂಥ ಸ್ಥಾನ ನೀಡಿ ಜಾತ್ಯತೀತತೆಗೆ ಒಂದು ಅರ್ಥಕೊಟ್ಟರು.

# ಜನಪರ ಜಂಗಮನ ನಿರ್ಗಮನ

## ಶ್ರೀಸುಮಿತ್ರಾಸುತ ಅಗಸಬಾಳ

**ಮ**ನುಷ್ಯನ ಹೆಗಲ ಮೇಲೆ ಇನ್ನೊಬ್ಬ ಮನುಷ್ಯ ಕುಳಿತು ಮೆರೆಯುವ, ಸಂಭ್ರಮಿಸುವ ಅಡ್ಡಪಲ್ಲಕ್ಕಿಯನ್ನು ಧಿಕ್ಕರಿಸಿ, ಪಾದೋದಕ ಎಂಬ ಅವೈಜ್ಞಾನಿಕ, ಅನಾರೋಗ್ಯಕರ ಪದ್ಧತಿಯನ್ನು ವಿರೋಧಿಸಿ, ಮೌಢ್ಯದ ಕೇಂದ್ರಗಳಾದ ಮಠೀಯ ವ್ಯವಸ್ಥೆಯಲ್ಲಿದ್ದುಕೊಂಡೇ ಮೌಢ್ಯ ನಿರ್ಮೂಲನೆಗಾಗಿ ಹೋರಾಡಿ ಕಾವಿಗೊಂದು ಘನತೆ ತಂದುಕೊಟ್ಟು, ಭಕ್ತರನ್ನೇ ಬಂಧುಗಳೆಂದು ನಂಬಿದ್ದ ಗದುಗಿನ ತೋಂಟದಾರ್ಯ ಮಠದ ಸಿದ್ಧಲಿಂಗ ಸ್ವಾಮಿಗಳು ನಿರ್ಗಮಿಸಿದ್ದಾರೆ. ಭಾರತೀಯ ಧಾರ್ಮಿಕ ವ್ಯವಸ್ಥೆಯಲ್ಲಿ ಮಠಗಳು ಜನರ ಶ್ರದ್ಧಾಕೇಂದ್ರಗಳು. ಅಂಥ ಮಠಗಳಲ್ಲಿರುವ ಮಠಾಧಿಪತಿಗಳ ಮಾತುಗಳು ಅನುಯಾಯಿಗಳಿಗೆ ಸಂವಿಧಾನವಿದ್ದಂತೆ. ಇಂಥ ಅಮಾಯಕ ಅನುಯಾಯಿಗಳನ್ನು, ಅವರ ಭಾವನೆಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿರುವ ಮಠಾಧಿಪತಿಗಳೇ ಹೆಚ್ಚಾಗಿರುವ ಕಾಲದಲ್ಲಿ, ಮಠದ ಅನುಯಾಯಿಗಳಿಗೆ ಕಾಯಕನೀತಿ, ಸೌಹಾರ್ದ ಬದುಕು, ಸಹಬಾಳ್ವೆಯ ದಾರಿ, ಮೌಢ್ಯವಿರೋಧಿ ಆಚರಣೆಗಳನ್ನು ಕಲಿಸಿದ ನಿಜಸಂತ ಈ ತೋಂಟದಾರ್ಯ ಸ್ವಾಮಿಗಳು. ಮೂಲತಃ ಬಸವ ಚಿಂತನೆ ಹಾಗೂ ಶರಣ ಚಳುವಳಿಯಿಂದ ಪ್ರಭಾವಿತರಾಗಿದ್ದ ಇವರು ಎಡಪಂಥೀಯ ಚಿಂತನೆಗಳ ಕುರಿತು ಗೌರವದ ಭಾವನೆ ಹೊಂದಿದ್ದರು. ಸ್ನಾತಕೋತ್ತರ ಪದವಿಯನ್ನೂ ಪಡೆದಿದ್ದ ಈ ಸ್ವಾಮೀಜಿ ತಮ್ಮ ಅಧ್ಯಯನ ಹಾಗೂ ಚಿಂತನೆಗಳನ್ನು ಜನರ ಬದುಕಿನ ಉತ್ತಮಿಕೆಗಾಗಿ ಬಳಸಿಕೊಂಡರು. ಸ್ವತಃ ಕೃಷಿ ಭೂಮಿಯಲ್ಲಿ ಉತ್ತಿ, ಬಿತ್ತಿದ ಕಾಯಕ ತತ್ವವನ್ನು ಅನುಸರಿಸಿದವರು. ಮಠದ ಆದಾಯ, ಸಂಪತ್ತನ್ನು ದಾಸೋಹದ ಮೂಲಕ ಜಂಗಮ (ಸಮಾಜ)ಕ್ಕೆ ಅರ್ಪಿಸಿದರು. ತಾವು ನಂಬಿದ ತತ್ವಗಳನ್ನು ಕೇವಲ ಪ್ರವಚನಗಳಿಗೆ ಸೀಮಿತಗೊಳಿಸದೇ ಒಬ್ಬ ಸಾಮಾಜಿಕ ಕಾರ್ಯಕರ್ತನ ರೀತಿಯಲ್ಲಿ ಕಾರ್ಯಗತಗೊಳಿಸಲು ಬದುಕಿನುದ್ದಕ್ಕೂ ಶ್ರಮಿಸಿದರು.

ಒಂದು ಧರ್ಮ ತನ್ನ ಶ್ರೇಷ್ಠತೆಯನ್ನು ಸಾಬೀತುಪಡಿಸಬೇಕಾದರೆ ಇನ್ನೊಂದು ಧರ್ಮವನ್ನು ದ್ವೇಷಿಸಬೇಕು, ಅದರ ವಿರುದ್ಧ ಸಮರ ಸಾರಬೇಕು ಎಂಬ ಇಂದಿನ ರಾಜಕೀಯ ಪ್ರೇರಿತ ವಾತಾವರಣದಲ್ಲಿ, ಒಂದು ಧರ್ಮ ಇನ್ನೊಂದು ಧರ್ಮದ ನಡುವೆ ಹೇಗೆ ಸಹಬಾಳ್ವೆ ನಡೆಸಬೇಕೆಂಬ ಮಾರ್ಗವನ್ನು ತೋರಿಸಿಕೊಟ್ಟರು ತೋಂಟದಾರ್ಯ ಸ್ವಾಮೀಜಿ. ಗದುಗಿನ ಮಠದ ಜಾತ್ರಾಮಹೋತ್ಸವ ಸಂದರ್ಭದಲ್ಲಿ ಸ್ವಜಾತಿಯವರನ್ನೇ ಮಹೋತ್ಸವದ ಮುಖ್ಯಸ್ಥನನ್ನಾಗಿ ಮಾಡಬೇಕು ಎನ್ನುವ ನೀತಿ ಮುರಿದು ಅನ್ಯಜಾತಿಯ, ಹಿಂದುಳಿದ ವರ್ಗದ, ಅನ್ಯಧರ್ಮದ ವ್ಯಕ್ತಿಗಳಿಗೆ ಅಂಥ ಸ್ಥಾನ ನೀಡಿ ಜಾತ್ಯತೀತತೆಗೆ ಒಂದು ಅರ್ಥಕೊಟ್ಟರು. ಪಟ್ಟಭದ್ರ ಹಿತಾಸಕ್ತಿಗಳಿಂದ, ಹುಸಿಭಕ್ತರ ತೀವ್ರವಾದ ವಿರೋಧ ಮತ್ತು ಪ್ರತಿಭಟನೆಯನ್ನು ಎದುರಿಸಿ ತಮ್ಮ ನಿಲುವಿಗೆ ಬದ್ಧರಾಗಿ ಮುನ್ನಡೆದರು. ಮೊಟ್ಟಮೊದಲ ಶಿಕ್ಷಕಿ ಸಾವಿತ್ರಿಬಾಯಿ ಫುಲೆ ಹೆಸರಿನಲ್ಲಿ ತಮ್ಮ ಮಠದಿಂದ ಪ್ರಶಸ್ತಿಗಳನ್ನು ಕೊಟ್ಟರು. ಮಠಾಧಿಪತಿಯಾದವನು ಮಠದ ಸಂಪತ್ತಿನ ಉಪಭೋಗದಲ್ಲಿ ತಲ್ಲೀನನಾಗದೇ ಜನರ ಬದುಕು ಹಸನುಗೊಳಿಸಬೇಕೆಂದು ಹೇಳುತ್ತಲೇ ಮಠದಿಂದ ಹೊರಬಂದು ಸಾಮಾಜಿಕ ಚಳುವಳಿಯಲ್ಲಿ ಭಾಗವಹಿಸಿದರು. ಗೋಕಾಕ ವರದಿ ಜಾರಿಗಾಗಿ ನಡೆದ ಚಳುವಳಿಯಲ್ಲಿ ತೋಂಟದಾರ್ಯ ಸ್ವಾಮಿಗಳು ಬೀದಿಗಿಳಿದರು. ತಮ್ಮ ಮಠದಲ್ಲಿಯೇ ನಾಡು–ನುಡಿಯ ಕುರಿತು ವಿಚಾರ ಸಂಕಿರಣಗಳನ್ನು ನಡೆಸಿದರು. ಗೋಕಾಕ ವರದಿ ಜಾರಿಯಾಗುವವರೆಗೂ ಚಳುವಳಿಯ ನಾಯಕತ್ವ ವಹಿಸಿದ್ದರು.

ಗದಗ ಜಿಲ್ಲೆಯಲ್ಲಿ ಪೊಸ್ಕೊ ಎಂಬ ಅಮೆರಿಕಾದವರ ಬಂಡವಾಳದ, ದಕ್ಷಿಣ ಕೋರಿಯಾದ ಕಾರ್ಪೊರೇಟ್ ಕಂಪನಿ ಉಕ್ಕು ಕಾರ್ಖಾನೆಗಾಗಿ ರೈತರ ಜಮೀನನ್ನು ಕಬಳಿಸಲು ಮುಂದಾಯಿತು, ಕರ್ನಾಟಕ ಸರಕಾರ ಪೊಸ್ಕೊ ಕಂಪನಿಯಿಂದ ದುಡ್ಡು ಪಡೆದು ರೈತರು ಭೂಮಿ ಬಿಟ್ಟುಕೊಡಲು ನೋಟಿಫಿಕೇಶನ್ ಹೊರಡಿಸಿತ್ತು. ಸರಕಾರ ಮತ್ತು ಕಂಪನಿಯ ಒಳಸಂಚಿನಿಂದ ಕಂಪನಿಗೆ ಅವಶ್ಯಕತೆಗಿಂತ ಹೆಚ್ಚಿನ ಭೂಮಿಯನ್ನು ನೀಡಲು ಮುಂದಾಗಿತ್ತು. ಆ ಪ್ರದೇಶದಲ್ಲಿ ಅಂಥ ಉತ್ಪನ್ನಗಳ ರಫ್ತು ಉದ್ದೇಶಿತ ಕೈಗಾರಿಕೆ ಬರುವುದು ನಾಡಿಗೆ ಉಪಯುಕ್ತವಾಗಿರಲಿಲ್ಲ ಮತ್ತು ಪರಿಸರಕ್ಕೆ ಮಾರಕವಾಗಿತ್ತು.




ಪೊಸ್ಕೊ ಕಂಪನಿ

ಕೆಲ ರೈತರಿಗೆ, ರಾಜಕೀಯ ಪುಡಾರಿಗಳಿಗೆ ಹಣದ ಆಮಿಷ ಒಡ್ಡಿ ಕೈಗಾರಿಕೆ ಸ್ಥಾಪನೆಗೆ ಪೊಸ್ಕೊ ಕಂಪನಿ ಮುಂದಾಗಿತ್ತು. ಭೂಮಿಯನ್ನೇ ನಂಬಿದ ನೂರಾರು ರೈತರು ಬೀದಿಗೆ ಬೀಳುತ್ತಿದ್ದರು. ಅಂಥ ಸಂದರ್ಭದಲ್ಲಿ ಸ್ಥಳೀಯ ಶಾಸಕ, ಸಚಿವರು ಜನರ ರಕ್ಷಣೆಗೆ ನಿಲ್ಲದೆ ಕಂಪನಿಯ ಪರವಾಗಿ ನಿಂತು, ಭೂಸ್ವಾಧೀನವನ್ನು ವಿರೋಧಿಸಿದ ಸಾಮಾಜಿಕ ಹೋರಾಟಗಾರರನ್ನು ಗ್ರಾಮಗಳಿಗೇ ಹೋಗದಂತೆ ತಡೆದರು. ಆಗ ಗದುಗಿನ ತೋಂಟದಾರ್ಯ ಸ್ವಾಮೀಜಿಯವರು ಭೂಸ್ವಾಧೀನವನ್ನು ವಿರೋಧಿಸಿ ರೈತರಪರ ಹೋರಾಟಕ್ಕಿಳಿದರು. ಕರ್ನಾಟಕ ಸರಕಾರವನ್ನೇ ಎದುರು ಹಾಕಿಕೊಂಡರು. ಕೆಲವು ಹುಸಿ ಭಕ್ತರು, ಸರಕಾರದ, ಕಂಪನಿಯ ಏಜೆಂಟರು ಸ್ವಾಮೀಜಿಗೆ ಇಂಥ ಉಸಾಬರಿ ಏಕೆ ಬೇಕು ಎಂದು ಮಠದ ಮುಂದೆಯೇ ಪ್ರತಿಭಟಿಸಿದರು. 'ರೈತರಿಂದಲೇ ಮಠಗಳು, ಅವರು ಕೊಡುವ ಅನ್ನದಿಂದಲೇ ನಾವು ದಾಸೋಹ ನಡೆಸುತ್ತೇವೆ, ರೈತ ಸಂಕಷ್ಟದಲ್ಲಿರುವಾಗ, ಪರಿಸರ ನಾಶದಂಚಿನಲ್ಲಿರುವಾಗ ನಾವು ಮಠದಲ್ಲಿ ನೆಮ್ಮದಿಯಿಂದಿರಲು ಸಾಧ್ಯವಿಲ್ಲ' ಎಂದು ಹೇಳಿ ಹಳ್ಳಿ ಹಳ್ಳಿಗೆ ಹೋಗಿ ಹೋರಾಟ ತೀವ್ರಗೊಳಿಸಿದರು. ಅವರು ಹೋರಾಟಕ್ಕಿಳಿದ ಕಾರಣ ಕೇವಲ ಒಂದು ತಿಂಗಳಲ್ಲಿ ಸರಕಾರ ತನ್ನ ನಿರ್ಧಾರದಿಂದ ಹಿಂದೆ ಸರಿಯಿತು. ರೈತರ ಭೂಮಿ, ಪರಿಸರ ಸುರಕ್ಷಿತವಾಯಿತು. ಇದೇ ಪೊಸ್ಕೊ ಕಂಪನಿ ಒರಿಸ್ಸಾದಲ್ಲಿ ಅಲ್ಲಿನ ಸರಕಾರದ ಜೊತೆಗೂಡಿ ವರ್ಷಗಟ್ಟಲೆ ಹೋರಾಟ ಮಾಡಿದ ಪ್ರತಿಭಟನಾಕಾರರ ಮೇಲೆ, ಆದಿವಾಸಿಗಳ ಮೇಲೆ ನಿರಂತರ ದಾಳಿ ನಡೆಸಿತ್ತು. ಆದರೆ ಕರ್ನಾಟಕದಲ್ಲಿ ತೋಂಟದ ಸ್ವಾಮೀಜಿಯವರ ನಾಯಕತ್ವದಲ್ಲಿ ನಡೆದ ಹೋರಾಟಕ್ಕೆ ಮಣಿದು ಹಿಂದೆ ಸರಿಯಬೇಕಾಯಿತು. ಗದಗ ಮತ್ತು ಬಳ್ಳಾರಿ ಜಿಲ್ಲೆಯ ಮಧ್ಯೆ ಇರುವ ಕಪ್ಪತಗುಡ್ಡದಲ್ಲಿ ಗಣಿಗಾರಿಕೆ ನಡೆಸಲು ಸರಕಾರ ಅನುಮತಿ ಕೊಟ್ಟಾಗ ಮತ್ತೆ ತೋಂಟದಾರ್ಯ ಸ್ವಾಮೀಜಿ ಬೀದಿಗಿಳಿದು ಗಣಿಗಾರಿಕೆಯನ್ನು ತಡೆದರು, ಕಪ್ಪತಗುಡ್ಡದಂಥ ಅಮೂಲ್ಯ ಔಷಧಿ ಸಸ್ಯಗಳಿರುವ, ಆ ಪ್ರದೇಶದ ಏಕೈಕ ಹಸಿರು ಬೆಟ್ಟ ಉಳಿಯಲು ಕಾರಣಕರ್ತರಾದರು.

ಒಂದು ಮಠ ತನ್ನ ಪರಿಸರದಲ್ಲಿ ವಿಶೇಷ ಪ್ರಭಾವವನ್ನು ಹೊಂದಿರುತ್ತದೆ. ಮಠಾಧಿಪತಿಗಳ ಮಾತು, ನಡೆ, ಚಿಂತನೆ ಅಲ್ಲಿನ ಜನಜೀವನದ ಮೇಲೆ ಪ್ರಭಾವ ಬೀರುತ್ತದೆ. ಇಂದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇರುವ ಬಹುತೇಕ ಮಠಗಳು, ಅದರಲ್ಲೂ ಉಡುಪಿಯ ಅಷ್ಟಮಠಗಳು ಮೌಢ್ಯವನ್ನು ವಿರೋಧಿಸದೇ, ಪಂಕ್ತಿಭೇದ, ಮಡೆಸ್ನಾನದಂತಹ ಅಮಾನವೀಯ, ಅವೈಜ್ಞಾನಿಕ ಅಸಮಾನತೆಯ ಆಚರಣೆಗಳನ್ನು ಬೆಂಬಲಿಸುತ್ತಿವೆ. ಸುಬ್ರಮಣ್ಯದಲ್ಲಿ ಬ್ರಾಹ್ಮಣರು ಉಂಡುಬಿಟ್ಟ ಎಂಜಲೆಲೆಯ ಮೇಲೆ ಉರುಳು ಸೇವೆ ಮಾಡುವ ನಂಬಿಕೆ ಮತ್ತು ಆಚರಣೆಯ ವಿರುದ್ಧ ಇನ್ನೊಬ್ಬ ಜನಪರ, ಪ್ರಗತಿಪರ ಚಿಂತನೆಯ ಶ್ರೀ ನಿಡುಮಾಮಿಡಿ ಸ್ವಾಮಿಗಳು ರಾಜ್ಯದ ವಿಚಾರವಾದಿ ಮಠಾಧಿಪತಿಗಳನ್ನು ಸೇರಿಸಿ ತೀವ್ರವಾದ ಹೋರಾಟ



**ಕಪ್ಪತಗುಡ್ಡದಂಥ ಅಮೂಲ್ಯ ಔಷಧಿ ಸಸ್ಯಗಳಿರುವ ಏಕೈಕ ಹಸಿರುಬೆಟ್ಟ**

ನಡೆಸಿದರು. ಆಗ ಗದುಗಿನ ತೋಂಟದಾರ್ಯ ಸ್ವಾಮಿಗಳೂ ಬೆಂಗಳೂರಿಗೆ ಬಂದು ಆ ಹೋರಾಟದಲ್ಲಿ ಭಾಗವಹಿಸಿ ಆ ಚಳುವಳಿಯ ಭಾಗವಾದರು. ಬಹುತೇಕ ಮಠಾಧಿಪತಿಗಳು ತಾವೇ ಶ್ರೇಷ್ಠ ಎಂಬ ಅಹಂನಲ್ಲಿರುತ್ತಾರೆ. ತೋಂಟದ ಈ ಸ್ವಾಮಿಗಳು ಎಲ್ಲಿಯೇ ಜನಪರವಾದ ಚಳುವಳಿಗಳಿದ್ದರೂ, ಆ ವಿಚಾರ ಅವರಿಗೆ ಮನದಟ್ಟಾದರೆ ಅದಕ್ಕೆ ಬೆಂಬಲ ಸೂಚಿಸುತ್ತಿದ್ದರು. ಸ್ವತಃ ಭಾಗಿಯಾಗುತ್ತಿದ್ದರು. ಹಲವಾರು ಲಿಂಗಾಯತ ಮಠಗಳಿಗೆ ಜಂಗಮರೇ ಉತ್ತರಾಧಿಕಾರಿಯಾಗಬೇಕೆಂಬ ನೀತಿಯನ್ನು ಮುರಿದು ಜಂಗಮೇತರರೂ ಅರ್ಹರಿದ್ದರೆ ಮಠಾಧಿಪತಿಗಳಾಗ ಬೇಕೆಂದು ಪ್ರತಿಪಾದಿಸಿದರು, ಮಾತ್ರವಲ್ಲ ತಮ್ಮದೇ ಮುಂಡರಗಿಯ ಶಾಖಾ ಮಠಕ್ಕೆ ಜಂಗಮೇತರ, ಪ್ರಖರ ವಿಚಾರವಾದಿ, ಬಸವ ತತ್ವ ಅನುಯಾಯಿ ಶ್ರೀ ನಿಜಗುಣಾನಂದ ಸ್ವಾಮಿಗಳನ್ನು ಮಠಾಧಿಪತಿಯನ್ನಾಗಿ ನಿಯಮಿಸಿದರು.

ಮಠ, ಮಠಾಧಿಪತಿ ಇಂಥ ವ್ಯವಸ್ಥೆಯನ್ನೇ ನಾಸ್ತಿಕರು ವಿರೋಧಿಸಬಹುದು. ಆದರೆ ಜನಮನದಲ್ಲಿ ಆಸ್ತಿಕತೆ ಇರುವವರೆಗೂ ಅಂಥ ವ್ಯವಸ್ಥೆ ಇದ್ದೇ ಇರುತ್ತದೆ. ಅಂಥ ವ್ಯವಸ್ಥೆಯ ಭಾಗವಾಗಿರುವವರು ತಮ್ಮ ಮಿತಿಯ ಮಧ್ಯೆಯೂ ಅಂಥ ವ್ಯವಸ್ಥೆಯನ್ನು, ಆ ವ್ಯವಸ್ಥೆಯಲ್ಲಿ ತಮಗೆ ಲಭ್ಯವಾಗಿರುವ ಅಧಿಕಾರದ ಬಲದಿಂದ ಜನಪರವಾಗಿ ಮುನ್ನಡೆಸಿದರೆ ಸಮಾಜದಲ್ಲಿ ಪರಿಣಾಮಕಾರಿಯಾದ ಕೆಲಸ ಮಾಡಬಹುದು. ನಂಬಿದ ಜನಸಮೂಹವನ್ನು ವೈಜ್ಞಾನಿಕತೆ, ವೈಚಾರಿಕತೆ, ಸೌಹಾರ್ದ, ಸಹಬಾಳ್ವೆಯತ್ತ ಮುನ್ನಡೆಸಬಹುದು ಎಂಬುದಕ್ಕೆ ಮಾದರಿ ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳು. ಅವರು ತಮ್ಮ ನಂತರ ಶ್ರೀ ಸಿದ್ಧರಾಮ ಸ್ವಾಮೀಜಿಯವರನ್ನು ತಮ್ಮ ಉತ್ತರಾಧಿಕಾರಿ ಎಂದು ಉಯಿಲು ಬರೆದು ಹೋಗಿದ್ದಾರೆ. ಶ್ರೀ ಸಿದ್ಧರಾಮ ಸ್ವಾಮೀಜಿಗಳೂ ಸಹ ವಿಚಾರವಾದಿಗಳೇ, ಆ ಮಠದ ಜನಪರ ಪರಂಪರೆ ಮುಂದುವರಿಯಲೆಂಬುದು ಆಶಯ.

ಶ್ರೀ ತೋಂಟದಾರ್ಯ ಸ್ವಾಮಿಗಳು 'ಹೊಸತು' ಪತ್ರಿಕೆ ಆರಂಭವಾದಾಗಿನಿಂದಲೂ ಅದರ ಓದುಗರು. ಹಲವಾರು ಪ್ರವಚನಗಳಲ್ಲಿ 'ಹೊಸತು' ಪತ್ರಿಕೆಯಲ್ಲಿನ ವೈಚಾರಿಕ ಲೇಖನಗಳನ್ನು ಸ್ವತಃ ಓದಿ ಹೇಳಿದ್ದಾರೆ, ಉಲ್ಲೇಖಿಸಿದ್ದಾರೆ. ಅಂಥ ಒಬ್ಬ 'ಜನಪರ ಜಂಗಮ'ನ ನಿರ್ಗಮನಕ್ಕೆ ಹೊಸತು ಬಳಗ ನೋವಿನ ನಮನಗಳನ್ನು ಸಲ್ಲಿಸುತ್ತದೆ.

**ಶ್ರೀಸುಮಿತ್ರಾಸುತ ಅಗಸಬಾಳ**
ನಂ. ೧೬೭, ಲಗ್ಗೆರೆ ಮುಖ್ಯರಸ್ತೆ
ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು–೫೮

## ಬಾಬು ರೆಡ್ಡಿ ತುಂಗಳ ಅವರಿಗೆ ನಮನಗಳು

ಖ್ಯಾತ ಪತ್ರಕರ್ತ, ಹೋರಾಟಗಾರ, ವಾಗ್ಮಿ, ಮಾಜಿ ಶಾಸಕ ಬಾಬುರೆಡ್ಡಿ ತುಂಗಳ ಅವರು ತಮ್ಮ ಲಳನೇ ವಯಸ್ಸಿನಲ್ಲಿ ನಿಧನರಾಗಿದ್ದಾರೆ. ಅಂದಿನ ವಿಜಯಪುರ ಇಂದಿನ ಬಾಗಲಕೋಟೆ ಜಿಲ್ಲೆಯ ಜಮಖಂಡಿ ತಾಲೂಕಿನ ಚಿದರಿ ಗ್ರಾಮದವರಾದ ಬಾಬುರೆಡ್ಡಿಯವರು ಸಮಾಜವಾದಿ ಚಿಂತಕರು. 'ಕುರುಕ್ಷೇತ್ರ' ಎಂಬ ಪತ್ರಿಕೆಯ ಮೂಲಕ ಕನ್ನಡ ನಿಯತಕಾಲಿಕಗಳ ಭಾಷೆಗೆ ಒಂದು ಮೊನಚು ತಂದುಕೊಟ್ಟವರು. ತುರ್ತು ಪರಿಸ್ಥಿತಿ ಮತ್ತು ನಂತರದ ಕಾಲದಲ್ಲಿ ಇಡೀ ಉತ್ತರ ಕರ್ನಾಟಕದಲ್ಲಿ ಬಾಬುರೆಡ್ಡಿ ತುಂಗಳ ಅವರ ಭಾಷಣಕ್ಕೆ 'ಕುರುಕ್ಷೇತ್ರ' ಪತ್ರಿಕೆಗೆ ಅಸಂಖ್ಯಾತ ಅಭಿಮಾನಿಗಳು, ಓದುಗರು ಇದ್ದರು.

೧೯೮೫ರಲ್ಲಿ ಬೀಳಗಿ ಕ್ಷೇತ್ರದಿಂದ ಶಾಸಕರಾಗಿ ಆಯ್ಕೆಯಾಗಿದ್ದ ತುಂಗಳ ಅವರು ನಂತರದ ಅವಧಿಯಲ್ಲಿ ಕಲುಷಿತಗೊಂಡ ರಾಜಕಾರಣದಿಂದ ದೂರವಿದ್ದರು. ಕಾರ್ಮಿಕ ನಾಯಕರೂ ಆಗಿದ್ದ ತುಂಗಳ ಅವರು ರೈತ ಚಳುವಳಿ, ಗೋಕಾಕ ವರದಿಗಾಗಿ ನಡೆದ ಭಾಷಾಚಳುವಳಿ... ಹೀಗೆ ನಾಡಿನ ಹಲವಾರು ಹೋರಾಟಗಳಲ್ಲಿ ಭಾಗಿಯಾದವರು. ಬಾಬುರೆಡ್ಡಿ ತುಂಗಳ ಅವರಿಗೆ 'ಹೊಸತು' ಬಳಗ ಅಂತಿಮ ನಮನಗಳನ್ನು ಸಲ್ಲಿಸುತ್ತದೆ.

–ಸಂ.

# ನೆಮ್ಮದಿಯ ಜೀವನ ಸೂಚ್ಯಂಕ




**ಇಡೀ** ವಿಶ್ವದಲ್ಲಿ ನಗರಗಳ ಜನಸಂಖ್ಯೆ ಹೆಚ್ಚುತ್ತಿರುವುದು ಎಲ್ಲರಿಗೂ ತಿಳಿದ ವಿಷಯ. ಅದರಲ್ಲೂ ಏಷ್ಯಾದ ನಗರಗಳಲ್ಲಿ ಈ ಏರಿಕೆಯ ಪ್ರಮಾಣ ಬೇರೆ ದೇಶಗಳಿಗೆ ಹೋಲಿಸಿದರೆ ತುಂಬ ಹೆಚ್ಚು. ಭಾರತ ದೇಶವೊಂದೇ ೨೦೫೦ರ ಹೊತ್ತಿಗೆ ೪೧ ಕೋಟಿ ಹೊಸ ನಗರವಾಸಿಗಳನ್ನು ಹೊಂದಲಿದೆ ಮತ್ತು ವಿಶ್ವದ ಜನಸಂಖ್ಯೆಯ ಪ್ರತಿಶತ ೫೮ ಭಾಗ ಭಾರತದ್ದಾಗಿರುತ್ತದೆ. ಭಾರತದ ಒಟ್ಟು ಜಿಡಿಪಿಯ ಪ್ರತಿಶತ ೬೩ರಷ್ಟನ್ನು ನಗರಗಳು ಇಂದು ನೀಡುತ್ತಿದ್ದು, ೨೦೫೦ರ ಹೊತ್ತಿಗೆ ಅದು ಶೇಕಡ ೭೫ರಷ್ಟು ಆಗುವ ನಿರೀಕ್ಷೆಯಿದೆ.

ಈ ಹಿನ್ನೆಲೆಯಲ್ಲಿ, ನಗರಗಳಲ್ಲಿ ನೆಮ್ಮದಿಯ ಜೀವನವನ್ನು ನಡೆಸುವುದು ಸಾಧ್ಯವೇ ಎನ್ನುವ ಪ್ರಶ್ನೆ ಮತ್ತೆ ಮತ್ತೆ ಬರುತ್ತಿದೆ. "ನಗರಗಳು ವಾಸಿಸುವುದಕ್ಕೆ ಎಷ್ಟು ಯೋಗ್ಯ?" – ಎಂಬುದನ್ನು ಸಮಗ್ರವಾಗಿ ಸೂಚಿಸುವ ಸೂಚ್ಯಂಕಗಳನ್ನು ವಿಶ್ವದ ಅನೇಕ ಸಂಸ್ಥೆಗಳು ಮತ್ತು ದೇಶಗಳು ಜಾರಿಗೆ ತಂದಿವೆ. ಈಗ ಭಾರತವೂ ಇಂಥ ಸೂಚ್ಯಂಕವೊಂದನ್ನು ಪ್ರಕಟಿಸುತ್ತಿರುವುದು ಸಂತಸದ ಸಂಗತಿ.

ಎರಡು ವಾರಗಳ ಹಿಂದೆಯಷ್ಟೇ ಭಾರತ ಸರ್ಕಾರವು 'ನೆಮ್ಮದಿಯ ಜೀವನ ಸೂಚ್ಯಂಕ'ಗಳ ಪಟ್ಟಿಯನ್ನು ಪ್ರಕಟಿಸಿದೆ. ಪುಣೆ ನಗರ ಈ ಸೂಚ್ಯಂಕಗಳ ಪಟ್ಟಿಯಲ್ಲಿ ಅಗ್ರಸ್ಥಾನ ಪಡೆದಿದೆ. ಆ ಸುದ್ದಿ ಕೇಳಿದ ತಕ್ಷಣ ನನ್ನ ಸ್ನೇಹಿತರನೇಕರು ಕೇಳಿದ ಪ್ರಶ್ನೆ – ಮೈಸೂರಿಗೆ ಎಷ್ಟನೇ ಸ್ಥಾನ? – ಇದು ಮೈಸೂರಿಗರಲ್ಲಿ 'ಈ ಪಟ್ಟಿಯಲ್ಲಿ ನಾವಿಲ್ಲವಲ್ಲ' ಎನ್ನುವ ವಿಷಾದ ಮೂಡಿಸಿದ್ದರೆ, ಬೇರೆ ನಗರ/ಪಟ್ಟಣಗಳಿಗೆ ಸೇರಿದವರಲ್ಲಿ 'ಮೈಸೂರು ಏಕಿಲ್ಲ' ಎನ್ನುವ ಆಶ್ಚರ್ಯವನ್ನೂ ಮೂಡಿಸಿದೆ. ಈ ಹಿನ್ನೆಲೆಯಲ್ಲಿ "ನೆಮ್ಮದಿಯ ಜೀವನ ಸೂಚ್ಯಂಕ"ವನ್ನು ಅರ್ಥ ಮಾಡಿಕೊಳ್ಳುವ ಪ್ರಯತ್ನ ಈ ಲೇಖನದಲ್ಲಿದೆ.

ಒಟ್ಟು ೧೧೧ ನಗರಗಳನ್ನು ಈ ಪಟ್ಟಿಯಲ್ಲಿ ಸೇರಿಸಿದ್ದು ಅವನ್ನು ಆರಿಸಲು ಈ ಕೆಳಗಿನ ಸೂತ್ರವನ್ನು ಅಳವಡಿಸಲಾಯಿತು:

೧. ಸ್ಮಾರ್ಟ್ ಸಿಟಿಯಲ್ಲಿ ಸೇರಿರುವ ನಗರಗಳು
೨. ಪ್ರತಿ ರಾಜ್ಯದ ರಾಜಧಾನಿ
೩. ಒಂದು ದಶಲಕ್ಷಕ್ಕಿಂತ ಹೆಚ್ಚಿರುವ ಕೆಲವು ನಗರಗಳು
(ಬಹುಶಃ ಈ ಮೇಲಿನ ಸೂತ್ರದ ಅಳವಡಿಕೆಯಿಂದ ಮೈಸೂರು ನಗರವನ್ನು ಈ ಸಮೀಕ್ಷೆಯಲ್ಲಿ ಸೇರಿಸಿಕೊಳ್ಳಲಾಗಲಿಲ್ಲ. ಸಂಬಂಧಪಟ್ಟ ಅಧಿಕಾರಿಗಳು ಈ ನಿಟ್ಟಿನಲ್ಲಿ ಹೆಚ್ಚಿನ ಬೆಳಕು ಚೆಲ್ಲಬಹುದು)

ಈ ಸೂಚ್ಯಂಕವನ್ನು ಯಾರು ಹೇಗೆ ಉಪಯೋಗಿಸಬಹುದೆಂಬ ನಿಟ್ಟಿನಲ್ಲಿ ಈ ನಾಲ್ಕು ಉದ್ದೇಶಗಳನ್ನು ಹೊಂದಲಾಗಿದೆ:

೧. ಮಾಹಿತಿ ಆಧಾರಿತ ನಗರಾಭಿವೃದ್ಧಿ ಯೋಜನೆಗಳಿಗೆ ಇಂಬು ಕೊಡುವುದು
೨. ಅಭಿವೃದ್ಧಿ ಯೋಜನೆಗಳಲ್ಲಿ ಸುಸ್ಥಿರ ಅಭಿವೃದ್ಧಿಗೆ ಒತ್ತುಕೊಡುವುದು
೩. ನಗರಾಭಿವೃದ್ಧಿ ಯೋಜನೆಗಳ ಫಲಿತಾಂಶವನ್ನು ಅಳೆಯುವ ಸಾಧನವಾಗಿ ಬಳಸುವುದು
೪. ನಗರಾಭಿವೃದ್ಧಿಯಲ್ಲಿ ಆಡಳಿತ ವರ್ಗ ಮತ್ತು ನಾಗರಿಕರ ಮಧ್ಯೆ ಮಾತುಕತೆಗೆ ಆಧಾರವಾಗುವುದು.

ಈ ಸೂಚ್ಯಂಕವನ್ನು ಅಭಿವೃದ್ಧಿಪಡಿಸುವ ಹಿಂದಿನ ಪ್ರಕ್ರಿಯೆ ೨೦೧೭ರಲ್ಲಿ ಪ್ರಾರಂಭವಾಯಿತು. ಮೊದಲು ವಿಶ್ವದ ಅನೇಕ ಸಂಸ್ಥೆಗಳು ಪ್ರಕಟಿಸುತ್ತಿರುವ ಸೂಚ್ಯಂಕಗಳನ್ನು ಹಿಂದಿನ ಪ್ರಕ್ರಿಯೆ ಏನು ಎಂಬುದರ ಬಗ್ಗೆ ಅಧ್ಯಯನ ನಡೆಸಲಾಯಿತು. ಈ ಅಧ್ಯಯನದ ನಂತರ ಭಾರತದ "ನೆಮ್ಮದಿಯ ಜೀವನ ಸೂಚ್ಯಂಕ"ವು ಈ ಕೆಳಗಿನ ನಾಲ್ಕು ಸ್ತಂಭಗಳನ್ನು ಆಧರಿಸುವುದೆಂದು ನಿರ್ಧರಿಸಲಾಯಿತು:

೧. ಸಾಂಸ್ಥಿಕ
೨. ಸಾಮಾಜಿಕ
೩. ಅರ್ಥವ್ಯವಸ್ಥೆ ಮತ್ತು ಉದ್ಯೋಗ
೪. ಭೌತಿಕ

ಈ ನಾಲ್ಕು ಸ್ತಂಭಗಳನ್ನು ನೋಡುವ ರೀತಿಯನ್ನು ಸುಲಭಗೊಳಿಸಲು ಅದರಲ್ಲಿ ಈ ೧೫ ವಿಭಾಗಗಳನ್ನು ಗುರುತಿಸಲಾಗಿದೆ:

೧. ಆಡಳಿತ
೨. ಅಸ್ಮಿತೆ ಮತ್ತು ಸಂಸ್ಕೃತಿ
೩. ಶಿಕ್ಷಣ
೪. ಆರೋಗ್ಯ
೫. ಸುರಕ್ಷತೆ ಮತ್ತು ಭದ್ರತೆ
೬. ಅರ್ಥವ್ಯವಸ್ಥೆ ಮತ್ತು ಉದ್ಯೋಗಾವಕಾಶ
೭. ವಸತಿ ಮತ್ತು ಒಳಗೊಳ್ಳುವಿಕೆ
೮. ಭೂ ಬಳಕೆ
೯. ಸಾರ್ವಜನಿಕವಾಗಿ ಇರುವ ಮುಕ್ತ ಸ್ಥಳಗಳು
೧೦. ಸಾರಿಗೆ ಮತ್ತು ಚಲನಶೀಲತೆ
೧೧. ನೀರು ಸರಬರಾಜು
೧೨. ತ್ಯಾಜ್ಯ ನೀರಿನ ನಿರ್ವಹಣೆ
೧೩. ಘನ ತ್ಯಾಜ್ಯ ನಿರ್ವಹಣೆ
೧೪. ವಿದ್ಯುಚ್ಛಕ್ತಿ
೧೫. ಪರಿಸರದ ಗುಣಮಟ್ಟ




ವಿಭಾಗಗಳೇನೋ ಸರಿಯೇ. ಆದರೆ ಅದನ್ನು ಅಳೆಯಲು ಈ ವಿಭಾಗಗಳನ್ನು ಸೂಚಿಸುವ ಸೂಚಕಗಳ ಅವಶ್ಯಕತೆ ಇದೆ. ಹಾಗಾಗಿ, ಒಂದೊಂದು ವರ್ಗಕ್ಕೂ ಕೆಲವು ಸೂಚಕಗಳನ್ನು ಗೊತ್ತುಮಾಡಲಾಗಿದೆ. ಉದಾಹರಣೆಗೆ,

- ಆಡಳಿತದ ವಿಭಾಗ – 'ದೂರು ಕೊಟ್ಟಾಗ ಅದಕ್ಕೆ ಪರಿಹಾರ ಕೊಡಲು ತೆಗೆದುಕೊಳ್ಳುವ ಸರಾಸರಿ ಸಮಯ',
- ಅಸ್ಮಿತೆ ಮತ್ತು ಸಂಸ್ಕೃತಿ ವಿಭಾಗ – 'ಚಾರಿತ್ರಿಕ ಕಟ್ಟಡಗಳಿಗೆ ಕೊಟ್ಟ ಮಹತ್ವ' ಮತ್ತು 'ಕಲೆ ಮತ್ತು ಸಂಸ್ಕೃತಿ' ಪೋಷಣೆಗೆ ವೆಚ್ಚಮಾಡುತ್ತಿರುವ ಹಣ;
- ವಿದ್ಯುಚ್ಛಕ್ತಿಗೆ ಸಂಬಂಧಪಟ್ಟ ವಿಭಾಗ – 'ವಿದ್ಯುತ್ ಇಲ್ಲದ ಸಮಯದ ಸರಾಸರಿ'

**ಶಶಿಧರ ಡೋಂಗ್ರೆ ಎಂ.**

ಇಂಥ ೭೮ ಸೂಚಕಗಳ ಬಗ್ಗೆ ಆದಷ್ಟು ಖಚಿತವಾದ ಮಾಹಿತಿ ಸಂಗ್ರಹಣೆ ನಡೆದಿದೆ. ಬಹುತೇಕ ಎಲ್ಲಾ ಸೂಚಕಗಳನ್ನು ಈಗಾಗಲೇ ಸರ್ಕಾರದ ಹತ್ತಿರ ಇರುವ ಹತ್ತು ಹಲವು ಮಾಹಿತಿಗಳಿಂದ ಪಡೆದಿದೆಯಾದರೂ, ಕೆಲವು ಸೂಚಕಗಳ ಮಾಹಿತಿಯನ್ನು ಹೊಸ ಸಮೀಕ್ಷೆಯ ಮೂಲಕ ಸಂಗ್ರಹಿಸಲಾಗಿದೆ. ಅಂಥವಲ್ಲಿ ಕೆಲವು –

- ಸಾರ್ವಜನಿಕ ಸಾರಿಗೆ ವ್ಯವಸ್ಥೆಯಲ್ಲಿನ ಬಗೆಗಳು (ಬಸ್, ಆಟೋ, ಮೆಟ್ರೋ, ಸೈಕಲ್ ಇತ್ಯಾದಿ) ಮತ್ತು ಅವನ್ನು ಜನರು ಉಪಯೋಗಿಸುವ ರೀತಿ
- ಸರಬರಾಜಾದ ನೀರಿನ ಗುಣಮಟ್ಟ
- ಶಬ್ದ ಮಾಲಿನ್ಯ




ಈ ಸಮೀಕ್ಷೆಯನ್ನು ನಾಲ್ಕು ತಿಂಗಳ ಅವಧಿಯಲ್ಲಿ ಮಾಡಲಾಗಿದ್ದು, ೬೦ ಸಾವಿರಕ್ಕೂ ಹೆಚ್ಚು ಜನರಿಂದ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಇದಾದ ನಂತರ ಸೂಚ್ಯಂಕವನ್ನು ಮೂಡಿಸಬೇಕಷ್ಟೆ. ಅದಕ್ಕಾಗಿಯೇ ವಿಶೇಷವಾದ ಅನುಪಾತವನ್ನು ವಿನ್ಯಾಸಗೊಳಿಸಿ, ಒಟ್ಟು ನೂರು ಅಂಕಗಳನ್ನು ಈ ರೀತಿಯಾಗಿ ಹಂಚಿದ್ದಾರೆ:

| | |
|---|---|
| ೧. ಸಾಂಸ್ಥಿಕ | ೨೫ |
| ೨. ಸಾಮಾಜಿಕ | ೨೫ |
| ೩. ಅರ್ಥವ್ಯವಸ್ಥೆ ಮತ್ತು ಉದ್ಯೋಗ | ೫ |
| ೪. ಭೌತಿಕ | ೪೫ |

ಅಂದರೆ ಭೌತಿಕ ಮೂಲಸೌಕರ್ಯಕ್ಕೆ ಹೆಚ್ಚು ಒತ್ತು ಕೊಟ್ಟಿದೆ ಎಂದಾಗುತ್ತದೆ. ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರಕ್ಕೆ ಇದು ಸರಿಯಾದ ರೀತಿಯೂ ಆಗಿದೆ ಮತ್ತು ಭೌತಿಕ ವ್ಯವಸ್ಥೆಯ ಗುಣಮಟ್ಟ ಹೆಚ್ಚಬೇಕೆಂಬುದು ನಮ್ಮೆಲ್ಲರ ಅನುಭವವೂ ಅಲ್ಲವೇ? ಅಲ್ಲದೆ, ಮೇಲೆ ತಿಳಿಸಿದ ಸೂಚಕಗಳಲ್ಲೂ ಪ್ರಮುಖ ಮತ್ತು ಪೋಷಕ ಸೂಚಕಗಳೆಂದು ಎರಡು ವಿಭಾಗ ಮಾಡಿದ್ದು, ಪ್ರಮುಖ ಸೂಚಕಗಳಿಗೆ ಶೇಕಡ ೭೫ರಷ್ಟು ಪ್ರಾಮುಖ್ಯತೆಯನ್ನು ಪೋಷಕ ಸೂಚಕಗಳಿಗೆ ಶೇಕಡ ೨೫ರಷ್ಟು ಪ್ರಾಮುಖ್ಯತೆಯನ್ನೂ ಕೊಟ್ಟಿದ್ದಾರೆ.

ಮೊದಲ ಹತ್ತು ಸ್ಥಾನಗಳ ಪಟ್ಟಿ ಇಲ್ಲಿದೆ:

| ಸ್ಥಾನ | ನಗರ | ಸೂಚ್ಯಂಕ |
|---|---|---|
| ೧. | ಪುಣೆ | ೫೮.೧೧ |
| ೨. | ನವೀ ಮುಂಬೈ | ೫೮.೦೨ |
| ೩. | ಗ್ರೇಟರ್ ಮುಂಬೈ | ೫೭.೭೮ |
| ೪. | ತಿರುಪತಿ | ೫೭.೫೨ |
| ೫. | ಚಂಡೀಗಢ | ೫೩.೧೬ |
| ೬. | ಠಾಣೆ | ೫೨.೨೭ |
| ೭. | ರಾಯ್‌ಪುರ | ೫೦.೫೮ |
| ೮. | ಇಂದೋರ್ | ೫೦.೧೬ |
| ೯. | ವಿಜಯವಾಡ | ೪೯.೨೭ |
| ೧೦. | ಭೋಪಾಲ್ | ೪೯.೧೧ |

ಮುಂಬೈ ಆಸುಪಾಸಿನ ಶಹರಗಳು ಉನ್ನತ ಸ್ಥಾನ ಪಡೆದಿರುವುದು ವಿಶೇಷವಾದರೆ, ಮಧ್ಯಪ್ರದೇಶದ ಅವಳಿ ನಗರಗಳಾದ ಇಂದೋರ್ ಮತ್ತು ಭೋಪಾಲ್ ಮೊದಲ ಹತ್ತರಲ್ಲಿ ಸ್ಥಾನ ಗಳಿಸಿರುವುದೂ ಗಮನಾರ್ಹ (ಲೇಖಕನ ಹಲವು ಮಿತ್ರರು ಈ ನಗರಗಳ ಸ್ವಚ್ಛತೆ ಬಗ್ಗೆ ಹೇಳಿದ್ದರು).

ಕರ್ನಾಟಕದ ನಗರಗಳ ಸೂಚ್ಯಂಕಗಳು ಮತ್ತು ಸ್ಥಾನಗಳು ಈ ಕೆಳಗಿನಂತಿವೆ:

| ನಗರ | ಸೂಚ್ಯಂಕ | ಸ್ಥಾನ |
|---|---|---|
| ಮಂಗಳೂರು | ೩೭.೯೦ | ೪೧ |
| ಬೆಳಗಾವಿ | ೩೫.೪೮ | ೫೨ |
| ಹುಬ್ಬಳ್ಳಿ – ಧಾರವಾಡ | ೩೪.೪೪ | ೫೭ |
| ಬೆಂಗಳೂರು | ೩೪.೩೮ | ೫೮ |
| ಶಿವಮೊಗ್ಗ | ೩೨.೭೮ | ೬೭ |
| ತುಮಕೂರು | ೩೨.೧೭ | ೭೦ |
| ದಾವಣಗೆರೆ | ೨೯.೨೮ | ೮೩ |

೧–೪ ದಶಲಕ್ಷ ಜನಸಂಖ್ಯೆ ಇರುವ ನಗರಗಳು ಸರಿಸುಮಾರು ಎಲ್ಲಾ ವಿಭಾಗಗಳಲ್ಲಿಯೂ ಒಳ್ಳೆಯ ಸ್ಥಾನ ಪಡೆದಿರುವುದನ್ನು ನೋಡಬಹುದು. ಬಹುಶಃ ಇದು ನಗರಗಳ ಜನಸಂಖ್ಯೆಯ ವಿಕೇಂದ್ರೀಕರಣಕ್ಕೆ ಒಳ್ಳೆಯ ಸೂಚನೆ ಎನಿಸುತ್ತದೆ. ಆದರೆ ೫ ಲಕ್ಷಕ್ಕಿಂತಲೂ ಕಡಿಮೆ ಜನಸಂಖ್ಯೆ ಇರುವ ನಗರಗಳು ಎಲ್ಲ ವಿಭಾಗಗಳಲ್ಲೂ ಕಡಿಮೆ ಅಂಕ ಪಡೆದಿರುವುದು ಒಳ್ಳೆಯ ಲಕ್ಷಣವಲ್ಲ.

ಇನ್ನು ನಮ್ಮ ರಾಜಧಾನಿ ಬೆಂಗಳೂರಿನ ಸೂಚ್ಯಂಕಗಳು ವಿಷಾದವನ್ನು ಮೂಡಿಸುತ್ತವೆ ಎಂದೇ ಹೇಳಬೇಕು. ೪ ದಶಲಕ್ಷಕ್ಕಿಂತಲೂ ಹೆಚ್ಚಿನ ನಗರಗಳ ಪಟ್ಟಿಯಲ್ಲಿ, ಎಲ್ಲಾ ನಾಲ್ಕು ಆಯಾಮಗಳಲ್ಲಿಯೂ, ಕೊನೆಯ ಮೂರು ನಗರಗಳಲ್ಲಿ ಒಂದನೆಯ ಸ್ಥಾನ ಪಡೆದುಕೊಂಡಿದೆ. ಇದು ನಮ್ಮ ರಾಜಕಾರಣಿಗಳ, ನಗರ ಯೋಜಕರ ಕಣ್ಣು ತೆರೆಸೀತೇ?

ಅರ್ಥವ್ಯವಸ್ಥೆಯ ಆಯಾಮದಲ್ಲಿ ನವದೆಹಲಿಗೆ ೦.೧೨ರಷ್ಟು ಕಡಿಮೆ ಅಂಕ ಬಂದಿರುವುದೂ ತುಂಬ ಆಶ್ಚರ್ಯಕರ.

ಕೆಳಗಿನ ಮೂರು ಸ್ಥಾನಗಳು

| ಸಾಂಸ್ಥಿಕ (೨೫) | | ಸಾಮಾಜಿಕ (೨೫) | |
|---|---|---|---|
| ಚೆನ್ನೈ | ೧೧.೬೯ | ಸೂರತ್ | ೧೦.೫೮ |
| ಬೆಂಗಳೂರು | ೧೧.೬೪ | ನವದೆಹಲಿ | ೯.೪೩ |
| ಗ್ರೇಟರ್ ಮುಂಬೈ | ೧೧.೬೦ | ಬೆಂಗಳೂರು | ೭.೬೨ |

| ಅರ್ಥವ್ಯವಸ್ಥೆ (ಒಟ್ಟು ೫) | | ಭೌತಿಕ (೪೫) | |
|---|---|---|---|
| ಚೆನ್ನೈ | ೧.೯೮ | ಹೈದರಾಬಾದ್ | ೧೪.೨೬ |
| ಬೆಂಗಳೂರು | ೧.೯೮ | ಬೆಂಗಳೂರು | ೧೩.೧೪ |
| ನವದೆಹಲಿ | ೦.೧೨ | ನವದೆಹಲಿ | ೧೧.೯೨ |

ನಮ್ಮ ಅನೇಕ ಯೋಜನೆಗಳ ರೀತಿಯಲ್ಲಿ ಇದೂ 'ಆರಂಭ ಶೂರತ್ವ'ವನ್ನು ಪ್ರದರ್ಶಿಸದೆ, ಪ್ರತಿವರ್ಷವೂ ಇದರ ಪ್ರಕಟಣೆಯನ್ನು ಈ ದೇಶದ ಪ್ರಜೆಗಳು ಉತ್ಸುಕತೆಯಿಂದ ಎದುರು ನೋಡುವಂತಾದರೆ, ನಮ್ಮ ರಾಜಕಾರಣಿ ಮತ್ತು ಆಡಳಿತ ವರ್ಗ ಈ ಸೂಚ್ಯಂಕವನ್ನು ತಮ್ಮ ಯೋಜನೆಗಳ ಪ್ರಾರಂಭದಲ್ಲಿ ಮತ್ತು ಅನುಷ್ಠಾನದಲ್ಲಿ ನೋಡುವಂತಾದರೆ ಎಷ್ಟು ಚೆನ್ನ? ಭಾರತ ಸರ್ಕಾರವೂ ಇದನ್ನು ನಿಯಮಿತವಾಗಿ ಪ್ರಕಟಿಸುವಂತಾಗಲಿ ಎಂಬುದು ಎಲ್ಲರ ಆಶಯವಾಗಿದೆ.

**ಶಶಿಧರ ಡೋಂಗ್ರೆ ಎಂ.**
ನಂ.೪೫೬, ೧೨ನೇ ಮುಖ್ಯರಸ್ತೆ, ಸರಸ್ವತಿಪುರಂ, ಮೈಸೂರು – ೫೭೦ ೦೦೯

# ಚಿಲಿಯ ಕಾವ್ಯನದಿ ಪಾಬ್ಲೊ ನೆರೂಡ



ಚಿಲಿಯ ಪ್ರಕೃತಿಯಿಂದ ಜಾಗತಿಕವಾಗಿ ಹರಿಯುತ್ತಿರುವ ನಿಜವಾದ ನದಿಯಂತೆ ಕಾಣುವ ನೆರೂಡನ ಬದುಕು ಮತ್ತು ಕಾವ್ಯಜಗತ್ತು ಅನೇಕ ಬರಹಗಾರರಿಗೆ, ಕವಿಗಳಿಗೆ ಹೊಸ ಸ್ಫೂರ್ತಿಯನ್ನು ಕೊಟ್ಟಿದೆ. ಬರೆಯುವ ಪ್ರಕ್ರಿಯೆಗೆ ತನ್ನನ್ನು ತಾನೇ ತೆರೆದುಕೊಳ್ಳುವ ಮನಸ್ಥಿತಿಯೊಂದನ್ನು ಹೇಳುತ್ತ ನಾಶವಾಗದ ಭರವಸೆಯ ಜೀವಂತ ಕನಸನ್ನು ತೆರೆದಿಡುತ್ತಾನೆ ನೆರೂಡ – ನಮ್ಮೆಲ್ಲರ ನೆರೂಡ. "ತಲೆಗಳ ಮೇಲೆ ಬಾಂಬ್ ಭಯ ತೂಗುತ್ತಿದೆ ಎಂದು ಗೊತ್ತಿದ್ದೂ, ಅಣುವಿನಾಶದಿಂದ ಯಾರೊಬ್ಬರೂ ಮತ್ತು ಈ ಭೂಮಿಯ ಏನೂ ಉಳಿಯದೆಂದು ಗೊತ್ತಿದ್ದರೂ ಹೀಗೆ ಬರೆಯುತ್ತಿದ್ದೇನೆ. ನನ್ನ ಭರವಸೆ ಬದಲಾಗಿಲ್ಲ. ಈ ಬಿಕ್ಕಟ್ಟಿನ ಹೊತ್ತಿನಲ್ಲಿ, ಕಳವಳದ ಉರಿಯಲ್ಲಿ ಯಾರು ಎಚ್ಚರವಾಗಿರುತ್ತಾರೋ ಅವರ ಕಣ್ಣಿಗೆ ನಿಜದ ಬೆಳಕು ಇಳಿಯುತ್ತದೆ. ನಾವು ಒಟ್ಟಿಗೆ ಮುಂದೆ ಸಾಗುತ್ತೇವೆ. ಈ ಭರವಸೆ ಎಂದೂ ನಾಶವಾಗದು" ಎಂದು ಹೇಳುವ ನೆರೂಡ ಬರೆಯುವ, ಬರೆಯುತ್ತಿರುವ ಅನೇಕ ಯುವ ಕವಿಗಳಿಗೆ, ಬರಹಗಾರರಿಗೆ ಕಾವ್ಯದ ಮಹತ್ವವನ್ನು ತಿಳಿಸಿಕೊಟ್ಟಿದ್ದಾನೆ.

ದಕ್ಷಿಣ ಅಮೇರಿಕಾ, ಮಧ್ಯ ಅಮೇರಿಕಾ, ಮೆಕ್ಸಿಕೊ ಮತ್ತು ಕೆರಿಬಿಯನ್ ದ್ವೀಪವನ್ನು ಒಳಗೊಂಡಿರುವ ಪ್ರದೇಶ ಲ್ಯಾಟಿನ್ ಅಮೇರಿಕಾ. ಈ ಪ್ರದೇಶದ ಒಂದು ಪುಟ್ಟ ದೇಶ ಚಿಲಿ. ಈ ಭಾಗದ ಹಲವಾರು ದೇಶಗಳಂತೆ ಚಿಲಿಯು ಕೂಡ ಹತ್ತೊಂಬತ್ತನೇ ಶತಮಾನದವರೆಗೂ ಸ್ಪೇನ್ ಮತ್ತು ಪೋರ್ಚುಗೀಸರ ಆಕ್ರಮಣಕ್ಕೆ ಒಳಗಾಗಿ ಸ್ವತಂತ್ರ ರಾಷ್ಟ್ರವಾಗಿ ಅಮೇರಿಕಾದಂತಹ ಸಾಮ್ರಾಜ್ಯಶಾಹಿ ರಾಷ್ಟ್ರದ ವಿರುದ್ಧ ನಿರಂತರ ಹೋರಾಟದಲ್ಲಿ ಬೆಳೆದು ಬಂತು. ಈ ಪ್ರಕ್ರಿಯೆಯ ಭಾಗವಾಗಿ ಸೃಷ್ಟಿಯಾದ ಚಿಲಿಯ ಸಾಹಿತ್ಯ ಜಾಗತಿಕ ಅಕ್ಷರಲೋಕದಲ್ಲಿ ಮಹತ್ವದ ಮೈಲುಗಲ್ಲಾಯಿತು. ಇಂತಹ ಸಾಹಿತ್ಯಸೃಷ್ಟಿಯ ಪ್ರಮುಖರಲ್ಲಿ ಪಾಬ್ಲೊ ನೆರೂಡ ಅಗ್ರಗಣ್ಯ.

೧೯೭೦–೭೩ರ ಸಂದರ್ಭದಲ್ಲಿ ಸಮಾಜವಾದಿ ಬೇರುಗಳನ್ನೊಳಗೊಂಡ ಚಿಲಿಯ ಅಲೆಂಡೆ ಸರಕಾರಕ್ಕೆ ಬಹಳ ಕಷ್ಟದ ದಿನಗಳು ಎದುರಾಗಿದ್ದವು. ಚಿಲಿಯ ಸೇನಾಧಿಪತಿಯಾಗಿದ್ದ ಪಿನೋಶೆ ಅಮೇರಿಕಾದ ಕುತಂತ್ರದ ಅಸ್ತ್ರವಾಗಿ ಚಿಲಿ ಅಧ್ಯಕ್ಷನಾಗಿದ್ದ ಅಲೆಂಡೆಯ ಹತ್ಯೆಗೆ ಕಾರಣನಾದ. ಅಲೆಂಡೆಯ ಪ್ರಾಣಸ್ನೇಹಿತನಾಗಿದ್ದ ಕವಿ ನೆರೂಡನ ಹತ್ಯೆಗೂ ಸಂಚು ರೂಪಿಸಿ ಕವಿಯ ಮನೆಗೆ ಆಕ್ರಮಿಸಿದಾಗ ನೆರೂಡ ಅವರಿಗೆ "ಎಲ್ಲಿ ಬೇಕಾದರೂ ಹುಡುಕಿ, ಕವಿತೆಗಿಂತ ಅಪಾಯಕಾರಿಯಾದುದು ಯಾವುದೂ ಇಲ್ಲಿಲ್ಲ" ಎಂದು ಪ್ರಭುತ್ವದ ಪ್ರತಿನಿಧಿಯಾಗಿದ್ದ ಸೇನಾಧಿಕಾರಿಗಳಿಗೆ ಹೇಳುತ್ತಾನೆ. ಇದಾದ ಕೆಲವೇ ದಿನಗಳಲ್ಲಿ ೧೯೭೩ರ ಸೆಪ್ಟೆಂಬರ್ ೨೩ರಂದು ನೆರೂಡ ಅನುಮಾನಾಸ್ಪದವಾಗಿ ಮರಣಹೊಂದಿದ.

ಸಾಹಿತ್ಯಕ್ಕೂ ರಾಜಕಾರಣಕ್ಕೂ ಅಗಾಧ ಅಂತರವಿಟ್ಟುಕೊಂಡು ಬಂದಿರುವ ಭಾರತದಂತಹ ದೇಶದಲ್ಲಿ ನೆರೂಡನ ಕಾವ್ಯ ಮತ್ತು ಅವನ ನಿರಂತರ ರಾಜಕೀಯದ ಬದುಕು ಎರಡೂ ಅಭೇದ್ಯ ಎಂಬ ಸಂಗತಿ ಅಚ್ಚರಿಯೆನಿಸಬಹುದು. ಪ್ರಗತಿಶೀಲ, ನವ್ಯ, ದಲಿತ ಬಂಡಾಯೋತ್ತರ ಕಾಲಗಳಲ್ಲಿಯೂ ಕೂಡ ಪ್ರಸ್ತುತವಾಗಿರುವ ನೆರೂಡನ ಬದುಕು ಮತ್ತು ಕಾವ್ಯದ ಭಾಗಗಳು ಸದ್ಯದ ಪ್ರಭುತ್ವವನ್ನು ವಿಮರ್ಶಿಸಲು, ಸಾಹಿತ್ಯ ಮತ್ತು ಚಳುವಳಿಗಳನ್ನು ಒಳಗೊಳ್ಳುವ ಸಮಾಜಕ್ಕೆ ಸೂಕ್ತ ಮಾರ್ಗದರ್ಶನಗಳನ್ನು ಕೊಡುತ್ತವೆ.

**ಕಾವ್ಯನದಿಯ ಯಾನ**

'ಬಾಲ್ಯದಲ್ಲಿ ಗೆಳೆಯನಿಗೆ ಸಹಾಯ ಮಾಡಲು ಅವನ ಪ್ರಿಯತಮೆಯ ಮನಸು ಒಲಿಸಿಕೊಡಲು ಬರೆದ ಕಾಗದದ ಸಾಲುಗಳೇ ನನ್ನ ಸಾಹಿತ್ಯದ ಮೊದಲ ಬರಹಗಳು' ಎಂದು ನೆನಪಿಸಿಕೊಳ್ಳುವ ನೆರೂಡ, ಪ್ರೇಮವನ್ನು ಕಾವ್ಯಕ್ಕೆ ಉಸಿರಿನಂತೆ ಸ್ವೀಕರಿಸಿ ಬದುಕಿದ. ಕಡಲ ತಡಿಯ ಅಲೆಗಳ ಸೊಬಗನ್ನು ಮೊದಲ ಬಾರಿ ನೋಡಿ ಪರವಶನಾದ ಕವಿ ಅಲ್ಲಿಂದಲೇ ಪ್ರತಿಮೆಗಳ ಹುಡುಕಾಟವನ್ನು ಆರಂಭಿಸಿದ. ಎರಡು ಬೆಟ್ಟಗಳ ನಡುವೆ ಬಂದು ಬಡಿವ ಕಡಲಿನ ಸದ್ದನ್ನು "ವಿಶಾಲವಾದ ವಿಶ್ವಹೃದಯದ ಬಡಿತ" ಎಂದು ಕಾವ್ಯದಲ್ಲಿ ಉದ್ಗರಿಸಿದ.

ತನ್ನ ಬಾಲ್ಯದ ಭಾವಕ್ಕೆ, ಬೌದ್ಧಿಕ ಕಸರತ್ತಿಗೆ, ಕಾವ್ಯದ ಹುಚ್ಚಿಗೆ ಪ್ರೇರಣೆಯನ್ನೊದಗಿಸಿದ ಸಂಗತಿಯೊಂದನ್ನು ತನ್ನ ಆತ್ಮಕತೆಯಲ್ಲಿ ಬರೆಯುತ್ತಾನೆ. ಸುತ್ತಲೂ ಐದುನೂರು ಕಿ.ಮೀ. ವಿಸ್ತಾರವಾಗಿ ಹರಡಿದ, ಯಾವ ನರಪಿಳ್ಳೆಯೂ ಇರದ ದಟ್ಟವಾದ ಅರಣ್ಯದ ಮಧ್ಯದಲ್ಲಿ ವಾಸವಿರುವ ಮೂವರು ವಿಧವೆಯರ ಬಾಯಲ್ಲಿ ಬೋದಿಲೇರ್‌ನ ಹೆಸರು ಕೇಳಿದ್ದು ಮತ್ತು ಆ ವಿಧವೆಯರು ಆತನ 'ಪಾಪದ ಹೂಗಳು' ಕವಿತೆಗಳ ಮೇಲೆ ಇಟ್ಟಿದ್ದ ಅಪಾರ ಆಸಕ್ತಿಭರಿತ ಪ್ರೇಮವನ್ನು ಕಂಡು ನೆರೂಡ ಅಚ್ಚರಿಗೊಂಡಿದ್ದ. ಈ ಘಟನೆ ನೆರೂಡನ ಮನಸಿನಲ್ಲಿ ಕಾವ್ಯಪ್ರೀತಿಯ ಬಗ್ಗೆ ಅತಿ ಹೆಚ್ಚು ಕುತೂಹಲವನ್ನು ಕೆರಳಿಸಿ ಕಾವ್ಯಾಸಕ್ತಿಯನ್ನು ಹೆಚ್ಚಿಸಿತು. "ದುಂಬಿಯ ಹಾಗೆ ಕವಿತೆಗಳು ನನ್ನ ಸುತ್ತಲೂ ಗುಂಯ್‌ಗುಡುತ್ತಿದ್ದವು" ಎಂಬ ಮಾತನ್ನು ರೈಲಿನ ಮೂರನೇ ದರ್ಜೆಯ ಟಿಕೇಟಿನ ಪ್ರಯಾಣದಲ್ಲಿ ಜನರ ಮಧ್ಯೆ ಪ್ರಯಾಣಿಸುವ ಅನುಭವಕ್ಕೆ ಹೋಲಿಸುವ ಈ ಕವಿ ತನ್ನ ಕಾವ್ಯದ ಜನನ ಜನರ ನಡುವೆ, ಅವರದೇ ಮಾತುಗಳಿಂದಲೇ ಹೇಳುತ್ತಾನೆ.

ಕವಿಯಾಗುವುದೆಂದರೆ ಹಸಿದುಕೊಂಡಿರುವುದು ಎಂಬ ಮಾತು ಚಾಲ್ತಿಯಲ್ಲಿರುವ ಕಾಲದಲ್ಲಿ ನೆರೂಡ ಕವಿಯಾಗಲು ಹೊರಟಿದ್ದ. ಬದುಕು, ಪ್ರೀತಿ, ಕೀರ್ತಿ, ಸ್ವಾತಂತ್ರ್ಯಗಳನ್ನು ಕಾವ್ಯದ ಮೂಲಕ ಅನುಭವಿಸಿ ಹಸಿವನ್ನು ಗೆಲ್ಲುವುದು ಮತ್ತು ನೀಗಿಸಿಕೊಳ್ಳುವುದು ಆ ಕಾಲದ ಸಾಹಿತ್ಯಿಕ ಬಿಕ್ಕಟ್ಟಾಗಿತ್ತು. ಇಂತಹ ತಳಮಳದ ಸ್ಥಿತಿಯಲ್ಲಿಯೇ ಭಾವಗೀತೆಗಳನ್ನು ಬರೆದ 'ರೋಮಿಯೋ ಮುರ್ಗಾ'ನ ಕವಿತೆಗಳನ್ನು ಕೇಳಿ ಆನಂದಿಸುತ್ತಿದ್ದ ಅನೇಕ ವಿದ್ಯಾರ್ಥಿ ಕವಿಗಳು ಹಸಿವಿನ ಕ್ಷಣದ ನೋವನ್ನು ಕವಿತೆಗಳ ಸಾಲುಗಳಿಂದ ಹಿತವಾಗಿ ಅನುಭವಿಸಿ ಜ್ವಾಲೆಯಂತೆ ಹೊರ ಹಾಕುತ್ತಿದ್ದರು. ವಸಾಹತುಶಾಹಿ ವ್ಯವಸ್ಥೆಯ ವಿರುದ್ಧ ಕಾವ್ಯದ ಮೂಲಕ ಪ್ರತಿಭಟನೆಯನ್ನು ಬೆಳೆಸಿದ ಚಿಲಿಯ ಕವಿ 'ಡೊಮಿಂಗೋ ಗೋಮೆಝ್'. ಉಳ್ಳವರ ದಾಳಿಗೆ ಗುರಿಯಾಗುವ ಸಾಮಾನ್ಯ ಜನರು ಅನುಭವಿಸುವ ಹಿಂಸೆಯ ವಿರುದ್ಧ ಡೊಮಿಂಗೋನ ಕಾವ್ಯ ಚಿಲಿಯ ವಿದ್ಯಾರ್ಥಿ ಸಂಘಟನೆಗಳಿಗೆ ಪ್ರಮುಖ ಅಸ್ತ್ರವಾಗಿತ್ತು.

"ವಿಶ್ವವಿದ್ಯಾಲಯಗಳು ಅರಾಜಕತೆಯನ್ನು ಸೃಷ್ಟಿಸುವ

ನೂರಂದಪ್ಪ ಪಡಶೆಟ್ಟಿ

# ದೇವರೂ ಅರಿತ ಸತ್ಯ



**ಕ**ತ್ತರಿಸುವ ಹುಲ್ಲ ಕಾಯಕದ
ಚೆನ್ನನ ಅಂಬಲಿಯ,
ದಾಸನ ಅರಿವೆಯ ಅಂಚಿಗೆ
ಪಾದಪೂರಿ ಕುಳಿತನಂತೆ
ದೇವರು,
ಅವನಿಗೆ ದೀಪ ಧೂಪಾರತಿಯ ಹಂಗಿಲ್ಲ!

ಹೊರಗೆ ನಿಂತ ಕನಕನ ಹಾಡಿಗೆ
ಕುಂಬಾರನ ಮಣ್ಣ ತುಳಿತಕ್ಕೆ
ಮರುಳಾಗಿ ತಿರುಗಿ ನಿಂತನಂತೆ
ದೇವರು,
ಅವನಿಗೆ ಮಂತ್ರಾಕ್ಷತೆ ಪೂಜೆಗಳ
ಅಗತ್ಯವಿಲ್ಲ!




ನೇಗಿಲ ಕುಳದಲ್ಲಿ, ಪಿಕಾಶಿ ಗುದ್ದಲಿಗಳ ಬಾಯಲ್ಲಿ
ಹುಲ್ಲು ಅರಸುತ್ತಾ ಕುಳಿತನಂತೆ
ದೇವರು,
ಅವನಿಗೆ ಬೆವರ ಸಾಂಗತ್ಯದ
ಜರೂರತ್ತಿದೆ!
ಅವನು ದೇವರಾದದ್ದೇ ಹಾಗೆ!

ಅವನೀಗ
ಗಂಟೆ ಜಾಗಟೆಗಳ ಸಂಭ್ರಮದಲ್ಲಿ ತನ್ನ ಮರೆತವರ
ಅಗಲಿ ದೂರ
ಹೋಗಿದ್ದಾನೆ!

**ಡಾ|| ಯಾಕೊಳ್ಳಿ ವೈ. ಎಂ.**
ಉಪನ್ಯಾಸಕರು, ಸವದತ್ತಿ

ಕೇಂದ್ರಗಳು" ಎಂದು ಹೇಳಿದ ತತ್ವಜ್ಞಾನಿ ವಿಲ್ ಡ್ಯುರಾಂಟ್‌ನ ಮಾತಿನಂತೆ ಅರಾಜಕತೆಯ ಮನೋಭಾವ ಬೆಳೆಸಿಕೊಂಡ ವಿದ್ಯಾರ್ಥಿಗಳಲ್ಲಿ ನೆರೂಡ ಕೂಡ ಒಬ್ಬನಾಗಿದ್ದ. ಪ್ರಭುತ್ವವನ್ನು ವಿರೋಧಿಸಲು ಮೊನಚಾದ ವ್ಯಂಗ್ಯವನ್ನು ಪ್ರತಿಧ್ವನಿಸುವ ಪ್ರತಿಮೆಗಳನ್ನು ಕಾವ್ಯಕ್ಕೆ ಬೆರೆಸುವ ಸೃಜನಶೀಲತೆ ಇಲ್ಲಿಂದಲೇ ಆರಂಭವಾಯಿತು. ಈ ಸಂದರ್ಭದಲ್ಲಿ ರಾಜಕೀಯ ಮತ್ತು ಸಾಹಿತ್ಯಿಕ ಉಗ್ರಗಾಮಿಯೆಂದು ಕರೆಸಿಕೊಳ್ಳುತ್ತಿದ್ದ 'ಕ್ಲಾರಿಡಾಡ್ ರಿವ್ಯೂ' ಪತ್ರಿಕೆಗೆ ಸೇರಿಕೊಂಡೆ ಎಂದು ನೆರೂಡ ಹೇಳಿಕೊಳ್ಳುತ್ತಾನೆ. ಹಸಿದವರಿಗೆ ಅನ್ನ ಒದಗಿದ ಕಾಲ, ಅದಕ್ಕಾಗಿ ಹೋರಾಡುವ ಸಮಯಗಳಲ್ಲಿ ಕವಿಯ ಚಿತ್ತದಲ್ಲಿ ಹೊಳೆವ ಸಾಲುಗಳು ಅಮೂಲ್ಯ ರತ್ನಗಳು. ಆ ಸಾಲುಗಳೆಲ್ಲವೂ ಹೊಸದೊಂದು ಬದುಕನ್ನು ಕಟ್ಟಿಕೊಡಬಲ್ಲಷ್ಟು ಸಮರ್ಥ ಧ್ವನಿಗಳಾಗಿ ಕವಿತೆಗಳ ಮೂಲಕ ಪ್ರಕಾಶಿಸುತ್ತವೆ. ಇಂತಹ ಸಾಲುಗಳನ್ನು ಬರೆದ ಕವಿಯ ವ್ಯಕ್ತಿತ್ವವು ತನ್ನ ಸುತ್ತಲೂ ಕವಿದಿರುವ ಹೋರಾಟದ ವಾತಾವರಣವನ್ನು ಬೆಳಗುತ್ತದೆ. ಇಂತಹ ಸ್ಥಿತಿಯಲ್ಲಿಯೇ ಕವಿಯಿಂದ ಆಶಾಕಿರಣ ತರುವ ಪ್ರಯತ್ನ ನಡೆಯುತ್ತದೆ. ಇಂತಹ ಪ್ರತಿಭೆ ಹೊಂದಿರುವ ಕವಿಯ ಸೃಜನಶೀಲತೆಯನ್ನು "ಅದೃಶ್ಯದ ಚಿಟ್ಟೆ ಹರಿಬಿಡುವ ಕವಿ" ಎಂದು ನೆರೂಡ ಹೇಳುತ್ತಾನೆ. ಇದಕ್ಕೆ ಸೂಕ್ತ ಉದಾಹರಣೆ 'ಆಲ್ಬರ್ಟೊ ರೋಜಾಸ್ ಗಿಮಿನೆಝ್' ಈ ಕವಿ ತನ್ನ ಕವಿತೆಗಳನ್ನು ಜೇಬಿನಲ್ಲೇ ಇಟ್ಟುಕೊಂಡು ಮಳೆ, ಬಿಸಿಲು, ಬಿರುಗಾಳಿಯಲ್ಲಿ ಕರಗಿಹೋದಂತೆ ಅದೃಶ್ಯವಾದ. ಇವನ ಹೆಸರು ಉಚ್ಚರಿಸಿದ ಕ್ಷಣದಲ್ಲಿ ಕವಿಗಳೆಲ್ಲರಿಗೆ ಅದೃಶ್ಯವಾಗಿದ್ದ ಸಮಾನತೆಯ ಕನಸುಗಳು ಕೈಹಿಡಿದು ನಡೆಸುತ್ತಿರುವ ಅನುಭವ ಪಡೆಯುತ್ತಿದ್ದರು.

**ಕಾವ್ಯ, ವೈಚಾರಿಕತೆ, ಪ್ರೇಮ**

"ವೈಚಾರಿಕತೆಯು ಜಗತ್ತನ್ನು ಆಳಬೇಕು" ಎನ್ನುವ ಹಂಬಲ ನೆರೂಡನದಾಗಿತ್ತು. ಕವಿಗೆ ವೈಚಾರಿಕತೆ ಅಂದರೆ ಅದೊಂದು ಸಿದ್ಧಾಂತದ ಪ್ರಶ್ನೆಯಾಗಿಬಿಡುತ್ತದೆ. ಆಲೋಚನಾ ಕ್ರಮದ ದಾರಿಗಳಲ್ಲಿ ವೈಚಾರಿಕತೆಯ ಮನೋಧರ್ಮವು ಕವಿಯ ಪ್ರಮುಖ ಆಯ್ಕೆಯಾಗಬೇಕು. ನೆರೂಡನಿಗೆ ಇದು ತಿಳಿದುಬಂದಿದ್ದು ಕಮ್ಯುನಿಸ್ಟ್ ವಿಚಾರಧಾರೆಗಳಿಂದ. ಈ ಮನಸ್ಥಿತಿಯಿಂದ ಮಾತ್ರ ಎಲ್ಲರನ್ನೂ ಪ್ರೀತಿಸುವುದಕ್ಕೆ ಸಾಧ್ಯ ಎಂಬ ಅಭಿಪ್ರಾಯ ಕವಿಯಲ್ಲಿ ಬೆಳೆಯಿತು. ನೀತ್ಸೆ ಹೇಳುವ ಹಾಗೆ "ಒಬ್ಬರನ್ನೇ ಪ್ರೀತಿಸುವುದು ಮೃಗಪ್ರವೃತ್ತಿ". ಆದ್ದರಿಂದ ಕವಿಯ ವಿಚಾರ, ಕವಿಯ ಭಾವ, ಆಲೋಚನೆಯಿಂದ ಬರುವ ಕಾವ್ಯವು ಸಮಷ್ಟಿ ಪ್ರೀತಿಯ ಅಪ್ಪುಗೆಗೆ ಪಾತ್ರವಾಗಬೇಕು ಎಂಬುದು ನೆರೂಡನ ಅಭಿಪ್ರಾಯವಾಗಿತ್ತು.

ಪ್ರತಿ ಉಸಿರನ್ನು ಕಾವ್ಯರೂಪದಲಿ ಹೊರಬಿಡುವ ಅಭ್ಯಾಸ ಮಾಡಿಕೊಂಡಿದ್ದ ನೆರೂಡ ದಿನಕ್ಕೆ ನಾಲ್ಕೈದು ಕವಿತೆಗಳನ್ನು ಬರೆಯುತ್ತಿದ್ದ. ೧೯೨೩ರಲ್ಲಿ ತನ್ನ ಮೊದಲ ಕವನ ಸಂಕಲನ 'ಕ್ರೆಪುಸ್ಕುಲಾರಿಯೋ' (ಮುಸ್ಸಂಜೆಯ ಹೊಳಪು) ಪ್ರಕಟಿಸಲು ತನ್ನ ಗಡಿಯಾರ, ಫರ್ನಿಚರ್, ಬಣ್ಣದ ಗೌನು ಇತ್ಯಾದಿಗಳನ್ನು ತನ್ನವಲ್ಲವೆಂದು ತೀರ್ಮಾನಿಸಿದಾಗ ಮೊದಲ ಸಂಕಲನ ಪ್ರಕಟಣೆ ಸಾಧ್ಯವಾಯಿತು. ತನ್ನ ಮೊದಲ ಕವನ ಸಂಕಲನದ ಬಗ್ಗೆ ನೆರೂಡ ಹೇಳುವ ಮಾತು ಎಲ್ಲ ಕವಿಗಳ ಅನುಭವಕ್ಕೂ ಬಂದಿರುವಂಥದ್ದು: "ಕವಿಯ ಮಾತುಗಳನ್ನು ಇತರ ಭಾಷೆಗಳೆಂಬ ಲೋಟಗಳಿಗೆ ವೈನಿನ ಹಾಗೆ ಸುರಿಯಲೂಬಹುದು. ಆ ಮಧುಗೀತೆ ತನ್ನ ಪರಿಮಳವನ್ನು ಇತರ ನಾಡು–ನುಡಿಗಳಲ್ಲಿ ಹರಡಲೂಬಹುದು. ಹಾಳೆಗಳು ಗರಿಗರಿಯಾಗಿ ಅದರ ಮೇಲೆ ಅಕ್ಷರಗಳನ್ನು ಮುದ್ರಿಸಿರುವ ಇಂಕು ಇನ್ನೂ ತಾಜಾ ಆಗಿರುವಾಗ ಪುಸ್ತಕವನ್ನು ತುಂಬಿಕೊಳ್ಳುವ ಮರುಳು ಮಾಟದ ಉನ್ಮಾದದ ಕ್ಷಣ ಇದೆಯಲ್ಲ, ಅದು ಎತ್ತರವನ್ನು ಗೆದ್ದು ಏರಿಯಾದ ಮೇಲೆ ಅಲ್ಲಿ ಮೊದಲ ಹೂವು ಅರಳುವ ಸದ್ದು ಕೇಳಿಸಿಕೊಂಡಂತೆ ರೆಕ್ಕೆಗಳ ಬಡಿತ ಕಿವಿ ತುಂಬಿದಂತೆ ಇರುತ್ತದೆ. ಆ ಕ್ಷಣ ಕವಿಯ ಬದುಕಿನಲ್ಲಿ ಒಮ್ಮೆ ಮಾತ್ರ ಬರುತ್ತದೆ." ನೆರೂಡನ ಮೊದಲ ಕವನ ಸಂಕಲನದಲ್ಲಿ 'ಫೇರ್ವೆಲ್' ಎಂಬ ಕವಿತೆ ಆ ಕಾಲಕ್ಕೆ ಬಹಳ ಪ್ರಸಿದ್ಧವಾಯಿತು. ಕನ್ನಡದಲ್ಲಿ 'ನಿತ್ಯೋತ್ಸವ' ಕವಿತೆಯ ಮೂಲಕ ಕೆ. ಎಸ್. ನಿಸಾರ್ ಅಹಮದ್ ಅವರನ್ನು 'ನಿತ್ಯೋತ್ಸವದ ಕವಿ' ಎಂದು ಗುರುತಿಸಿದ ಹಾಗೆ ಚಿಲಿಯಲ್ಲಿ ನೆರೂಡನನ್ನು 'ಫೇರ್ವೆಲ್ ಕವಿ' ಎಂದು ಗುರುತಿಸಲು ಆರಂಭಿಸಿದರು. ಈ ರೀತಿಯ ಸಾಹಿತ್ಯಿಕ ಐಡೆಂಟಿಟಿಯನ್ನು ಕಟುವಾಗಿ ಟೀಕಿಸಿದ ನೆರೂಡ "ಒಂದೇ ಕವಿತೆಯಿಂದ

ಕವಿಯನ್ನು ಗುರುತಿಸುವುದು ಕವಿಗೆ ಅಲರ್ಜಿಯನ್ನು ಉಂಟುಮಾಡುತ್ತದೆ. ಅಲ್ಲದೆ, ಓದುಗರು ಆ ಕವಿಯನ್ನು ಏಕೈಕ ಕ್ಷಣವೊಂದಕ್ಕೆ ಶಾಶ್ವತವಾಗಿ ಬಂಧಿಸುವುದಕ್ಕೆ ಹೋಗುತ್ತಾರೆ. ಹಾಗಾಗಿ ಕವಿ ಮತ್ತು ಓದುಗ ಈ ಎರಡೂ ಸಂಗತಿಗಳನ್ನು ಮೀರಬೇಕು" ಎಂದು ಕವಿಯ ಜನಪ್ರಿಯತೆಯ ಸ್ವರೂಪದ ಬಗ್ಗೆ ಹೇಳುತ್ತಾನೆ.

ತನ್ನ ಮೇಲೆ ಪ್ರಭಾವ ಬೀರಿದ ಯಾವುದೇ ಬರಹಗಾರನಿರಲಿ ಅವರನ್ನು ಸಂಪರ್ಕಿಸುವ ಸಾಹಸವನ್ನು ನೆರೂಡ ತನ್ನ ಕಾವ್ಯಜೀವನದುದ್ದಕ್ಕೂ ಬೆಳೆಸಿಕೊಂಡು ಬಂದಿದ್ದ. ತನ್ನ ಆತ್ಮಕತೆಯಲ್ಲಿ ಇಂತಹ ಸುಮಾರು ನಾಲ್ಕುನೂರಕ್ಕೂ ಹೆಚ್ಚು ಬರಹಗಾರರ ಬಗ್ಗೆ ಪ್ರಸ್ತಾಪ ಮಾಡುತ್ತಾನೆ. ಇಪ್ಪತ್ತನೇ ಶತಮಾನದ ಪೂರ್ವಾರ್ಧ ಕಾಲಕ್ಕೆ ವಿಮರ್ಶಕರ ನಿರ್ಲಕ್ಷ್ಯಕ್ಕೆ ಒಳಗಾದ ಉರುಗ್ವೆಯ ಕವಿ ಸಬಾತ್ ಎರ್ಕಾಸ್ಟಿಗೆ ಪತ್ರ ಬರೆದು ತನ್ನ ಕಾವ್ಯಸೃಷ್ಟಿಯ ಬಗ್ಗೆ ಅವನ ಅಭಿಪ್ರಾಯಗಳನ್ನು ಪಡೆಯುತ್ತಾನೆ. "ಮನುಷ್ಯ ಮಾತ್ರವಲ್ಲ, ನಿಸರ್ಗದ ನಿಗೂಢ ಶಕ್ತಿಗಳನ್ನೂ ಒಳಗೊಳ್ಳುವ ಹಾಗೆ ಕವಿತೆ ಬರೆಯುವ ಹುಮ್ಮಸ್ಸನ್ನು ಸಬಾತ್ ಎರ್ಕಾಸ್ಟಿಯಿಂದ ಪಡೆದ ನೆರೂಡ, ಮನುಷ್ಯನ ಒಳಸಾಮರ್ಥ್ಯವನ್ನು ಕುರಿತ ಕಾವ್ಯರಚನೆಯ ಮಹತ್ವಾಕಾಂಕ್ಷೆಯ ಕನಸುಗಳನ್ನು ಎರ್ಕಾಸ್ಟಿಯ ಕಾವ್ಯದಲ್ಲಿ ಕಂಡಿದ್ದ. ಆದರೆ ಎರ್ಕಾಸ್ಟಿಯಿಂದ ಸ್ಫೂರ್ತಿ ಪಡೆದನೇ ಹೊರತು ಅವನ ಶೈಲಿಯನ್ನು ಬಳಸಲು ಮನಸು ಒಪ್ಪದೇ ಹೊಸ ಲೋಕವೊಂದನ್ನು ಹೆಣೆಯಲು ಕಾವ್ಯದಲ್ಲಿ ಪ್ರಯತ್ನಿಸಿದ. ಇದರ ಫಲವೇ 'ಇಪ್ಪತ್ತು ಪ್ರೇಮ ಕವಿತೆಗಳು ಮತ್ತು ಒಂದು ವಿಷಾದ ಗೀತೆ' ಸಂಕಲನ. ಈ ಕವಿತೆಗಳಲ್ಲಿ ತೀವ್ರ ವಿಷಾದವಿದ್ದರೂ ಬದುಕಿರುವ ಖುಷಿ ಇಲ್ಲಿ ಕಂಡುಬರುತ್ತದೆ ಎಂದು ತನ್ನ ಕವನ ಸಂಕಲನದ ಬಗ್ಗೆ ಹೇಳುತ್ತಾನೆ.




ಸಕ್ರಿಯ ಕಾವ್ಯರಚನೆಯ ಜೊತೆಗೆ ಚಿಲಿಯ ರಾಜಕಾರಣಕ್ಕೆ ಕಾಲಿಟ್ಟ ನೆರೂಡ ಶಾಸಕನಾಗಿ, ಮಂತ್ರಿಯಾಗಿ, ಚಿಲಿಯ ಅಧ್ಯಕ್ಷ ಅಭ್ಯರ್ಥಿ ಹಂತದವರೆಗೂ ಬೆಳೆದ. ಶ್ರೀಮಂತ ಬಂಡವಾಳಶಾಹಿ ಪ್ರಭುತ್ವಗಳನ್ನು ವಿರೋಧಿಸಿ ಬೆಳೆದ ನಾಯಕರೆಲ್ಲರನ್ನೂ ಅಮೇರಿಕ ಪ್ರಭುತ್ವವು ನುಂಗಿಹಾಕಿದ ನಿದರ್ಶನಗಳು ನೆರೂಡನ ಮುಂದೆ ಸಾಕ್ಷಿಯಿದ್ದವು. ಕಾರ್ಮಿಕ ಸಂಘಟನೆಗಳು ಛಿದ್ರಗೊಂಡ, ನಿರುದ್ಯೋಗದ ಪ್ರವಾಹ ಬಡಿದ ಸಂದರ್ಭದಲ್ಲಿ ಚಿಲಿಯ ರಾಜಕೀಯಕ್ಕೆ ಕಾಲಿಟ್ಟು ಬೀದಿಯ ಘಟನೆಗಳ ಸದ್ದಿಗೆ ಪ್ರತಿಕ್ರಿಯೆಯಾಗಿ ಸಂತೋಷ ಮತ್ತು ಪ್ರೀತಿ ತುಂಬಿದ ಬದುಕನ್ನು ದೊರಕಿಸಿಕೊಡಲು ಪ್ರಯತ್ನಿಸಿದ.

ನೆರೂಡನ ಬರವಣಿಗೆಯ ಮೊನಚನ್ನು, ಮಹತ್ವವನ್ನು ಅರಿತ ಅನೇಕರು ಪ್ಯಾರಿಸ್‌ಗೆ ತೆರಳಲು ಸೂಚಿಸುತ್ತಿದ್ದರು. ಆದರೆ ಪ್ಯಾರಿಸ್‌ನಲ್ಲಿದ್ದ ಬಹುತೇಕ ಲೇಖಕರು, ಕವಿಗಳು ತಮ್ಮ ಮೂಗಿನವರೆಗೂ ಅಧಿಕಾರಶಾಹಿಯ ಭಾಗವಾಗಿ ಅಭಿವ್ಯಕ್ತಿಸುತ್ತಿದ್ದಾರೆಂಬ ಸ್ಪಷ್ಟ ಅರಿವು ನೆರೂಡನಿಗಿತ್ತು. ಈ ಕಾರಣದಿಂದ ತನ್ನ ಗೆಳೆಯನ ಸಹಾಯದಿಂದ ಚಿಲಿಯ ರಾಯಭಾರಿಯಾಗಿ ಶ್ರೀಲಂಕಾ, ಬಾಂಗ್ಲಾ, ಭಾರತ, ಸಿಂಗಪೂರ್, ರಂಗೂನ್ ಇನ್ನೂ ಮುಂತಾದ ದೇಶಗಳಲ್ಲಿ ಸೇವೆ ಸಲ್ಲಿಸಿ ಜಾಗತಿಕವಾಗಿ ಹರಡಿಕೊಂಡಿದ್ದ ರಾಜಕೀಯ, ಸಾಮಾಜಿಕ ಸ್ಥಿತಿಯ ಅರಿವನ್ನು ವಿಸ್ತರಿಸಿಕೊಂಡು ಕಾವ್ಯದ ಜೊತೆ ಸೈದ್ಧಾಂತಿಕ ಲೋಕವೊಂದನ್ನು ಸೃಷ್ಟಿಸಿಕೊಂಡ. ಎಲ್ಲ ದೇಶದ ಅನೇಕ ರೀತಿಯ ಭಿನ್ನ ಭಿನ್ನ ಲೇಖಕರನ್ನು ಕಂಡ. ಸ್ಥಿರವಾಗಿ ಬರೆಯುತ್ತಿರುವವರು, ಎಷ್ಟು ಬರೆದರೂ ಮನಸ್ಸು ಖಾಲಿಯಾಗದವರು, ಹೇರಳವಾಗಿ ಬರೆಯುವವರು ಇನ್ನೂ ಅನೇಕ ರೀತಿಯ ಬರಹಗಾರರನ್ನು ನೋಡಿದ್ದಷ್ಟೇ ಅಲ್ಲದೆ ಅವರನ್ನೂ ಭೇಟಿಯಾಗಿ ಕಾವ್ಯಸಂವಾದವನ್ನು ಮಾಡಿದ. ಈ ಸಂದರ್ಭದಲ್ಲಿಯೇ ಭಾರತವನ್ನು ಕುರಿತು ಬರೆಯುತ್ತಾ, "ಅಬ್ಬರದ ಭಾಷೆಯಲ್ಲಿ ಧಾರ್ಮಿಕ ಕಸರತ್ತುಗಳಲ್ಲಿ ಸಂಭ್ರಮಿಸುವವರು" ಎನ್ನುತ್ತಾ ಇಲ್ಲಿನ ಧಾರ್ಮಿಕತೆ, ಜಮೀನ್ದಾರಿ ಮತ್ತು ಬ್ರಿಟಿಷರು ಸೃಷ್ಟಿಸಿದ ಶೋಷಣೆಯ ಸ್ವರೂಪವನ್ನು ದಾಖಲಿಸುತ್ತಾನೆ.

ಯೌವನದ ಕಾಲವನ್ನು ಆವೇಗ, ಆತುರತೆಯಿಂದಲೇ ಕಳೆದ ನೆರೂಡ ಹೆಣ್ಣಿನ ಸಾಂಗತ್ಯದಲ್ಲಿ ಪ್ರೇಮದ ಮಹತ್ವವನ್ನು ಅರಿತ. ಪ್ರೇಮಕಾವ್ಯದಂತೆ ಬದುಕಿದ ತನ್ನ ಬದುಕನ್ನು ಕವಿತೆಗಳನ್ನಾಗಿಸಿದ. ತಾನು ಪ್ರೀತಿಸಿದ ಹೆಣ್ಣಿನ ಹಿಂದೆ ಅಲೆಮಾರಿಯಂತೆ ತಿರುಗಿದ್ದು, ತನ್ನನ್ನು ಅತಿಯಾಗಿ ಪ್ರೀತಿಸುವ ಹೆಣ್ಣಿನಿಂದ ತಪ್ಪಿಸಿಕೊಳ್ಳಲು ಹರಸಾಹಸ ಪಟ್ಟಿದ್ದು, ಯಾವುದು ನಿಜವಾದ ಸ್ತ್ರೀಜಗತ್ತು, ಯಾವುದು ವಸಾಹತುಶಾಹಿ ಸೃಷ್ಟಿಸಿದ ಸ್ತ್ರೀಜಗತ್ತು ಎಂಬ ಅರಿವನ್ನು ಪ್ರೇಮದ ಅನುಭವಗಳಿಂದಲೇ ತಿಳಿದ ನೆರೂಡ ತನ್ನ ಎಲ್ಲ ನೆನಪುಗಳನ್ನೂ ಪ್ರಾಮಾಣಿಕವಾಗಿ ಬಿಚ್ಚಿಡುತ್ತಾನೆ. ಪ್ರೀತಿಯಲ್ಲಿ ಪೆಟ್ಟು ತಿಂದ ಭಯೋತ್ಪಾದಕಿ ಎಂದು ನೆರೂಡನಿಂದ ಕರೆಸಿಕೊಂಡ ಬರ್ಮಾದ ಹೋಸಿ ಬ್ಲಿಸ್, ಸಿಲೋನಿನ ಮಲ ಹೊರುವ ಚೆಲುವೆ, ಸಿಂಗಾಪೂರ್‌ನ ಪ್ರಯಾಣದಲ್ಲಿ ಭೇಟಿಯಾದ ಯಹೂದಿ ಹೆಣ್ಣು ಕ್ರೂಸಿ, ದೀರ್ಘ ಕಾಲದ ಗೆಳತಿ ಮಾರ್ಗರಿಟಾ ಆಗ್ಯುಯರಿ ಮತ್ತು ಒಂಟಿತನ ಆಳವಾಗಿ ಕಾಡಿದಾಗ ಮದುವೆಯಾಗಲು ನಿರ್ಧರಿಸಿದಾಗ ಜೊತೆಯಾದವಳು ಸಂಗಾತಿ ಡಚ್ ಹುಡುಗಿ ಮಾರಿಯಾ ಆಂಟಾಯ್ನೆಟಾ ಹಗೆನಾರ್. ತನ್ನ ಈ ಪ್ರೇಮಜಗತ್ತನ್ನು ಅವನ ಕಾವ್ಯದಲ್ಲಿ ಅತಿ ಹೆಚ್ಚು ಪ್ರಸ್ತಾಪಿಸುತ್ತಾನೆ. ಸಂಪ್ರದಾಯಸ್ಥ, ನಿಯಮಬದ್ಧ ಪ್ರೇಮ ಜಗತ್ತಿಗಿಂತ ನೆರೂಡ ಕಟ್ಟಿಕೊಂಡ ಪ್ರೇಮಜಗತ್ತನ್ನು ಅವನ ಕವಿತೆಗಳಲ್ಲಿಯೇ ಕಾಣುವುದು ಸೂಕ್ತವೆನಿಸುತ್ತದೆ.

ತನ್ನ ವ್ಯಕ್ತಿತ್ವ ಮತ್ತು ಕಾವ್ಯಕಲೆಯ ಮೇಲೆ ಪ್ರಭಾವ ಬೀರಿದ ಅನೇಕ ಬರಹಗಾರರನ್ನು, ಕವಿಗಳನ್ನು ನೆರೂಡ ಪ್ರಸ್ತಾಪಿಸುತ್ತಾನೆ. ತನ್ನ ವಿದ್ಯಾರ್ಥಿ ಜೀವನದಲ್ಲಿ ಅರಾಜಕತೆಯ ಮನಃಸ್ಥಿತಿಗೆ ಪ್ರೇರಣೆ ನೀಡಿದ ಹುವಾನ್ ಗನ್ದಲ್ಫೊ, ಕ್ರಾಂತಿಕಾರಿ ಸಾಹಿತ್ಯಕ್ಕೆ ಪ್ರೇರಣೆ ನೀಡಿದ ರಾಬರ್ಟೋ ಮೆಜಾಪ್ರಂಟೀಸ್, ಬಟ್ಟೆ ತೊಡುವ, ಸಿಗರೇಟು ಸೇದುವ ಮತ್ತು ಬರೆಯುವ ಶೈಲಿಗಳ ಮೇಲೆ ರೋಜಾಸ್‌ನ ಪ್ರಭಾವ, ವ್ಯವಸಾಯ ಮಾಡಿಕೊಂಡೇ ಮಹತ್ವದ ಕೃತಿಗಳನ್ನು ಬರೆದ ಬ್ಯುನೆಸ್ ಐರಿಸ್‌ನ ಲೇಖಕ ಓಮರ್ ವಿನೋನ ಪ್ರಭಾವ, ಆಳುವ ವರ್ಗಕ್ಕೆ ಸೇರಿದ ಪ್ಯಾರಿಸ್ ಲೇಖಕ ವಿಸೆಂಟೆ ಹೂಯಿಡೊಬ್ರೊ, ಸ್ಪೇನಿನ ಸೃಜನಶೀಲ ಕವಿ ರೂಬೆನ್ ಡಾರಿಯೋ... ಹೀಗೆ ಅನೇಕ ಕವಿಗಳು, ಬರಹಗಾರರು ತನ್ನ ಕಾವ್ಯಜಗತ್ತಿಗೆ ಕೊಟ್ಟ ಕೊಡುಗೆಯನ್ನು ನೆರೂಡ ದಾಖಲಿಸಿದ್ದಾನೆ. ಕವಿತ್ವದ ಪರಿಪೂರ್ಣತೆಯ ಕೇಂದ್ರಕ್ಕೆ ಹೋಗಲು ಇಂತಹ ಪ್ರೇರಣೆಗಳು ಮಹತ್ವದ್ದಾಗಿ ಕಂಡುಬಂದಿವೆ.

ಚಿಲಿಯ ಪ್ರಕೃತಿಯಿಂದ ಜಾಗತಿಕವಾಗಿ ಹರಿಯುತ್ತಿರುವ ನಿಜವಾದ ನದಿಯಂತೆ ಕಾಣುವ ನೆರೂಡನ ಬದುಕು ಮತ್ತು ಕಾವ್ಯಜಗತ್ತು ಅನೇಕ ಬರಹಗಾರರಿಗೆ, ಕವಿಗಳಿಗೆ ಹೊಸ ಸ್ಫೂರ್ತಿಯನ್ನು ಕೊಟ್ಟಿದೆ. ಬರೆಯುವ ಪ್ರಕ್ರಿಯೆಗೆ ತನ್ನನ್ನು ತಾನೇ ತೆರೆದುಕೊಳ್ಳುವ ಮನಃಸ್ಥಿತಿಯೊಂದನ್ನು ಹೇಳುತ್ತ ನಾಶವಾಗದ ಭರವಸೆಯ ಜೀವಂತ ಕನಸನ್ನು ತೆರೆದಿಡುತ್ತಾನೆ ನೆರೂಡ – ನಮ್ಮೆಲ್ಲರ ನೆರೂಡ "ತಲೆಗಳ ಮೇಲೆ ಬಾಂಬ್ ಭಯ ತೂಗುತ್ತಿದೆ ಎಂದು ಗೊತ್ತಿದ್ದೂ, ಅಣುವಿನಾಶದಿಂದ ಯಾರೊಬ್ಬರೂ ಮತ್ತು ಈ ಭೂಮಿಯ ಏನೂ ಉಳಿಯದೆಂದು ಗೊತ್ತಿದ್ದರೂ ಹೀಗೆ ಬರೆಯುತ್ತಿದ್ದೇನೆ. ನನ್ನ ಭರವಸೆ ಬದಲಾಗಿಲ್ಲ. ಈ ಬಿಕ್ಕಟ್ಟಿನ ಹೊತ್ತಿನಲ್ಲಿ, ಕಳವಳದ ಉರಿಯಲ್ಲಿ ಯಾರು ಎಚ್ಚರವಾಗಿರುತ್ತಾರೋ ಅವರ ಕಣ್ಣಿಗೆ ನಿಜದ ಬೆಳಕು ಇಳಿಯುತ್ತದೆ. ನಾವು ಒಟ್ಟಿಗೆ ಮುಂದೆ ಸಾಗುತ್ತೇವೆ. ಈ ಭರವಸೆ ಎಂದೂ ನಾಶವಾಗದು" ಎಂದು ಹೇಳುವ ನೆರೂಡ ಬರೆಯುವ, ಬರೆಯುತ್ತಿರುವ ಅನೇಕ ಯುವ ಕವಿಗಳಿಗೆ, ಬರಹಗಾರರಿಗೆ ಕಾವ್ಯದ ಮಹತ್ವವನ್ನು ತಿಳಿಸಿಕೊಟ್ಟಿದ್ದಾನೆ.

**ನೂರಂದಪ್ಪ ಪಡಶೆಟ್ಟಿ**
ಸಂಶೋಧನ ವಿದ್ಯಾರ್ಥಿ, ಕನ್ನಡ ವಿಭಾಗ
ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ, ಕಲಬುರಗಿ



ಸಿರಿಸೇನಾ



ವಿಕ್ರಮಸಿಂಗೆ



ರಾಜಪಕ್ಸೆ

# ನೆರೆಯ ಶ್ರೀಲಂಕಾದಲ್ಲಿ ರಾಜಕೀಯ ಗೊಂದಲ




**ಭಾ**ರತದ ನೆರೆಯ ರಾಷ್ಟ್ರಗಳಲ್ಲಿ ಒಂದಾದ ಶ್ರೀಲಂಕಾದಲ್ಲಿ ಅಧ್ಯಕ್ಷ ಮೈತ್ರಿಪಾಲ ಸಿರಿಸೇನಾರ ದಿಢೀರ್ ರಾಜಕೀಯ ತಂತ್ರದಿಂದಾಗಿ ದೇಶದಲ್ಲಿ ಪ್ರಜಾಪ್ರಭುತ್ವದ ಕಗ್ಗೊಲೆಯಾಗಿ ಗೊಂದಲ ಸೃಷ್ಟಿಯಾಗಿದೆ. ಅಕ್ಟೋಬರ್ ತಿಂಗಳ ೨೬ರಂದು ಪಾರ್ಲಿಮೆಂಟಿನಲ್ಲಿ ಬಹುಮತ ಹೊಂದಿ ಅಧಿಕಾರದಲ್ಲಿದ್ದ ಪ್ರಧಾನಿ ವಿಕ್ರಮಸಿಂಗೆಯವರನ್ನು ಅಧಿಕಾರದಿಂದ ಕಿತ್ತೊಗೆದು ರಾಜಪಕ್ಸೆಗೆ ಪ್ರಧಾನಿ ಪಟ್ಟ ಕಟ್ಟಿ , ಆತ ಬಹುಮತ ಪಡೆಯಲು ಅವಕಾಶ ವಾಗುವಂತೆ ನವೆಂಬರ್ ೧೬ರ ವರೆಗೆ ದೇಶದ ಪಾರ್ಲಿಮೆಂಟನ್ನು ಅಮಾನತುಗೊಳಿಸಿದ್ದೆ ಸಿರಿಸೇನಾ ಮಾಡಿದ ಅಕ್ರಮ. ರಾಜಪಕ್ಸೆ ಶ್ರೀಲಂಕಾದ ರಾಜಕೀಯ ರಂಗದಲ್ಲಿ ಹೊಸಬರೇನಲ್ಲ. ಹತ್ತು ವರ್ಷಗಳು ಭಾರತದ ದಕ್ಷಿಣದ ತುದಿಯಲ್ಲಿರುವ ದ್ವೀಪದ ಮೇಲೆ ಆಡಳಿತ ನಡೆಸಿದಾತ. ತಮಿಳು ಪ್ರತ್ಯೇಕವಾದಿಗಳ ಬೇಟೆಯಾಡಿ, ಟೈಗರ್ ಪ್ರಭಾಕರನ್ ಹತ್ಯೆಯೊಂದಿಗೆ ವಿಜಯ ಸಾಧಿಸಿದ್ದು ಈತನ ಸಾಧನೆ. ಸಾಕಷ್ಟು ದೌರ್ಜನ್ಯ ನಡೆಸಿ ತಮಿಳು ಜನಾಂಗದ ಹುಟ್ಟಡಗಿಸಿದ ಈತ ಮಾನವ ಹಕ್ಕುಗಳ ಆಯೋಗದಿಂದ, ಅಂತರರಾಷ್ಟ್ರೀಯ ಸಮುದಾಯದಿಂದ ಖಂಡಿಸಲ್ಪಟ್ಟಿದ್ದು ತಿಳಿದಿರುವ ವಿಷಯ. ತಮಿಳು ಹುಲಿಗಳು ನಿರ್ನಾಮಗೊಂಡರೂ ಶ್ರೀಲಂಕಾದಲ್ಲಿ ತಮಿಳರ ಸಮಸ್ಯೆ ಮಾತ್ರ ಇನ್ನೂ ಜೀವಂತ. ಭಾರತ-ಶ್ರೀಲಂಕಾ ಸಂಬಂಧಗಳಲ್ಲಿ ಕಿರಿಕಿರಿ ಉಂಟುಮಾಡಿರುವುದೇ ಭಾರತೀಯರ, ಮುಖ್ಯವಾಗಿ ತಮಿಳು ಜನಾಂಗದ ಸಮಸ್ಯೆ. ಬ್ರಿಟಿಷ್ ಆಡಳಿತದ ಪಳೆಯುಳಿಕೆ, ಸ್ವಾತಂತ್ರ್ಯ ಕಾಲದಿಂದ ಇರುವಂಥದ್ದು. ದ್ವೀಪದಿಂದ ಸಾಕಷ್ಟು ಸಂಖ್ಯೆಯಲ್ಲಿ ತಮಿಳರು ಭಾರತದಲ್ಲೂ, ಯೂರೋಪಿನ ರಾಷ್ಟ್ರಗಳಲ್ಲೂ ನಿರಾಶ್ರಿತರಾಗಿ ನೆಲೆಸಿದ್ದಾರೆ.

ಅಧ್ಯಕ್ಷ ಸಿರಿಸೇನಾ ಎಸಗಿದ ಸಂವಿಧಾನ ವಿರೋಧಿ ಕೃತ್ಯ ದ್ವೀಪ ರಾಷ್ಟ್ರವನ್ನು ಅರಾಜಕತೆಯಲ್ಲಿ ಮುಳುಗಿಸಿದೆ. ದೀರ್ಘಕಾಲದ ಅಂತರ್ಯುದ್ಧದ ಕಾರಣದಿಂದಾಗಿ ಹದಗೆಟ್ಟಿದ್ದ ಆರ್ಥಿಕ ಪರಿಸ್ಥಿತಿ ಮತ್ತಷ್ಟು ಉಲ್ಬಣಗೊಂಡಿದೆ. ರಾಜ ಪಕ್ಸೆಯವರನ್ನು ಪ್ರಧಾನಿ ಪಟ್ಟಕ್ಕೇರಿಸಿದ್ದೇಕೆ ಎನ್ನುವುದು ಇನ್ನೂ ನಿಗೂಢ. ಸಂದರ್ಭ ಸಾಧಕ ನಿರ್ಧಾರ. ಅಧಿಕಾರದ ದುರುಪಯೋಗ. ದೇಶದ ಸುಪ್ರೀಮ್ ಕೋರ್ಟು ವಿದ್ಯಮಾನವನ್ನು ಸಂವಿಧಾನ ವಿರೋಧಿ ಕಾರ್ಯ ಎಂದು ತೀರ್ಪಿತ್ತರೂ ಲೆಕ್ಕಿಸದೆ ಪಾರ್ಲಿಮೆಂಟನ್ನೇ ಅವಧಿಗೆ ಮುನ್ನ ವಿಸರ್ಜಿಸಿದರು. ಚುನಾವಣೆ ದಿನಾಂಕ ಪ್ರಕಟಿಸಿದರು. ಅದೂ ಕೂಡ ಅಕ್ರಮವೆಂದು ಸಾಬೀತಾಯಿತು. ಪಾರ್ಲಿಮೆಂಟಿನಲ್ಲಿ ಬಹುಮತ ಸಾಬೀತು ಮಾಡಲು ರಾಜಪಕ್ಸೆ ವಿಫಲರಾಗಿದ್ದಾರೆ. ೨೨೫ ಸದಸ್ಯ ಬಲವುಳ್ಳ ಪಾರ್ಲಿಮೆಂಟಿನಲ್ಲಿ ೧೨೨ ಮಂದಿ ಸದಸ್ಯರು ನೂತನವಾಗಿ ನೇಮಕಗೊಂಡ ರಾಜಪಕ್ಸೆ ವಿರುದ್ಧ ಮತ ಚಲಾಯಿಸಿದ್ದಾರೆ. ಹಾಗಿದ್ದರೂ ಅಧ್ಯಕ್ಷ ಸಿರಿಸೇನಾ ರಾಜಪಕ್ಸೆ ಅವರನ್ನೇ ಪ್ರಧಾನ ಮಂತ್ರಿ ಎಂದು ಗುರುತಿಸುತ್ತಿದ್ದಾರೆ. ಪ್ರಧಾನಿ ವಿಕ್ರಮಸಿಂಗೆ ಬಹುಮತ ಹೊಂದಿರುವವರು. ಅವರೊಂದಿಗೆ ಹೊಂದಿ ಕೊಂಡು ದೇಶದ ಹಿತದೃಷ್ಟಿಯಿಂದ ಅವರು ತಮ್ಮ ಕಾರ್ಯ ಮುಂದುವರಿಸುವಂತೆ ಮಾಡುವುದು ಅಧ್ಯಕ್ಷರ ಕರ್ತವ್ಯ. ತಮ್ಮ ಮೊಂಡುತನದಿಂದ ಸಿರಿಸೇನಾ ದೇಶವನ್ನು ಮತ್ತೊಮ್ಮೆ ಅಂತಃಕಲಹಕ್ಕೆ ದೂಡುವ ಸಾಧ್ಯತೆ ಅಧಿಕವಾಗಿದೆ. ಪಾರ್ಲಿಮೆಂಟಿನಲ್ಲಿ ಮತ ಚಲಾಯಿಸಿದ ೧೨೨ ಮಂದಿ ಸದಸ್ಯರು ಸಹಿ ಹಾಕಿ ವಿಕ್ರಮಸಿಂಗೆಯವರನ್ನು ಪ್ರಧಾನ ಮಂತ್ರಿ ಎಂದು ಮಾನ್ಯ ಮಾಡಬೇಕೆಂದು ಮನವಿ ಸಲ್ಲಿಸಿದ್ದಾರೆ. ಮತದಾನದ ನಂತರ ಸ್ಪೀಕರ್ ಫಲಿತಾಂಶ ಪ್ರಕಟಿಸಿದ ಮೇಲೆ ಬೆಂಬಲಿಗರ ಮಧ್ಯೆ ನಡೆದ ಜಟಾಪಟಿ ಮುಂದಿನ ಬೆಳವಣಿಗೆಗಳ ಮುನ್ಸೂಚನೆಯಾಗಿದೆ.

ಭಾರತದ ನೆರೆ ರಾಷ್ಟ್ರಗಳಲ್ಲಿ ಎಲ್ಲವೂ ಸರಿ ಇಲ್ಲ ಎನ್ನುವುದಕ್ಕೆ ಶ್ರೀಲಂಕಾರ ವಿದ್ಯಮಾನಗಳೇ ಸಾಕ್ಷಿ. ಶ್ರೀಲಂಕಾದ ಬೆಳವಣಿಗೆಗಳು ಇತ್ತೀಚಿನದ್ದು. ಭಾರತ ಸರಕಾರ ಏನೂ ಮಾಡದಂಥ ಸ್ಥಿತಿಯಲ್ಲಿದ್ದು ಬೆಳವಣಿಗೆಗಳಿಗೆ ಮೂಕಸಾಕ್ಷಿಯಾಗಿರಬೇಕಾಗಿದೆ. ಮುಂದಿನ ದಿನಗಳಲ್ಲಿ ಶ್ರೀಲಂಕಾದಲ್ಲಿರುವ ತಮಿಳರ ಪ್ರಶ್ನೆ ಮತ್ತೆ ಉದ್ಭವಿಸುವ ಸಾಧ್ಯತೆ ಇದೆ. ಪಾಕಿಸ್ತಾನದ ಜೊತೆ ಸಂಬಂಧಗಳು ಸದ್ಯದಲ್ಲಿ ಸುಧಾರಿಸುವಂತೆ ತೋರುತ್ತಿಲ್ಲ. ಹೊಸ ಸರಕಾರ ಅಧಿಕಾರಕ್ಕೆ ಬಂದರೂ ಪರಿಸ್ಥಿತಿ ಒಂದೇ ಸಮನಾಗಿದೆ. ಬರ್ಮಾದ ರೋಹಿಂಗ್ಯ ನಿರಾಶ್ರಿತರ ಸಮಸ್ಯೆ ವಿರಸಕ್ಕೆ ಕಾರಣವಾಗಿದೆ. ನೇಪಾಳ, ಭೂತಾನಗಳಲ್ಲಿ ಪರಿಸ್ಥಿತಿ ಸರಿಯಿಲ್ಲ, ಈ ಎಲ್ಲ ನೆರೆರಾಷ್ಟ್ರಗಳಲ್ಲೂ ಚೀಣೀಯರ ಪ್ರಾಬಲ್ಯ ಬಲಗೊಳ್ಳುತ್ತಿರುವುದೀಗ ಭಾರತಕ್ಕೆ ಮುಜುಗರ ತಂದಿದೆ. ಮೋದಿ ಸರಕಾರದ ವಿದೇಶೀ ನೀತಿ ದಿಕ್ಕುದಿಶೆ ಇಲ್ಲದೆ ಇದೆ. ಅಮೆರಿಕದೊಂದಿಗೆ, ಇಸ್ರೇಲಿನೊಂದಿಗೆ ಆಪ್ತತೆ ಮಾತ್ರ ಹೆಚ್ಚಿದೆ.

**ಸೀಯಾರ್ಕೆ**
"ಸೂರ್ಯ ರೆಸಿಡೆನ್ಸಿ", ಫ್ಲಾಟ್-೧, # ೩೧೩೩, ೩ನೇ ಅಡ್ಡರಸ್ತೆ
ಗಿರಿನಗರ ೪ನೇ ಹಂತ, ಬೆಂಗಳೂರು - ೫೬೦ ೦೮೫

**ನಿತ್ಯಾನಂದ ಬಿ. ಶೆಟ್ಟಿ ಮತ್ತು ರಾಜಾರಾಮ ತೋಳ್ಪಾಡಿ**

ಅಕ್ಟೋಬರ್ ೧೧, ೨೦೧೮ರಂದು ಧಾರವಾಡದ ತಮ್ಮ ಮನೆಯಲ್ಲಿ ನಿಧನರಾದ ಪ್ರೊಫೆಸರ್ ಕೆ. ರಾಘವೇಂದ್ರ ರಾವ್ ನಮ್ಮ ನಾಡಿನ ಅಪರೂಪದ ರಾಜಕೀಯ ತತ್ವಶಾಸ್ತ್ರಜ್ಞ. ಅವರು ಅಸು ನೀಗುವುದರೊಂದಿಗೆ ತಮ್ಮ ಸ್ವ–ಸಂತೋಷಕ್ಕಾಗಿಯೇ ಓದು–ಬರವಣಿಗೆ, ಪಾಠ–ಪ್ರವಚನಗಳನ್ನು ನಡೆಸುತ್ತಿದ್ದ ಹಿರಿಯ ಪ್ರಾಧ್ಯಾಪಕರುಗಳ ತಲೆಮಾರೊಂದು ಕರ್ನಾಟಕದಲ್ಲಿ ಅಸ್ತಂಗತವಾಗಿದೆ ಎಂದು ಹೇಳಬಹುದು.

೧೯೨೮ರಲ್ಲಿ ಬಳ್ಳಾರಿ ಜಿಲ್ಲೆಯ ಹೊಸಪೇಟೆಯ ವಿದ್ಯಾವಂತ ಬ್ರಾಹ್ಮಣ ಕುಟುಂಬದಲ್ಲಿ ಜನಿಸಿದ ರಾವ್ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಹೊಸಪೇಟೆಯಲ್ಲೇ ಮುಗಿಸಿದರು. ಹೊಸಪೇಟೆ ಕರ್ನಾಟಕ ಹಾಗೂ ಆಂಧ್ರಪ್ರದೇಶ ರಾಜ್ಯಗಳ ಗಡಿರೇಖೆಯಲ್ಲಿ ಇದ್ದುದರಿಂದ ರಾಯರಿಗೆ ಕನ್ನಡಕ್ಕಿಂತ ತೆಲುಗೇ ಹೆಚ್ಚು ಪರಿಚಿತವಾಗಿತ್ತು. ಬಹುಶಃ ಅವರ ಚಿಂತನೆಯ ವಿನ್ಯಾಸಗಳನ್ನು ರೂಪಿಸುವಲ್ಲಿ ಗಡಿನಾಡಿನ ಆತಂಕ ಹಾಗೂ ಸ್ವಾತಂತ್ರ್ಯಗಳು ಮಹತ್ವದ ಪಾತ್ರವನ್ನು ವಹಿಸಿದುವೋ ಏನೋ?

ತಮ್ಮ ಮುಂದಿನ ಶಿಕ್ಷಣಕ್ಕಾಗಿ ಆಂಧ್ರಪ್ರದೇಶ, ತಮಿಳುನಾಡುಗಳಿಗೆ ತೆರಳಿದ ರಾವ್ ಚೆನ್ನೈನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಬಿ.ಎ. ಆನರ್ಸ್ ಪದವಿಯನ್ನು ಗಳಿಸಿ ಮುಂದೆ ಅದೇ ಕಾಲೇಜಿನಲ್ಲಿ ಇಂಗ್ಲಿಷ್‌ನಲ್ಲಿ ಸ್ನಾತಕೋತ್ತರ ಪದವಿ ಪಡೆದರು. ಅನಂತರದಲ್ಲಿ ಅವರು ರಾಜಕೀಯ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದರು. ಸ್ವಲ್ಪ ಸಮಯ ತಾನು ಕಲಿತ ಕಾಲೇಜ್‌ನಲ್ಲೇ ಅಧ್ಯಾಪಕರಾಗಿ ಕೆಲಸ ನಿರ್ವಹಿಸಿದ ರಾವ್, ಮುಂದೆ ಅಸ್ಸಾಂನ ಗೌಹಾಟಿ ವಿಶ್ವವಿದ್ಯಾನಿಲಯಕ್ಕೆ ರಾಜಕೀಯ ಶಾಸ್ತ್ರದ ಅಧ್ಯಾಪಕರಾಗಿ ತೆರಳಿದರು. ಅಸ್ಸಾಮ್‌ನ ನಂತರ ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯಕ್ಕೆ ಪ್ರಾಧ್ಯಾಪಕರಾಗಿ ಬಂದ ರಾವ್ ತಮ್ಮ ವೃತ್ತಿಜೀವನದ ಬಹು ಪಾಲು ಸಮಯವನ್ನು ಧಾರವಾಡದಲ್ಲೇ ಕಳೆದರು. ಈ ಅವಧಿಯಲ್ಲೇ ಅವರು ಕೆನಡಾದ ಟೊರೆಂಟೋ ವಿಶ್ವವಿದ್ಯಾನಿಲಯದಲ್ಲಿ ಕರ್ನಾಟಕದ ಏಕೀಕರಣದ ಕುರಿತು ತಾವು ನಡೆಸಿದ ಸಂಶೋಧನೆಗೆ ಡಾಕ್ಟರೇಟ್ ಪದವಿಯನ್ನೂ ಪಡೆದರು. ತಮ್ಮ ವೃತ್ತಿಜೀವನದ ಕೊನೆಯ ಭಾಗದಲ್ಲಿ ಅವರು ಮಂಗಳೂರು ವಿಶ್ವವಿದ್ಯಾನಿಲಯದ ರಾಜಕೀಯಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿ ಹಾಗೂ ಪ್ರಾಧ್ಯಾಪಕರಾಗಿ ಕಾರ್ಯ ನಿರ್ವಹಿಸಿದರು. ವೃತ್ತಿಯಿಂದ ನಿವೃತ್ತರಾದ ಮೇಲೂ ಅವರು ಎರಡು ವರ್ಷಗಳ ಕಾಲ ಯುಜಿಸಿ ಎಮೆರಿಟಸ್ ಪ್ರೊಫೆಸರ್ ಆಗಿ ಮಂಗಳೂರು ವಿಶ್ವವಿದ್ಯಾನಿಲಯದಲ್ಲಿ ಕೆಲಸ ಮಾಡಿದರು. ನಂತರ ಮೈಸೂರು ವಿಶ್ವವಿದ್ಯಾನಿಲಯದ ರಾಜಕೀಯಶಾಸ್ತ್ರ ವಿಭಾಗದಲ್ಲಿ ಝಾಕೀರ್ ಹುಸೇನ್ ಪೀಠದಡಿ ಸಂದರ್ಶಕ ಪ್ರಾಧ್ಯಾಪಕರಾಗಿಯೂ ದುಡಿದರು.

ರಾಘವೇಂದ್ರ ರಾಯರಿಗೆ ರಾಜಕೀಯಶಾಸ್ತ್ರ, ಸಾಹಿತ್ಯ, ಕಲೆ, ಸಂಗೀತಶಾಸ್ತ್ರ, ಮಾನವಶಾಸ್ತ್ರ, ಸಂಸ್ಕೃತಿ ಚಿಂತನೆಯ ಕ್ಷೇತ್ರಗಳಲ್ಲಿ ಅಪಾರವಾದ ಆಸಕ್ತಿ ಹಾಗೂ ಪರಿಣತಿ ಇತ್ತು. ಹಾಗಿದ್ದೂ ರಾಜಕೀಯ ತತ್ವಜ್ಞಾನ ಅವರ ಸಂವೇದನೆಯ ಜೀವನಾಡಿ. ಪಾಶ್ಚಿಮಾತ್ಯ ರಾಜಕೀಯ ತತ್ವಜ್ಞಾನದ ವಿಭಿನ್ನ ಚಿಂತನಾ ಪರಂಪರೆಗಳ ಕುರಿತು ಬೆರಗುಗೊಳಿಸುವ ಪಾಂಡಿತ್ಯ ಹೊಂದಿದ್ದ ಅವರು ಅರಿಸ್ಟಾಟಲ್‌ನಿಂದ ತೊಡಗಿ ಕಾರ್ಲ್ ಮಾರ್ಕ್ಸ್ ಹಾಗೂ ಮಾರ್ಕ್ಸೋತ್ತರ ಚಿಂತನಾ ಪರಂಪರೆಗಳ ಕುರಿತು ಸುಲಲಿತವಾಗಿ ಮಾತನಾಡಬಲ್ಲವರಾಗಿದ್ದರು. ಪಾಶ್ಚಿಮಾತ್ಯ ಚಿಂತನಾ ಪರಂಪರೆಗಳ ಕುರಿತು ಅವರು ಬರೆದ ಕಾಂಟ್ರಡಿಕ್ಷನ್ಸ್ (ಪ್ರತಿಷೇಧಗಳು) ಎಂಬ ಕೃತಿ ಪಾಶ್ಚಿಮಾತ್ಯ ರಾಜಕೀಯ ಚಿಂತಕರ ಬಗೆಗೆ ಪಾಂಡಿತ್ಯಪೂರ್ಣ ಒಳನೋಟಗಳನ್ನು ಕೊಡುವ ಅಪೂರ್ವ ಗ್ರಂಥ.

ಎಲ್ಲ ಬಗೆಯ ಚಿಂತನಾ ಪರಂಪರೆಗಳಿಗೆ ಸಮಾನ ಗೌರವವನ್ನು ತೋರಿಸಿದರೂ, ರಾವ್ ಮೂಲತಃ ಓರ್ವ ಮಾರ್ಕ್ಸ್‌ವಾದಿ. ಮಾರ್ಕ್ಸ್‌ವಾದ ಅವರಿಗೆ ಸತ್ಯಾನ್ವೇಷಣೆಯನ್ನು ನಡೆಸಲು ಅನುವಾಗುವ ಒಂದು ತತ್ವಭೂಮಿಕೆಯಾಗಿತ್ತು. ಮಾರ್ಕ್ಸ್‌ವಾದವನ್ನು ಸತ್ಯಾನ್ವೇಷಣೆಯ ವೈಧಾನಿಕತೆಯಾಗಿ ಪರಿಭಾವಿಸಿದ ಅವರಿಗೆ ಮಾರ್ಕ್ಸ್ ನಂತರದ ಬಹುಮುಖೀ ಮಾರ್ಕ್ಸ್‌ವಾದಗಳ ಆಳವಾದ ಪರಿಚಯವೂ ಇತ್ತು. ಜೊತೆಗೆ



# ನಿರ್ಗಮಿಸಿದ ರಾಜಕೀಯ ತತ್ವಶಾಸ್ತ್ರಜ್ಞ
# ಪ್ರೊ|| ಕೆ. ರಾಘವೇಂದ್ರ ರಾವ್

ರಾಘವೇಂದ್ರ ರಾಯರಿಗೆ ರಾಜಕೀಯಶಾಸ್ತ್ರ, ಸಾಹಿತ್ಯ, ಕಲೆ, ಸಂಗೀತಶಾಸ್ತ್ರ, ಮಾನವಶಾಸ್ತ್ರ, ಸಂಸ್ಕೃತಿ ಚಿಂತನೆಯ ಕ್ಷೇತ್ರಗಳಲ್ಲಿ ಅಪಾರವಾದ ಆಸಕ್ತಿ ಹಾಗೂ ಪರಿಣತಿ ಇತ್ತು. ಹಾಗಿದ್ದೂ ರಾಜಕೀಯ ತತ್ವಜ್ಞಾನ ಅವರ ಸಂವೇದನೆಯ ಜೀವನಾಡಿ. ಪಾಶ್ಚಿಮಾತ್ಯ ರಾಜಕೀಯ ತತ್ವಜ್ಞಾನದ ವಿಭಿನ್ನ ಚಿಂತನಾ ಪರಂಪರೆಗಳ ಕುರಿತು ಬೆರಗುಗೊಳಿಸುವ ಪಾಂಡಿತ್ಯ ಹೊಂದಿದ್ದ ಅವರು ಅರಿಸ್ಟಾಟಲ್‌ನಿಂದ ತೊಡಗಿ ಕಾರ್ಲ್ ಮಾರ್ಕ್ಸ್ ಹಾಗೂ ಮಾರ್ಕ್ಸೋತ್ತರ ಚಿಂತನಾ ಪರಂಪರೆಗಳ ಕುರಿತು ಸುಲಲಿತವಾಗಿ ಮಾತನಾಡಬಲ್ಲವರಾಗಿದ್ದರು. ಪಾಶ್ಚಿಮಾತ್ಯ ಚಿಂತನಾ ಪರಂಪರೆಗಳ ಕುರಿತು ಅವರು ಬರೆದ ಕಾಂಟ್ರಡಿಕ್ಷನ್ಸ್ (ಪ್ರತಿಷೇಧಗಳು) ಎಂಬ ಕೃತಿ ಪಾಶ್ಚಿಮಾತ್ಯ ರಾಜಕೀಯ ಚಿಂತಕರ ಬಗೆಗೆ ಪಾಂಡಿತ್ಯಪೂರ್ಣ ಒಳನೋಟಗಳನ್ನು ಕೊಡುವ ಅಪೂರ್ವ ಗ್ರಂಥ.




ಮಾರ್ಕ್ಸ್‌ವಾದಕ್ಕಿಂತ ಭಿನ್ನವಾದ ಹಾಗೂ ಅದಕ್ಕೆ ವಿರುದ್ಧವಾದ ಚಿಂತನಾ ಕ್ರಮಗಳ ಅರಿವೂ ಇತ್ತು. ಆದರೆ ಮಾರ್ಕ್ಸ್‌ವಾದವೂ ಸೇರಿದಂತೆ ಇತರ ಅನೇಕ ಪಾಶ್ಚಿಮಾತ್ಯ ಚಿಂತನಾ ಪರಂಪರೆಗಳನ್ನು ನಾವು ನಿರಾತಂಕವಾಗಿ ಅನುಸರಿಸುವ ಅಪಾಯಗಳ ಕುರಿತು ಅವರಿಗೆ ಎಚ್ಚರವಿತ್ತು. ಹೀಗಾಗಿ, ವಸಾಹತೋತ್ತರ ಮತ್ತು ಆಧುನಿಕೋತ್ತರ ಚಿಂತನೆಗಳ ಕುರಿತು ರಾವ್ ವಿಶೇಷವಾದ ಆಸಕ್ತಿಯನ್ನು ಇರಿಸಿಕೊಂಡಿದ್ದರು. ರಾವ್‌ರವರ ಮಾರ್ಕ್ಸ್‌ವಾದ ಮುಚ್ಚಿಕೊಂಡ ತತ್ತ್ವಜ್ಞಾನವಾಗಿರದೆ ಚಲನಶೀಲವಾದ ಹಾಗೂ ದೇಶ–ಕಾಲಗಳ ವ್ಯತ್ಯಾಸಗಳನ್ನು ಗುರುತಿಸುವ ತೆರೆದ ಅಂಚಿನ ದಾರ್ಶನಿಕ ನೋಟವಾಗಿತ್ತು.

ರಾವ್‌ರವರ ಸಂವೇದನಾಶೀಲ ಮಾರ್ಕ್ಸ್‌ವಾದೀ ತಾತ್ವಿಕತೆ ಅವರನ್ನು ಆಧುನಿಕ ಭಾರತದ ಚಿಂತನಾ ಪರಂಪರೆಗಳನ್ನು ಚಿಕಿತ್ಸಕ ದೃಷ್ಟಿಯಿಂದ ನೋಡುವಂತೆ ಪ್ರೇರೇಪಿಸಿತು. ಗಾಂಧಿ, ಅಂಬೇಡ್ಕರ್, ಲೋಹಿಯಾ ಹಾಗೂ ಜಯಪ್ರಕಾಶ್ ನಾರಾಯಣ್ ಮೊದಲಾದ ಭಾರತೀಯ ಚಿಂತಕರ ಕುರಿತು ರಾವ್ ವಿಶೇಷವಾದ ಅಧ್ಯಯನ ನಡೆಸಿದ್ದಾರೆ. ಗಾಂಧೀಜಿಯವರ ಕುರಿತು ಆಳವಾದ ಅಧ್ಯಯನ ನಡೆಸಿದ ಕರ್ನಾಟಕದ ಹಿರಿಯ ತಲೆಮಾರಿನ ಏಕೈಕ ವಿದ್ವಾಂಸರು ಯಾರೆಂದರೆ; ಅದು ರಾಘವೇಂದ್ರ ರಾವ್‌ರವರೇ. ಗಾಂಧಿಯವರ ಚಿಂತನೆಯ ಗುಣವಿಶೇಷಗಳನ್ನು ಅರಿಯಬೇಕಾದರೆ ಅವರನ್ನು ಮಾರ್ಕ್ಸ್‌ನ ಜೊತೆ ಮುಖಾಮುಖಿಗೊಳಿಸಬೇಕು ಎಂದು ರಾವ್ ನಿರಂತರವಾಗಿ ಪ್ರತಿಪಾದಿಸುತ್ತಿದ್ದರು.

ಪ್ರಾದೇಶಿಕ ನಿರ್ದಿಷ್ಟತೆಯಲ್ಲಿ ಆಳವಾಗಿ ನೆಲೆಯೂರಿದ ರಾವ್‌ರವರ ರಾಜಕೀಯ ತತ್ವಜ್ಞಾನದ ಒಂದು ಬಹುಮುಖ್ಯ ಅಭಿವ್ಯಕ್ತಿಯನ್ನು ಕನ್ನಡ ವಿಶ್ವವಿದ್ಯಾನಿಲಯ ಪ್ರಕಟಿಸಿದ ಅವರ 'ಇಮ್ಯಾಜಿನಿಂಗ್ ದಿ ಅನ್ ಇಮ್ಯಾಜಿನ್ಡ್ ಕಮ್ಯುನಿಟೀಸ್' ಎನ್ನುವ ಕೃತಿಯಲ್ಲಿ ಕಾಣಬಹುದು. ಈ ಕೃತಿ ಕನ್ನಡ ವಿಶ್ವವಿದ್ಯಾನಿಲಯ ಪ್ರಕಟಿಸಿದ ಮೊದಲ ಇಂಗ್ಲಿಷ್ ಪ್ರಕಟಣೆಯೂ ಹೌದು. ಶಿಮ್ಲಾದ ಉನ್ನತ ಅಧ್ಯಯನ ಸಂಸ್ಥೆಯಲ್ಲಿ ರಾವ್ ನಡೆಸಿದ ಎರಡು ವರ್ಷಗಳ ಸಂಶೋಧನೆಯ ಫಲಶೃತಿಯೇ ಈ ಕೃತಿ. ಕರ್ನಾಟಕದ ನಾಲ್ಕು ವಿಭಿನ್ನ ಸಾಂಸ್ಕೃತಿಕ ವಲಯಗಳನ್ನು ಪ್ರತಿನಿಧಿಸಿದ ನಾಲ್ವರು ಚಿಂತಕರಾದ ಆಲೂರು ವೆಂಕಟರಾವ್, ಹರ್ಡೇಕರ್ ಮಂಜಪ್ಪ, ಪಂಡಿತ್ ತಾರಾನಾಥ್ ಹಾಗೂ ಡಿ. ವಿ. ಗುಂಡಪ್ಪ ಅವರುಗಳು ಕರ್ನಾಟಕದ ನಾಲ್ಕು ವಿಭಿನ್ನ ಕಲ್ಪನೆಗಳನ್ನು ಹೇಗೆ ಪ್ರತಿನಿಧಿಸುತ್ತಾರೆ ಎನ್ನುವ ಮಹತ್ವದ ವಿಚಾರವನ್ನು ರಾವ್‌ರವರ 'ಇಮ್ಯಾಜಿನಿಂಗ್ ದಿ ಅನ್ ಇಮ್ಯಾಜಿನ್ಡ್ ಕಮ್ಯುನಿಟೀಸ್' ಪ್ರತಿಬಿಂಬಿಸುತ್ತದೆ. ಬಹುಶಃ ಯಾವ ಬಗೆಯ ರಾಜಕೀಯ ತತ್ವವನ್ನು ನಾವು ಕರ್ನಾಟಕದಲ್ಲಿ ರೂಪಿಸಬೇಕು ಹಾಗೂ ಆ ಮೂಲಕ ಯಾವ ರೀತಿಯಾಗಿ ಕರ್ನಾಟಕದಲ್ಲಿ ರಾಜಕೀಯ ಚಿಂತನೆಯ ಚರಿತ್ರೆಯನ್ನು ಮರುಸಂಘಟಿಸಬೇಕು ಎನ್ನುವುದಕ್ಕೆ ದಿಕ್ಸೂಚಿ ಎಂಬಂತೆ ಈ ಕೃತಿ ಇದೆ. ಕರ್ನಾಟಕದ ಸಾಂಸ್ಕೃತಿಕ ಬಹುತ್ವವನ್ನು ಹಾಗೂ ರಾಜಕೀಯ ಚಿಂತನೆಗಳ ಸಿರಿವಂತಿಕೆಯನ್ನು ಬಿಂಬಿಸುವ ಈ ಕೃತಿ ಹೊಸ ಬಗೆಯ ರಾಜಕೀಯ ತತ್ವಜ್ಞಾನದ ಮಾರ್ಗವನ್ನು ಕರ್ನಾಟಕದಲ್ಲಿ ಉದ್ಘಾಟಿಸಿದೆ. ಅಂತೆಯೇ ರಾವ್‌ರವರು ಕರ್ನಾಟಕದ ಮಾಜಿ ಮುಖ್ಯಮಂತ್ರಿ ನಿಜಲಿಂಗಪ್ಪನವರ ಕುರಿತು ನಡೆಸಿದ ಸಂಶೋಧನೆಯೂ ಕರ್ನಾಟಕದ ರಾಜಕೀಯ ನಾಯಕತ್ವದ ಸ್ವರೂಪಕ್ಕೆ ಹಿಡಿದ ಕೈಗನ್ನಡಿಯಂತಿದೆ. ಈ ಎರಡು ಕೃತಿಗಳೂ ಕರ್ನಾಟಕ ರಾಜಕೀಯ ಶಾಸ್ತ್ರದ ಎರಡು ಪ್ರಮುಖ ಮೈಲುಗಲ್ಲುಗಳು ಹಾಗೂ ಅವು ರಾವ್‌ರವರು ಕರ್ನಾಟಕದ ರಾಜಕೀಯ ಚಿಂತನೆಗೆ ನೀಡಿದ ಎರಡು ಮಹತ್ವದ ಕೊಡುಗೆಗಳು.



ಇವಿಷ್ಟೇ ಅಲ್ಲದೆ ರಾಘವೇಂದ್ರ ರಾವ್‌ರವರು ರಾಜಕೀಯ ತತ್ವಜ್ಞಾನ ಹಾಗೂ ಕನ್ನಡ ಸಾಹಿತ್ಯದ ನಡುವಿನ ಒಂದು ನವಿರಾದ ಸೇತುಬಂಧವಾಗಿಯೂ ಕೆಲಸ ಮಾಡಿದರು. ತಮ್ಮ ರಾಜಕೀಯ ತತ್ವಚಿಂತನೆಯ ದಾರ್ಶನಿಕ ಬೆಳಕಿನಲ್ಲಿ ಅವರು ಕನ್ನಡದ ಕೆಲವು ಪ್ರಮುಖ ಸಾಹಿತ್ಯ ಕೃತಿಗಳನ್ನು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಬೇಂದ್ರೆಯವರ ಹಕ್ಕಿ ಹಾರುತಿದೆ ನೋಡಿದಿರಾ ಮತ್ತು ನಾಕು ತಂತಿ ಕವನ ಸಂಕಲನಗಳನ್ನು ಅವರು ಇಂಗ್ಲಿಷ್‌ಗೆ ಅನುವಾದಿಸಿದ್ದಾರೆ. ಇತ್ತೀಚೆಗಷ್ಟೇ ಸಂತಕವಿ ಕನಕದಾಸರ ಆಯ್ದ ಕೀರ್ತನೆಗಳನ್ನು ತಮ್ಮ ಪತ್ನಿ ಪ್ರಭಾರವರ ಸಹಯೋಗದಲ್ಲಿ ಅವರು ಇಂಗ್ಲಿಷ್‌ಗೆ ತರ್ಜುಮೆಗೊಳಿಸಿದ್ದರು. ರಾವ್ ಅವರಿಗೆ ಈ ಅನುವಾದದ ಕೆಲಸ ಬಹುಮುಖ್ಯವಾದುದಾಗಿತ್ತು. ಅವರು ಅನುವಾದವನ್ನು ಅತ್ಯಂತ ಸೃಜನಶೀಲವಾದ ಕೆಲಸ ಮತ್ತು ಮೂಲಕೃತಿಯ ಮರುಸೃಷ್ಟಿ ಎಂದು ಭಾವಿಸಿದ್ದರು. ರಾವ್‌ರವರ ಈ ಅನುವಾದಗಳು ಅಪಾರವಾದ ಜನಮೆಚ್ಚುಗೆಗೆ ಪಾತ್ರವಾಗಿವೆ.

ರಾವ್‌ರವರು ಆಳವಾದ ಸಂಗೀತ ಶಾಸ್ತ್ರೋಪಾಸಕರು. ಎಲ್ಲ ಬಗೆಯ ಶಾಸ್ತ್ರೀಯ ಹಾಗೂ ಶಾಸ್ತ್ರೀಯೇತರ ಸಂಗೀತವನ್ನು ಆಸ್ವಾದಿಸುವ ಅವರಿಗೆ ಸಂಗೀತ ಶಾಸ್ತ್ರದ ನಿಖರವಾದ ಪರಿಚಯವಿತ್ತು. ಬಹುಶಃ ಅವರ ಸಾಹಿತ್ಯ–ಸಂಗೀತದ ಅಭಿರುಚಿ ಹೆಚ್ಚು ಪರಿಪಕ್ವಗೊಂಡದ್ದು ಅವರ ಗೆಳೆಯರಾದ ಅನೇಕ ಮಹನೀಯರುಗಳ ಸಹವಾಸದಿಂದ ಎನ್ನಬಹುದು. ಬೇಂದ್ರೆ, ಕುರ್ತಕೋಟಿ, ಪುಣೇಕರ, ಕಣವಿ, ಆಮೂರ ಮೊದಲಾದ ಅನೇಕ ಸಾಹಿತಿಗಳು ಹಾಗೂ ಸಂಗೀತಾಸಕ್ತರು ರಾಯರಿಗೆ ಆಪ್ತರಾಗಿದ್ದರು. ಇವರುಗಳ ಜೊತೆಗಿನ ಚರ್ಚೆ ಹಾಗೂ ಸಮಾಲೋಚನೆಗಳಿಂದ ರಾವ್‌ರವರ ಕನ್ನಡ ಸಂಸ್ಕೃತಿಯ ಬಗೆಗಿನ ಚಿಂತನೆ ರೂಪುಗೊಂಡಿತು ಎನ್ನಬಹುದು.

ಬಹುಶಃ ಕರ್ನಾಟಕದಲ್ಲಿ ಸಮಾಜಶಾಸ್ತ್ರಗಳ ಪುನರುಜ್ಜೀವನದ ಚಿಂತನೆ ನಡೆಸುವವರಿಗೆ ರಾಘವೇಂದ್ರ ರಾವ್ ಒಂದು ಬಹುಮುಖ್ಯ ಹೆಸರು. ರಾವ್ ಅವರು ವಿಭಿನ್ನ ಶಿಸ್ತುಗಳ ನೆಲೆಯಿಂದ ಮತ್ತು ಕೆಲವೊಮ್ಮೆ ಶಿಸ್ತುಗಳ ಸೀಮೆಯನ್ನು ಉಲ್ಲಂಘಿಸಿ ಚೈತನ್ಯಶೀಲವಾದ ಚಿಂತನೆಯನ್ನು ಕೊಟ್ಟಿದ್ದಾರೆ. ಅವರಿಂದ ನಾವು ಕರ್ನಾಟಕದ ಸಮಾಜಶಾಸ್ತ್ರದ ಚರಿತ್ರೆಯನ್ನು ಆರಂಭಿಸಬೇಕಾಗಿದೆ.

**ರಾಜಾರಾಮ ತೋಳ್ಪಾಡಿ**
ಪ್ರಾಧ್ಯಾಪಕ, ರಾಜ್ಯಶಾಸ್ತ್ರ ವಿಭಾಗ
ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು

**ನಿತ್ಯಾನಂದ ಬಿ. ಶೆಟ್ಟಿ**
ಪ್ರಾಧ್ಯಾಪಕ, ಡಿ.ವಿ.ಜಿ. ಕನ್ನಡ ಅಧ್ಯಯನ ಕೇಂದ್ರ
ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು

# ಕಟ್ಟು ಕಥೆಗಳ ಸುಳಿಯಲಿ ಹಾಸನಾಂಬೆ



**ಜ. ಹೊ. ನಾರಾಯಣಸ್ವಾಮಿ**

ಎರಡು ಶಕ್ತಿಗಳು ಪರಸ್ಪರ ಕೈ ಜೋಡಿಸಿ ಆದಿಯಿಂದಲೂ ಜನಸಾಮಾನ್ಯರ ರಕ್ತವನ್ನು ಹೀರುತ್ತ ಬಂದಿರುವುದನ್ನು ಫ್ರೆಂಚ್ ತತ್ವಜ್ಞಾನಿ ಡಿಡೆರೊ ಸ್ಪಷ್ಟಪಡಿಸಿದ್ದಾನೆ. ಅವೆಂದರೆ ಒಂದು ರಾಜಶಾಹಿ ಮತ್ತೊಂದು ಪುರೋಹಿತಶಾಹಿ. ಸಮಷ್ಟಿಯ ಹಿತಕ್ಕೆ ಹೇಳಿರುವ ಅವನ ಮಾತನ್ನು ಕುವೆಂಪು ಹೀಗೆ ಅನುವಾದಿಸಿದ್ದಾರೆ.

'ಕಡೆಯ ದೊರೆಯ ಕರುಳು
ಕಡೆಯ ಪುರೋಹಿತನ ಕೊರಳಿಗೆ
ಉರುಳಾಗುವನಕ ಸುಖವಿಲ್ಲ ಧರೆಗೆ'

ನಿಜ, ರಾಜಶಾಹಿಯ ಹಾಗೂ ಪುರೋಹಿತಶಾಹಿಯ ಮನೋಧರ್ಮ ಬದಲಾಗದಿದ್ದರೆ ಮನುಕುಲಕ್ಕೆ ಶೋಷಣೆಯಿಂದ ಮುಕ್ತಿಯಿಲ್ಲ.

ರಾಜಶಾಹಿಗಿಂತ ಪುರೋಹಿತಶಾಹಿಯ ನಯವಂಚನೆ ಕಾಲಕಾಲದಿಂದಲೂ ಅಡೆತಡೆ ಇಲ್ಲದೆ ನಡೆಯುತ್ತಲೇ ಬರುತ್ತಿದೆ. ಅದು ದೇವರು ಧರ್ಮದ ಹೆಸರಿನಲ್ಲಿ ಆಡದ ಆಟವಿಲ್ಲ, ಮಾಡದ ಮೋಸವಿಲ್ಲ. ತನ್ನ ಪ್ರಭಾವವನ್ನು ಹೆಚ್ಚಿಸಿಕೊಳ್ಳಲು ಪುರಾಣಗಳನ್ನು ಹೆಣೆಯುತ್ತದೆ, ಕಟ್ಟುಕಥೆಗಳನ್ನು ಕಟ್ಟುತ್ತದೆ, ಸಮಾಜವನ್ನು ಮೌಢ್ಯತೆಯ ಪಾಪಕೂಪಕ್ಕೆ ತಳ್ಳಿ ತನ್ನ ಸ್ವಾರ್ಥವನ್ನು ಯಾವ ಎಗ್ಗೂ ಇಲ್ಲದೆ ಸಾಧಿಸಿಕೊಂಡು ಸಂತಸದ ನಗೆ ಬೀರುತ್ತ ಹಂಗಿಸುತ್ತದೆ. ಹಾಗೆ ಹೆಣೆದ ಕಟ್ಟುಕಥೆಗಳಲ್ಲಿ ಹಾಸನದ ಹಾಸನಾಂಬೆಯ ದೇವಸ್ಥಾನವೂ ಒಂದಾಗಿದೆ.

ಇಡೀ ವರ್ಷದಲ್ಲಿ ಅದರ ಬಾಗಿಲು ತೆರೆಯುವುದು ಒಂದೇ ಬಾರಿ. ಅದು ಇಂತಿಷ್ಟು ದಿನಗಳು ಮಾತ್ರ. ಅದರ ಆಕರ್ಷಣೆಗೆ ಹುಟ್ಟುಹಾಕಿರುವ ಕುತೂಹಲಕಾರಿ ಅಂಶಗಳೆಂದರೆ ದೇವಸ್ಥಾನದ ಬಾಗಿಲು ಹಾಕುವಾಗ ಹಚ್ಚಿಟ್ಟ ದೀಪ ಆರದೆ, ಹೂವುಗಳು ಬಾಡದೆ, ನೈವೇದ್ಯ ಹಳಸದೆ ವರ್ಷವಿಡೀ ಇದ್ದಹಾಗೆ ಇರುತ್ತವೆ ಎಂಬುದು. ಇದನ್ನು ನಂಬಬಹುದೆ?

ಭಾರತದ ಸಂವಿಧಾನದ ಅನುಚ್ಛೇದ ೫೧ಎ (ಹೆಚ್)ನಲ್ಲಿ 'ಪ್ರತಿಯೊಬ್ಬ ನಾಗರಿಕನಿಗೂ ವೈಜ್ಞಾನಿಕ ಮನೋಭಾವನೆ, ಮಾನವೀಯತೆ, ಜಿಜ್ಞಾಸೆ ಮತ್ತು ಸುಧಾರಣಾ ಪ್ರವೃತ್ತಿಯನ್ನು ಅಭಿವೃದ್ಧಿಗೊಳಿಸುವುದು ಮೂಲಭೂತ ಕರ್ತವ್ಯವಾಗಿರತಕ್ಕದ್ದು' ಎಂದು ವಿಧಿಸಲಾಗಿದೆ. ಅತ್ತ ಪ್ರಜೆಗಳ ಚಿತ್ತ ಕ್ರಿಯಾಶೀಲವಾಗಬೇಕು. ಹಾಗೆ ಆದಾಗ ಮಾತ್ರ ಮೌಢ್ಯದಿಂದ ಮುಕ್ತಿ, ವಂಚಕ ಪುರೋಹಿತಶಾಹಿಯ ಶೋಷಣೆಯಿಂದ ಬಿಡುಗಡೆ.

ಹಾಸನಾಂಬೆ ದೇವಸ್ಥಾನದಲ್ಲಿ 'ಕಲ್ಲಪ್ಪನ ಗುಡಿ' ಇದೆ. ನಾಲ್ಕು ಜನ ಕಳ್ಳರು ದೇವಿಯ ಒಡವೆ ಕದಿಯಲು ಬಂದಾಗ ಆಕೆ ಕೊಟ್ಟ ಶಾಪದಿಂದ ಕಲ್ಲಾಗಿ ಬಿದ್ದಿದ್ದಾರೆ ಎನ್ನುವುದು ಅದರ ಹಿಂದಿರುವ ಕಟ್ಟುಕಥೆ. ಇದು ಒಂದಾದರೆ 'ಸೊಸೆ ಕಲ್ಲು' ಎಂದು ಮತ್ತೊಂದನ್ನು ಸೃಷ್ಟಿಸಲಾಗಿದೆ. ಆ ಕಲ್ಲು ವರ್ಷಕ್ಕೆ ಭತ್ತದ ಕಾಳಿನ ತುದಿಯಷ್ಟು ಮುಂದೆ ಬರುತ್ತದೆಯಂತೆ. ಅದು ದೇವಿಯ ಪಾದ ತಲುಪಿದ ತಕ್ಷಣ ಕಲಿಯುಗದ ಅಂತ್ಯ ಎಂದು ಕಥೆ ಕಟ್ಟಲಾಗಿದೆ.

ಹಾಸನಾಂಬೆ ವಿಗ್ರಹದ ರೂಪದಲ್ಲಿ ಇಲ್ಲ. ಅದು ಹುತ್ತ. ಅವಳಿಗೆ ಪಾದಗಳೆ ಇಲ್ಲ. ಇಲ್ಲದ ಪಾದಗಳನ್ನು ಮುಟ್ಟುವುದಾದರೂ ಹೇಗೆ? ಪ್ರಳಯ ಆಗುವುದಾದರೂ ಹೇಗೆ? ವಂಚಿಸಲು ಹೆಣೆದಿರುವ ಈ ಕಟ್ಟುಕಥೆಯಲ್ಲಿ ಅವಿವೇಕ ಢಾಳಾಗಿದೆ.

ಮುಖ್ಯವಾದ ಮತ್ತೊಂದು ವಿಷಯ ಎಂದರೆ ಹಾಸನಾಂಬೆ ಕೇವಲ ಹಿಂದೂಗಳ ದೇವತೆಯಷ್ಟೆ ಅಲ್ಲ. ಅವಳು ಮುಸಲ್ಮಾನರ ದೇವತೆ 'ಹಸನ್‌ಬಿ' ಕೂಡ ಆಗಿದ್ದಾಳೆ. ಅದೇನೆ ಇರಲಿ ಹಾಸನಾಂಬೆಯ ಅಂತರಂಗ – ಬಹಿರಂಗಗಳನ್ನು ಬಿಂಬಿಸುವ, ಮೌಢ್ಯದಿಂದ ಹೊರಗುಳಿದು ವೈಜ್ಞಾನಿಕ ನೆಲೆಯಲ್ಲಿ ವಿವೇಕದಿಂದ ಚಿಂತಿಸುವವರಿಗೆ ನನ್ನ ಈ ಕೆಳಗಿನ ಕವನ

**ಹಾಸನಾಂಬೆ**

*ಇಲ್ಲ, ಇಲ್ಲಿ ಇವಳ ತಂಟೆಗೆ ಯಾರೂ ಹೋಗುವುದಿಲ್ಲ*
*ವರ್ಷಕ್ಕೊಮ್ಮೆ ತೋರಿಕೆಯ ಭಕ್ತಿ, ಮಿಕ್ಕಂತೆ ಭಯ!*
*ಇವಳು ಹಾಸನಾಂಬೆಯೋ ಹಸನ್‌ಬಿಯೋ ಗೊತ್ತಿಲ್ಲ ಕೂಡ*
*ಕಾಣಬೇಕೆಂಬ ಶ್ರದ್ಧೆ ಗಾಢವಾದಷ್ಟು ಇವಳು ನಿಗೂಢ!*

*ಬಾಗಿಲು ತೆರೆದರೆ ಕತ್ತಲೆ, ಒಳಗೆ ಉಸಿರುಗಟ್ಟುವ ಕಮಟು*
*ಬರುವ ಹಾಗಿಲ್ಲ ಒಳಗೆ, ಹೊರಗಿನ ನೈಜ ಗಾಳಿ ಬೆಳಕು*
*ಥಟ್ಟನೆ ಕಾಣುವುದಿಲ್ಲ ಅಲ್ಲಿ ಏನೊಂದೂ; ಕಣ್ಣೆಟ್ಟುಕಂಡರೆ*
*ಆಕಾರ ಇಲ್ಲದ ಇವಳು ಹುತ್ತ, ಕಲ್ಲುಗೋಡೆ ಸುತ್ತ!*

*ಮೇಲೆ ಜರಿಸೀರೆ, ಕರಿಮಣಿಸರ, ಬಳೆಗಳು ಕೆಂಪುಕರಿ*
*ಅರಿಶಿಣ, ಬೆಳ್ಳಿಯ ಕಣ್ಣು, ಕುಂಕುಮ ರಕ್ತ ಚೆಲ್ಲಿದಂತೆ!*
*'ಮಣಿಕರ್ಣಿಕಾ–ಸಪ್ತಮಾತೃಕೆಯರು' ಪೂಜಾರಿ ಅಂತೆ ಕಂತೆ*
*ಹೊರಗೆ ಏನೆಲ್ಲ ಆದರೂ ಇವಳು ಮಾತ್ರ ಸದಾ ನಿಶ್ಚಿಂತೆ!*

## ಜಹೊನಾ ಅವರಿಗೆ ನಮನ

ನಾಡಿನ ಖ್ಯಾತ ಚಿಂತಕರೂ, ನ್ಯಾಯವಾದಿಗಳೂ ಆಗಿದ್ದ ಜ. ಹೊ. ನಾರಾಯಣಸ್ವಾಮಿಯವರು ಹೃದಯಾಘಾತದಿಂದ ನಿಧನರಾಗಿದ್ದಾರೆ. ಸಮಾಜವಾದಿ ಚಿಂತಕರಾಗಿದ್ದ ಜಹೊನಾ, ಹಾಸನ ಮತ್ತು ಸುತ್ತಲಿನ ಪ್ರದೇಶಗಳಲ್ಲಿ ವೈಚಾರಿಕ ಚಳುವಳಿ ಬೆಳೆಯಲು ಕಾರಣರಾಗಿದ್ದರು. ಕುವೆಂಪು, ಸ್ವಾಮಿ ವಿವೇಕಾನಂದರ ಚಿಂತನೆಗಳಿಂದ ಪ್ರಭಾವಿತರಾಗಿದ್ದ ಅವರು ಹಲವಾರು ವೈಚಾರಿಕ ಬರಹಗಳ ಮೂಲಕ ರಾಜ್ಯದ ಪ್ರಮುಖ ಚಿಂತಕರಲ್ಲೊಬ್ಬರಾಗಿದ್ದರು. ಇತ್ತೀಚೆಗೆ ಹಾಸನದ ಹಾಸನಾಂಬೆ ದೇವಸ್ಥಾನ ಕುರಿತು ಬೆಳೆದ ಮೌಢ್ಯಗಳ ಕುರಿತ ಲೇಖನವನ್ನು ಕಳಿಸಿದ್ದರು. ಆ ಲೇಖನವನ್ನು 'ಹೊಸತು' ಪತ್ರಿಕೆಯ ಡಿಸೆಂಬರ್ ತಿಂಗಳ ಪತ್ರಿಕೆಗೆ ಆಯ್ಕೆ ಮಾಡಿದ್ದೆವು. ಪ್ರಕಟಿಸುವಷ್ಟರಲ್ಲಿಯೇ ಅಕಸ್ಮಾತಾಗಿ ಅವರ ನಿಧನದ ಆಘಾತಕಾರಿ ಸುದ್ದಿ ಬಂದಿತು. 'ಹೊಸತು' ಪತ್ರಿಕೆಗೆ ಆರಂಭದಿಂದಲೂ ಲೇಖನಗಳನ್ನು ಬರೆಯುತ್ತಿದ್ದ ಜಹೊನಾ ಅವರಿಗೆ ಅವರ ಕೊನೆಯ ಲೇಖನವನ್ನು ಪ್ರಕಟಿಸುತ್ತಲೇ ನೋವಿನ ನಮನವನ್ನು 'ಹೊಸತು' ಹಾಗೂ 'ನವಕರ್ನಾಟಕ' ಬಳಗ ಸಲ್ಲಿಸುತ್ತದೆ.

*– ಸಂ.*

*ಬಾಗಿಲು ತೆರೆದಾಗ ನುಗ್ಗುವ ಹಿಂಡುಗಳ ಸರಿಸಿ ಕೇಳಿದೆ*
*'ಅಂಬೆ ಈ ಹಿಂದೆ ನಗರದ ಪ್ರಥಮ ಪ್ರಜೆ ಕೊಲೆಯಾದದ್ದು ಗೊತ್ತೆ?'*
*ಮಾತಿಲ್ಲ ಮೌನ. ಮಾತಿಗೆ ಉಂಟು ಒಂದರ್ಥ. ಮೌನಕ್ಕೆ?*
*ಅರ್ಥ ಹಚ್ಚುವರಾರು? ಹೊಳೆದಂತೆ... ದಾರಿ ನೂರಾರು!*

*ಕೊಳೆಗೇರಿ ಗುಂಡಿಗೊಸರುಗಳು ಕೊನೆಗೆ ಇವಳ ದೇವಿಗೆರೆ*
*ಕೊಳೆತು ನಾರಲಿ, ಬಿದ್ದು ಸತ್ತ ಹೆಣಗಳು ಕೊಳೆತು ತೇಲಲಿ*
*ಇವಳ ಮೂಗಿಗಿಲ್ಲ ತೊಂದರೆ, ರಸ್ತೆಗಳು ಒಸರೆದ್ದು*
*ಗುಳಿ ಬಿದ್ದರೂ ಕೆಸರಾಗದು, ಕುಲುಕದು ಇವಳ ಮೈ!*

*ಇವಳ ಊರಿನ ಅರಳಿಮರ ಉರುಳಿ ಶಾರದೆಗೆ ಶೃಂಗಾರ*
*ಪಾರ್ಕು, ಎಲ್ಲಿ ಸಿಕ್ಕಿದರಲ್ಲಿ ಅತ್ಯಾಚಾರ; ರಾಜಕೀಯ*
*ಗೂಳಿಗಳ ಗುದ್ದಾಟ. ಮೂಗುದಾರವಿರದ ಕೊಬ್ಬಿದ*
*ಕರುಗಳ ಕೆನೆತ; ಕಪ್ಪುಹಣ, ವಿದ್ಯೆ ವ್ಯಾಪಾರ ನಿತ್ಯಪಾಠ!*

*ಮಚ್ಚು ಕತ್ತಿ ಉರುಳುವ ಕೈಕಾಲು ಹೆಣ; ಎಲ್ಲಿ ಏಕೆ ಎಲ್ಲ*
*ನಿಗೂಢ! ನಾಟಕ ಸಂಗೀತ ಸಾಹಿತ್ಯ ಕಲೆ ಯಾರಿಗೂ ಬೇಡ*
*ಇವಳ ಹೃದಯ ಗೆದ್ದಲಿಡಿದು ಬಲೆ ನೇಯುತ್ತಿದೆ ಜೇಡ*
*ಮದ್ಯ ಸಮೃದ್ಧ, ಪರಿಸರ ಅಶುದ್ಧ, ಯುವಕ ಹದಿನೆಂಟಕ್ಕೆ ವೃದ್ಧ!*

*ಬೆಳಗಾಗೆ ಗುಡಿ, ಚರ್ಚು, ಮಸೀದಿಗಳ ಪೈಪೋಟಿ ಕಿರುಚಾಟ*
*ಹಗಲಿರುಳು ಪರಸ್ಪರ ಸುಳಿದು ಕಿತ್ತು ತಿನ್ನುವ ಆಟ*
*ಯಾರು ಯಾರನ್ನೆ ಸುಲಿಯಲಿ ಕಿತ್ತು ತಿನ್ನಲಿ ಇಲ್ಲ ಭಯ*
*ಇವಳು ನಿರ್ಲಿಪ್ತೆ, ಸಮಾಧಾನ ಚಿತ್ತೆ, ಕೋಣೆಯಲಿ ಧ್ಯಾನಸ್ಥೆ!*

*ಇವಳನ್ನು ಎಚ್ಚರಿಸಬೇಕು ಎಂದು ಸಂಕಲ್ಪ ಮಾಡಿ*
*ಒಳಗಿಳಿದರೆ ಕಗ್ಗತ್ತಲು, ಶತಶತಮಾನಗಳ ಕಮಟು!*
*ಗಾಳಿ ಬೆಳಕಿಲ್ಲ, ಉಸಿರುಗಟ್ಟಿಸಿ ನುಂಗಿಬಿಡುವ ಒಳಸುಳಿ*
*ಚೀರಿ ಜಿಗಿದು ಗಾಳಿ ಬೆಳಕಿಗೆ ಎದೆ ತೆರೆದು ನೋಡಿದೆ*

*ಬುಸುಗುಡುವ ಮಂತ್ರ ಸರ್ಪಗಳ ಕಾವಲು ಅತ್ತ*
*ಭಯದಿ ಬಿಳಿಚಿಕೊಂಡ ಭಕ್ತರ ಮುಖಗಳು ಇತ್ತ*
*ಕತ್ತಲು ಕಗ್ಗತ್ತಲು ಗಾಢಾಂಧಕಾರ ಸುತ್ತಮುತ್ತ*
*ಅವಳಿಗಿಲ್ಲ ಹೃದಯ ಚಿತ್ತ; ಇದು ಕೇವಲ ಹುತ್ತ!*

ಸ್ವಾಮಿ ವಿವೇಕಾನಂದರು 'ಎಲ್ಲಿಯವರೆಗೆ ಅಜ್ಞಾನ, ಬಡತನ, ಮೂಢನಂಬಿಕೆಗಳು ಇರುತ್ತವೆಯೋ, ಪುರೋಹಿತರು ಬಡಜನರ ರಕ್ತವನ್ನು ಜಿಗಣೆಯಂತೆ ಹೀರುತ್ತಿರುವರೋ ಅಲ್ಲಿಯವರೆಗೆ ಓ ಭಾರತ ಮಾತೆ ನಿನಗೆ ದಾಸ್ಯ ತಪ್ಪದು' ಎಂದಿದ್ದಾರೆ. ದೇವಿಯ ಹುಚ್ಚರಿಗೆ ಎಂದಿಗೆ ಬಂದೀತು ಈ ಒಳ ಎಚ್ಚರ!?

ಜ. ಹೊ. ನಾರಾಯಣಸ್ವಾಮಿ

## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆ ಜಾಹಿರಾತುಗಳಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/– ಹಣ ನೀಡಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸ ಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ / ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಿಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸ ಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ.

ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

– *ಪ್ರಕಾಶಕ*

## 'ಹೊಸತು' ಪ್ರಾಯೋಜಕರಿಗೆ ಹೃತ್ಪೂರ್ವಕ ಧನ್ಯವಾದಗಳು

ನಾವು ಓದುಗರಲ್ಲಿ ಮಾಡಿಕೊಂಡ ವಿಶೇಷ ಮನವಿಗೆ ಸ್ಪಂದಿಸಿ ಆರ್ಥಿಕ ಬೆಂಬಲ ನೀಡುವ ಮೂಲಕ ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ಚಂದಾದಾರರನ್ನು ನೋಂದಾಯಿಸುವ / ಪ್ರಾಯೋಜಿಸುವ ಮೂಲಕ ನೆರವಾದ ಕೆಳಕಂಡ ಆತ್ಮೀಯ ಬಂಧುಗಳಿಗೆ 'ಹೊಸತು' ಬಳಗದ ಕೃತಜ್ಞತೆಗಳು.

1. **ಶ್ರೀ ಮುದ್ದಯ್ಯ ಡಿ,** ಬೆಂಗಳೂರು ... **ರೂ. 5,000/–** (ಆರ್ಥಿಕ ಪ್ರಾಯೋಜಕತ್ವ)
2. **ಡಾ॥ ವಿಮಲಾ ರಾಮರಾವ್,** ಬೆಂಗಳೂರು **ರೂ. 5,000/–** (ಆರ್ಥಿಕ ಪ್ರಾಯೋಜಕತ್ವ)
3. **ಡಾ॥ ಆ. ಸಂ. ಸಾಲಂಕಿ,** ಧಾರವಾಡ ... **ರೂ. 5,000/–** (ಆರ್ಥಿಕ ಪ್ರಾಯೋಜಕತ್ವ)
4. **ಶ್ರೀ ಎಂ. ಹೊನ್ನಗಂಗೇಗೌಡ,** ಬೆಂಗಳೂರು ... **ರೂ. 5,000/–** (ಆರ್ಥಿಕ ಪ್ರಾಯೋಜಕತ್ವ)
5. **ಡಾ॥ ಕೆ. ಮಧುಸೂದನ್,** ಶಿವಮೊಗ್ಗ ... **ರೂ. 5,000/–** (ಆರ್ಥಿಕ ಪ್ರಾಯೋಜಕತ್ವ)
6. **ಡಾ॥ ಎನ್. ಗಾಯತ್ರಿ,** ಬೆಂಗಳೂರು ... **ರೂ. 5,000/–** (ಆರ್ಥಿಕ ಪ್ರಾಯೋಜಕತ್ವ)
7. **ಎ. ಐ. ಟಿ. ಯು. ಸಿ.,** ಬೆಂಗಳೂರು ... **ರೂ.24,600/–** (ಚಂದಾ ಪ್ರಾಯೋಜಕತ್ವ)

'ಹೊಸತು' ಓದುಗರು, ಹಿತೈಷಿಗಳು ಮುಂದೆಯೂ ಇದೇ ರೀತಿ ಸಹಕರಿಸಿ ಪತ್ರಿಕೆಯು ಆರ್ಥಿಕವಾಗಿ ಸದೃಢಗೊಳ್ಳಲು ನೆರವಾಗ ಬೇಕೆಂದು ವಿನಮ್ರವಾಗಿ ಕೋರುತ್ತೇವೆ.

**– ಪ್ರಕಾಶಕ**








# ವರ್ಣಗಳೊಂದಿಗೆ ಅನುಸಂಧಾನಿಸುವ ಕಲಾವಿದ



'ಜಾಯ್ ಆಫ್ ಕಲರ್ಸ್' ಅನ್ನೊ ಪರಿಕಲ್ಪನೆಯೊಂದಿಗೆ ಸರಣಿ ಚಿತ್ರಗಳನ್ನು ರಚಿಸುತ್ತಿರುವ ಹುಬ್ಬಳ್ಳಿಯ ಕ್ರಿಯಾಶೀಲ ಕಲಾವಿದ ಡಾ॥ ಸಿ. ಡಿ. ಜಟ್ಟೆಣ್ಣವರ ತುಂಬಾ ತೀಕ್ಷ್ಣವಾದ ಚಲನಶೀಲತೆಯುಳ್ಳವರು.

ಇವರ ಚಿತ್ರಗಳಲ್ಲಿ ಸ್ತ್ರೀ ಸಂವೇದನೆ, ಸೌಂದರ್ಯ ಪ್ರಜ್ಞೆ, ವರ್ಣಗಳ ಲಯ, ರೇಖೆಗಳ ಓಟ, ನೆರಳು–ಬೆಳಕಿನ ಒಡನಾಟ ಹಾಗೂ ಮೂರ್ತತೆಯಲ್ಲಿಯೇ ಅಮೂರ್ತವನ್ನು, ಸಂಪ್ರದಾಯದಲ್ಲಿಯೇ ನವ್ಯತೆಯ ಛಾಯೆಯನ್ನು ನೋಡಬಹುದು.

ಸದ್ಯ ಹುಬ್ಬಳ್ಳಿಯ ಶ್ರೀ ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯದಲ್ಲಿ ಉಪನ್ಯಾಸಕರಾಗಿರುವ ಇವರು 'ಕರ್ನಾಟಕ ಚಿತ್ರಕಲಾ ಕ್ಷೇತ್ರದ ಇತ್ತೀಚಿನ ಬೆಳವಣಿಗೆಗಳು' ಎಂಬ ವಿಷಯ ಕುರಿತು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ ಡಾಕ್ಟರೇಟ್ ಪದವಿ ಪಡೆದುಕೊಂಡಿದ್ದಾರೆ. ರಾಜ್ಯ, ರಾಷ್ಟ್ರ ಮಟ್ಟದ ಹಲವು ಕಲಾ ಪ್ರದರ್ಶನ, ಶಿಬಿರಗಳಲ್ಲಿ ಪಾಲ್ಗೊಂಡು ಪ್ರಶಸ್ತಿ ಪುರಸ್ಕಾರಗಳನ್ನು ಪಡೆದಿದ್ದಾರೆ.

**– ಕೆ. ಬಿ. ವೀರಲಿಂಗನಗೌಡ್ರ, ಎಸ್.ಆರ್.ಜಿ.ಹೆಚ್.ಎಂ. ಪ್ರೌಢಶಾಲೆ**
**ಸಿದ್ದಾಪುರ–ಶಅಗ೩ಶಶ. ಉ.ಕ ಜಿಲ್ಲೆ. ದೂರವಾಣಿ – ೯ಳಳಅಗಅ೬೯೯.**






Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. 

